ಕುಸುಮ ೨ ಸ್ವತಂತ್ರ ಸಾಮಾಜಿಕ ಕಾದಂಬರಿ

# ಲೋಕದ ಕಣ್ಣು

ಕಡೆಂಗೋಡ್ಲು ಶಂಕರ ಭಟ್ಟರು

ಯು. ಆರ್. ಶೆಣೈ ಎಂಡ್ ಸನ್ಸ್,
ಸ್ಟೇಷನರಿ ಮತ್ತು ಪುಸ್ತಕ ವ್ಯಾಪಾರಿಗಳು,
ರಥಬೀದಿ, ಮಂಗಳೂರು.

ಟಿ. ಶ್ರೀಪತಿ
“ಕೃಷ್ಣ ವಿಹಾರ”
ಕದ್ರಿ ದೇವಾಲಯದ ರಸ್ತೆ
ಬಿಜಯಿ-ಮಂಗಳೂರು.

ಜುಲಾಯ್ ೧೯೪೮. ಬೆಲೆ: ರೂ. ೨-೬-೦

# ಮುಮ್ಮಾತು

"ಹೂದೋಟ"ವೆಂಬ ಪ್ರಾತಿನಿಧಿಕ ಕಥಾಸಂಗ್ರಹ ಪ್ರಕಟವಾದ ತರುಣದಲ್ಲಿಯೆ ಕನ್ನಡದ ಪ್ರಖ್ಯಾತ ಬರಹಗಾರರಾದ ಶ್ರೀ ಕಡೆಂಗೋಡ್ಲು ಶಂಕರ ಭಟ್ಟರ ಸುಂದರ ಸಾಮಾಜಿಕ ಕಾದಂಬರಿಯನ್ನು ಕನ್ನಡ ರಸಿಕರ ಮುಂದಿರಿಸುವುದಕ್ಕೆ ನಮಗೆ ಸಂತೋಷವೆನಿಸುತ್ತಿದೆ.

ಕಥೆಯ ನೂತನತೆ, ಕಾದಂಬರೀ ತಂತ್ರದ ಸಫಲತೆ, ಮನಸ್ಸಿಗೆ ತಟ್ಟುವ ಕುತೂಹಲಕಾರಿ ಘಟನಾವಳಿಗಳಿಂದ ರಸಾಲವಾದ ಶೈಲಿ, ಇವುಗಳಿಂದ ಕನ್ನಡದ ಒಳ್ಳೆಯ ಕಾದಂಬರಿಗಳಲ್ಲಿ ಈ "ಲೋಕದ ಕಣ್ಣು" ಕೂಡಾ ಒಂದು ಎಂದು ಪರಿಗಣಿತವಾಗಬಹುದೆಂದು ನಮಗೆ ವಿಶ್ವಾಸವಿದೆ. ಇಂಥ ಒಂದು ಸರಸ ಕಾದಂಬರಿಯನ್ನು ಪ್ರಕಟಿಸಡಿಸುವ ಅವಕಾಶವನ್ನಿತ್ತ ಶ್ರೀ ಶಂಕರ ಭಟ್ಟರಿಗೆ ಕೃತಜ್ಞತೆಗಳನ್ನು ಒಪ್ಪಿಸಬೇಕು.

ಈ ಕಾದಂಬರಿಯನ್ನು ಕನ್ನಡದ ಜನ ಆದರದಿಂದ ಬರಮಾಡಿಕೊಂಡು ಪ್ರೋತ್ಸಾಹವಿತ್ತರೆ ನಾನು ಪ್ರಕಟಿಸಬೇಕೆಂದಿರುವ ಇತರ ಪುಸ್ತಕಗಳ ಪ್ರಕಾಶನಕ್ಕೆ ಧೈರ್ಯ ಬರುತ್ತದೆ.

"ಕೃಷ್ಣ ವಿಹಾರ"
ಮಂಗಳೂರು
೧ ಜುಲಾೖ ೧೯೪೮

ಟಿ. ಶ್ರೀಪತಿ.

Checked 1965
Checked 1960

# ಲೋಕದ ಕಣ್ಣು

## ೧

ಡಾ. ನಾಗೇಶರಾಯರ ಚಿಕಿತ್ಸಾಭವನದ ಕಚೇರಿ. ಔಷಧಕ್ಕಾಗಿ ಬಂದ ರೋಗಿಗಳಾರೂ ಇರಲಿಲ್ಲ. ಡಾಕ್ಟರರು ತಮ್ಮ ಕುರ್ಚಿಯಲ್ಲಿ ಸುಖಾಸೀನರಾಗಿ ಕಾಲನ್ನು ಉದ್ದಕ್ಕೂ ಚಾಚಿ ಯಾವುದೋ ಒಂದು ಗ್ರಂಥವನ್ನು ಓದುತ್ತಿದ್ದಾರೆ. ಸಾಯಂ ಘಂಟೆ ಒಂಬತ್ತಾಗಿರಬಹುದು. ಒಬ್ಬ ಪರಿಚಾರಕನು ಮಾತ್ರ ದೂರದಲ್ಲಿ ಒಂದು ಕಾಲ್ಮಣೆಯಲ್ಲಿ ಕುಳಿತಿದ್ದಾನೆ.

ಪ್ರಭಾಕರ–ಕಾಮಾಕ್ಷಿಯರ ಸವಾರಿ ಆಗತಾನೇ ಅಲ್ಲಿಗೆ ಬಂತು. ಡಾಕ್ಟರರ ಅತಿ ಪರಿಚಿತರಾದ ಕಾರಣ ಹೆಚ್ಚಿನ ಉಪಚಾರೋಕ್ತಿಗಳಿಲ್ಲದೆ ಅವರಿಬ್ಬರೂ ಆಸನಗಳನ್ನು ಹಿಡಿದರು. ಡಾಕ್ಟರರು ಸಾವಕಾಶವಾಗಿ ಇವರ ಕಡೆಗೆ ಮುಖತಿರುಗಿಸುತ್ತಾ "ಕ್ಷಮಿಸಿರಿ; ಪುಸ್ತಕ ಓದುವುದರಲ್ಲಿ ಮಗ್ನನಾಗಿದ್ದೆ. ನೋಡಿ ಎಷ್ಟು ಚೆನ್ನಾಗಿ ಬರೆದಿದ್ದಾನೆ ಕಾರ್ಲ್ ಮಾರ್ಕ್ಸ್? ಧನ ಎಂದರೇನು? ಧನಿಕನೆಂದರೆ ಯಾರು? ಕಾರ್ಮಿಕರಿಗೆ ಸಮಾಜವ್ಯವಸ್ಥೆಯಲ್ಲಿ ಯಾವ ಸ್ಥಾನವಿರಬೇಕು? ಎಂಬುವನ್ನು ತರ್ಕಬದ್ಧವಾಗಿ ಚಿಕ್ಕ ಮಕ್ಕಳೂ ತಿಳಿಯುವಂತೆ ಬರೆದಿದ್ದಾನೆ. ಇವನ ವಿಚಾರ ಲಹರಿ ಎಷ್ಟು ಮನೋಹಾರಿಯಾಗಿದೆ? ನಿಮ್ಮಂತಹ ಸಂಪಾದಕರು ಇಂತಹ ಪುಸ್ತಕಗಳನ್ನು ಓದಲೇ ಬೇಕು ಅಥವಾ ಓದಿರಬಹುದು" —ಎಂದು ಪ್ರಾಸ್ತಾವಿಕವಾಗಿ ನುಡಿದು "ವಿಶೇಷವೇನು?" ಎಂದು ಪ್ರಶ್ನಿಸಿದರು.

ಪ್ರಭಾಕರ ಕಾಮಾಕ್ಷಿಯರ ಮನಸ್ಸಿನಲ್ಲಿ ಮಾರ್ಕ್ಸ್‌ನೂ ಇರಲಿಲ್ಲ. ಅವನ ಸಮತಾವಾದವೂ ಇರಲಿಲ್ಲ. ಸದ್ಯಕ್ಕೆ ಪ್ರಪಂಚ ಮುಳುಗಿದರೂ ಚಿಂತೆಯಿಲ್ಲ; ತಮ್ಮ ಉಪಸಂಪಾದಕ ಶ್ಯಾಮಣ್ಣನ ಜೀವ ಉಳಿಯ

ಬಹುದೇ ? ಎಂದು ಕೇಳುವ ಪ್ರಶ್ನೆಯೊಂದೇ ಅವರ ಮುಖಭಾವದಿಂದ ಎದ್ದು ಬರುತ್ತಿತ್ತು.

" ಹೇಗಿದ್ದಾನೆ ರೋಗಿ ? " ಎಂದು ಪ್ರಭಾಕರ ಪ್ರಶ್ನಿಸಿದ.

" ಇದ್ದಾನೆ . . ಇ . . ದ್ದಾ . . ನೆ . . " ಎಂದು ಡಾಕ್ಟರರ ಉತ್ತರ ಬಂತು.

" ಆಸೆ ಯಿದೆಯೆ ? "

" ಆಸೆ ಇಲ್ಲವೆಂದು ಸಿದ್ಧಾಂತವಾಗುವವರೆಗೆ ಇದೆ "

" ಪ್ರಜ್ಞೆಯಿದೆಯೆ ? "

" ಇರಲಿಲ್ಲ . . ಈಗ ಪ್ರಪಂಚವನ್ನು ಕಣ್ಣುಬಿಟ್ಟು ನೋಡುತ್ತಾನೆ. ಆ ಕಣ್ಣುಗಳಲ್ಲಿ ಚೈತನ್ಯದ ಕಳೆ ಮಿಂಚುವಹಾಗೂ ತೋರುತ್ತದೆ."

" ಎಂದರೆ ಗುಣಮುಖವಾಗಿದೆ ರೋಗ; ಎಂದಲ್ಲವೆ ಅರ್ಥ ? "

" ಅಷ್ಟು ಬೇಗನೆ ಅರ್ಥ ಮಾಡಿಕೊಳ್ಳ ಬರುವುದಿಲ್ಲ ನೋಡಿ . . ಈ ರೋಗ ಚಿಹ್ನೆಯೇ ಅದು . . ಒಮ್ಮೆ ಗುಣವಾದಂತೆ ತೋರುವುದು . . ಮತ್ತೆ ವಿಷಮವಾಗುವುದು . . "

" ಶ್ಯಾಮಣ್ಣ ಬದುಕುತ್ತಾನೆ, ಎಂದು ಬಿಡಿ; ನಮ್ಮ ಆತ್ಮಕ್ಕೆ ಅಲ್ಪ ಸಮಾಧಾನವಾದರೂ ದೊರೆಯಬಹುದು. "

" ಹತ್ತೆಂಟು ವರ್ಷಗಳ ಅನುಭವವಿಲ್ಲದ ಡಾಕ್ಟರನಾಗಿರುತ್ತಿದ್ದರೆ ನಾನು ಆ ಭರವಸೆ ಕೊಡುತ್ತಿದ್ದೆ. ಅನುಭವವು ಹೇಡಿತನವನ್ನು ಹೆಚ್ಚಿಸುತ್ತದೆ. "

" ರೋಗವಾದರೂ ಏನೆಂದು ತಿಳಿಯಿತೆ ? "

" ರೋಗ . . ಆ ವಿಷಯದಲ್ಲಿ ಸಂದೇಹವಿಲ್ಲ. ಮೈಯಲ್ಲಿ ರಕ್ತ ಮಾಂಸ ಬಲವಿರುವವರನ್ನು ದ್ವೇಷಿಸುವ ರೋಗ. ಪ್ರಾಯವನ್ನು ಸಹಿಸ ಲಾರದ ರೋಗ. ಔಷಧಗಳ ಪ್ರಾಬಲ್ಯಕ್ಕೆ ಬಾಗಲಾರದ ರೋಗ . . ದೈವ ವಿಶ್ವಾಸವುಳ್ಳವರು ಹೇಳುತ್ತಾರಲ್ಲ . . ಹಾಗೆ ಬ್ರಹ್ಮ ಬರೆದ ಆಯುರ್ಬಲ ವಿದ್ದರೆ ಮಾತ್ರ ರೋಗಿಯನ್ನು ಉಳಿಯಬಿಟ್ಟು ಬೀಳ್ಕೊಳ್ಳುವ ಸನ್ನಿಪಾತ."

ಸಂನಿಪಾತ ಎಂದೊಡನೆ ಕಾಮಾಕ್ಷಿಯ ಎದೆ ಬೆಚ್ಚಿ ಬಿದ್ದಿತು. ತನ್ನ ಅಣ್ಣನೊಬ್ಬ ಎಳೆಯ ವಯಸ್ಸಿನಲ್ಲಿಯೆ ಈ ಲೋಕವನ್ನು ಬಿಟ್ಟುಹೋದ

ಚಿತ್ರ ಅವಳ ಮನೋದೃಷ್ಟಿಯ ಮುಂದೆ ನಿಂತಿತು. ಮುಖದಲ್ಲಿ ಕತ್ತಲೆ ಕವಿಯಿತು; ಎರಡು ತಟಕು ಕಣ್ಣೀರೂ ಬಿದ್ದಿರಬಹುದು.

ಡಾಕ್ಟರರು ಇದನ್ನು ಕಾಣದಿರಲಿಲ್ಲ. "ಮಿಸ್ಟರ್ ಪ್ರಭಾಕರ! ನೋಡು ನಮ್ಮ ಕಾಮಾಕ್ಷಿಗೆ ಈ ರೋಗದ ಪರಿಚಯ ತುಂಬ ಇದೆ. ಪಾಪ! ಎಂತಹ ದೇಹವದು; ಎಂತಹ ಭವ್ಯ ರೂಪ....ಎಳೆ ವಯಸ್ಸು.... ಹದಿನೆಂಟೋ ಇಪ್ಪತ್ತೋ....ಈಕೆಯ ಅಣ್ಣ ಶ್ಯಾಮಸುಂದರ ಆ ಸುಖಮಯ ಸಂಸಾರವನ್ನು ಬಿಟ್ಟು ಪರಲೋಕಕ್ಕೆ ಪ್ರಯಾಣ ಬೆಳೆಸಿದ. ಡಾಕ್ಟರರು ಇರಲಿಲ್ಲವೆ? ಶುಶ್ರೂಷೆ ಚೆನ್ನಾಗಿರಲಿಲ್ಲವೆ? ಯಾವುದು ಇರಲಿಲ್ಲ....? ಈ ರೋಗದ ಮಹಿಮೆಯಿದು–ಕೊನೆಯ ವರೆಗೂ ಆಳಿವುಳಿವುಗಳ ಸೂಚನೆ ಕೊಡದಿರುವುದು!"

ಚುಟುಕಾಗಿ ಹೇಳಬೇಕಾದುದನ್ನು ಬಣ್ಣ ಬಿತ್ತರದಿಂದ ಅಭ್ಯಾಸಿಸುವುದು ನಾಗೇಶರಾಯರ ಕ್ರಮವೆಂಬುದನ್ನು ತಿಳಿದಿದ್ದ ಗಂಡಹೆಂಡಿರು "ಡಾಕ್ಟರ್ ಸಾಹೇಬರೆ....ನಿದ್ದೆಯಿಲ್ಲದೆ ಮೂರು ವಾರಗಳಾದುವು. ಈ ರಾತ್ರಿಯಲ್ಲಾದರೂ ರೆಪ್ಪೆಗೆ ರೆಪ್ಪೆ ಕೂಡಬೇಕೆ? ಬೇಡವೆ? ಎಂಬುದನ್ನು ತಿಳಿದು ಹೋಗುವುದಕ್ಕಾಗಿ ಬಂದಿದ್ದೇವೆ" ಎಂದು ಬೇಡಿಕೊಂಡರು.

"ಸುಖವಾಗಿ ನಿದ್ರಿಸಿರಿ. ನೀವು ನಿದ್ದೆಗೆಟ್ಟರೆ ಈ ರೋಗ ಗುಣವಾಗುವುದೆಂದಿದ್ದರೆ ಆ ಮದ್ದೊಂದನ್ನೆ ಉಪದೇಶಿಸಿ ಬಿಡುತ್ತಿದ್ದೆ. ನಿದ್ದೆಕೆಡಬಹುದು; ಹುಚ್ಚು ಹಿಡಿಸಿಕೊಳ್ಳಬಹುದು. ರೋಗ ವಾಸಿಯಾಗುವಂತಿಲ್ಲ. ಯುದ್ಧದ ಪರಿಭಾಷೆಯಲ್ಲಿ ಹೇಳಬಹುದಾಗಿದ್ದರೆ ಇದು ಕಂದಕಕದನ. ಶತ್ರುವಾದ ರೋಗವು ಶರೀರದ ಅಂಗಾಂಗಗಳಲ್ಲಿ ಕಂದಕಕಡಿದು ಅಡಗಿ ನಿಂತು ಕಾಳಗ ಹೂಡುತ್ತಿದೆ. ಡಾಕ್ಟರರಾದರೂ ಸಮಯ ಸಂದರ್ಭಗಳನ್ನು ತಿಳಿದು ಎಚ್ಚರದಲ್ಲಿದ್ದು ಉಚಿತ ಕಾಲದಲ್ಲಿ ಯೋಗ್ಯವಾದ ಔಷಧದ ಶಸ್ತ್ರ ಹಿಡಿದು ಅದರ ನೆಲೆ ತಪ್ಪಿಸಬೇಕಾಗುತ್ತದೆ....ಆ ಕೆಲಸ ಮಾಡುತ್ತಲೇ ಇದ್ದೇನೆ....ಸುಖವಾಗಿ ನಿದ್ರಿಸಿರಿ....ಗೊರಕೆ ಹೊಡೆಯುತ್ತಾ ನಿದ್ರಿಸಿರಿ.... ನಿದ್ದೆಕೆಡಿಸುವ ಕೆಲಸವನ್ನು ನನಗೇ ಬಿಡಿ" ಎಂದ ನಾಗೇಶರಾಯ.

"ರೋಗಿಯನ್ನೊಮ್ಮೆ ನೋಡಬಹುದೇ?" ಎಂದು ಕೇಳಿದ ಪ್ರಭಾಕರ.

"ಓಹೊ....ನೋಡಬಹುದು. ಸಮೀಪ ನಿಂತು ನೋಡಬಹುದು. ಆದರೆ ಆತನ ಕೂಡೆ ಸಂಭಾಷಿಸಬಾರದು. ಈ ನಿರ್ಬಂಧ ಹಾಕಿ ರೋಗಿಯ ಕೋಣೆಗೆ ಪ್ರವೇಶ ಕೊಡಬಹುದು. ಬನ್ನಿ....ನೋಡಿರಿ.... ಕಣ್ಣಿನ ಭಾಷೆಯಲ್ಲಿ ಏನೇನೋ ಮಾತಾಡುವಂತೆ ಸನ್ನೆ ಮಾಡುತ್ತಿದ್ದಾನೆ.... ಅದಕ್ಕೆ ಅರ್ಥ ಮಾಡುವ ಗೊಡವೆ ಬೇಡ. ಹತ್ತಾಗಿದ್ದ ರೋಗ ಈಗ ಒಂಬತ್ತುವರೆಯಾದಂತೆ ಭಾಸವಾಗುತ್ತದೆ. ನೋಡಿ ಸಾಧ್ಯವಾದರೆ ಮನಸ್ಸಿಗೆ ಧೈರ್ಯ ತಂದುಕೊಳ್ಳಿ. ಇದುವರೆಗೆ ಧೈರ್ಯದ ಪ್ರಶ್ನೆಯೇ ಇರಲಿಲ್ಲ; ಆದುದರಿಂದ ಕೋಣೆಯ ಹೊರಗೇ ನಿಂತು ಇಣಿಕಬೇಕಾಗಿತ್ತು. ಈಗ ಒಳಗೆ ಪ್ರವೇಶಿಸಬಹುದು"—ಎಂದ ಡಾಕ್ಟರರ ಮಾತು ಇಬ್ಬರಲ್ಲಿಯೂ ನಿಟ್ಟುಸಿರಿಗೆ ಕಾರಣವಾಯಿತು. ಈ ಉಸಿರನ್ನು ಒಳಗೆ ಎಳೆದುಕೊಂಡಾಗ ಶ್ಯಾಮಣ್ಣನ ಬದುಕಿನ ವಿಷಯದ ಅಲ್ಪಾಶೆಯನ್ನೂ ಒಳಗೆ ಎಳೆದುಕೊಂಡರು.

ನಾಗೇಶರಾಯನ ಚಿಕಿತ್ಸಾ ಭವನವು ವಿಶಾಲವಾದ ಬಯಲಿನಲ್ಲಿ ಅಚ್ಚುಕಟ್ಟಾಗಿ ರಚಿತವಾಗಿತ್ತು. ಅಂತೇವಾಸಿಗಳ ಬಗೆಗಾಗಿ ಬೇರೆ ಕೆಲ ಕೋಣೆಗಳಿದ್ದುವು. ಸಾಂಕ್ರಾಮಿಕ ರೋಗ ಹಿಡಿದವರ ವಾಸಭವನವು ಸ್ವಲ್ಪ ದೂರದಲ್ಲಿ—ವಿಶೇಷವಾದ ಚಿಕಿತ್ಸಾ ಸೌಕರ್ಯಗಳಿಂದ ಕೂಡಿದ್ದಿತು. ನಾಗೇಶರಾಯನಲ್ಲಿ ಮಾಯಕವಿರಲಿಲ್ಲ. ಮಂತ್ರವಿರಲಿಲ್ಲ. ಉಪಚಾರದ ಆಡಂಬರ, ಕಟ್ಟುನಿಟ್ಟು, ಅತಿಶಯೋಕ್ತಿ—ಇವುಗಳೇ ಅವನ ಚಿಕಿತ್ಸಾಕ್ರಮದ ಮುಖ್ಯಾಂಶಗಳು. ಹೆಣದಂತೆ ಬಂದುಬಿದ್ದವರು ಸಜೀವ ಮನುಷ್ಯರಾಗಿ ತಮ್ಮ ಭವನದಿಂದ ಹೊರಟು ಹೋಗುತ್ತಾರೆ....ಅಂತಹ ಇಂದ್ರಜಾಲವು ತನ್ನ ಈ ಉಪಚಾರಗೃಹದಲ್ಲಿ ಹಗಲಿರುಳು ನಡೆಯುತ್ತಿದೆ....ಎಂಬುದನ್ನು ಸಾರಿ ಹೇಳುವುದಕ್ಕೆ ಎಂಬಂತೆ ಆತ ರೋಗಿಗಳಿಗೆ, ಅವರ ಸಂಬಂಧಿಗಳಿಗೆ, ಹೋಗಿ ಬರುವವರಿಗೆ, ನೋಡಿ ಮಾತಾಡುವವರಿಗೆ—ಕೊನೆಯಿಲ್ಲದ ನಿರ್ಬಂಧಗಳನ್ನು ಹಾಕುತ್ತಿದ್ದ. ವಿಈಧ ಚೆನ್ನಾಗಿ ಫಲಕೊಡುತ್ತಲೂ ಇತ್ತು.

ಒಳ ದನಿಯಲ್ಲಿ ಮಾತಾಡುತ್ತಾ ಆ ಮೂವರು ಶ್ಯಾಮಣ್ಣನ ಕೋಣೆಯ ಕಡೆಗೆ ನಡೆದರು. ವಿಶಾಲವಾದ ಕೋಣೆಯ ಒಂದು ಪಕ್ಕದಲ್ಲಿ ಮಂಚದ ಮೇಲೆ ಹಾಸಿದ್ದ ಹಾಸಿಗೆಯ ಮೇಲೆ ಶ್ಯಾಮಣ್ಣನ ತೇಜೋಹೀನವಾದ ಶರೀರ ಬಿದ್ದುಕೊಂಡಿತ್ತು. ಕೋಣೆಯೊಳಗೆ ಶೋಭಾರಚನೆ ಚೆನ್ನಾಗಿತ್ತು. ಒಂದೆರಡು ಪುಷ್ಪ ಪಾತ್ರಗಳು; ಗೋಡೆಯಲ್ಲಿ ಶಾಂತ ಪ್ರಕೃತಿಯ ಸುಂದರ ಚಿತ್ರಗಳು; ಅಲ್ಲೇ ಮೇಜಿನ ಮೇಲೆ ಔಷಧದ ಸೀಸೆಗಳು; ಕೆಳಗೆ ಪಾತ್ರೋಪಕರಣಗಳು. ಸ್ವಲ್ಪ ದೂರದಲ್ಲಿ ಕುರ್ಚಿಯ ಮೇಲೆ ದಾದಿಯೊಬ್ಬಳು ಚೊಕ್ಕಟವಾದ ಉಡಿಗೆತೊಡಿಗೆಯನ್ನು ಧರಿಸಿ ಪ್ರಸನ್ನ ಮುಖಭಾವದಿಂದ ರೋಗಿಯ ಕಡೆಗೇ ದೃಷ್ಟಿಯಿಟ್ಟು ಕುಳಿತಿದ್ದಳು. ಕೋಣೆಯ ಹತ್ತಿರಕ್ಕೆ ಬಂದಂತೆ, ಪಾದರಕ್ಷೆಗಳ ಸದ್ದಾಗದಂತೆ ಜಾಗ್ರತೆ ವಹಿಸಿ ಡಾಕ್ಟರನು ದಾದಿಯನ್ನುದ್ದೇಶಿಸಿ ಸಣ್ಣ ಧ್ವನಿಯಲ್ಲಿ "ಇಂದು ಪ್ರಕೃತಿ ಹೇಗಿದೆ?" ಎಂದು ಕೇಳಿದನು.

"ಸ್ವಲ್ಪ ಸುಧಾರಿಸಿದಂತೆ ತೋರುತ್ತದೆ!"

"ಇನ್ನೂ ಚಿಕ್ಕ ಸ್ವರದಲ್ಲಿ ಮಾತಾಡು!" ಎಂದು ದಾದಿಗೂ ಅಪ್ರತ್ಯಕ್ಷವಾಗಿ ಈ ಇಬ್ಬರು ಆಗಂತುಕರಿಗೂ ಡಾಕ್ಟರ್ ನಾಗೇಶರಾಯನು ಎಚ್ಚರಕೊಟ್ಟ.

ದಾದಿ ಮುಂದುವರಿಸಿದಳು; "ಒಂದೆರಡು ಬಾರಿ ಏನೋ ಮಾತಾಡುವುದಕ್ಕೆ ಎಂಬಂತೆ ನನ್ನ ಕಡೆಗೆ ಮುಖ ತಿರುಗಿಸಿದರು. ಮಾತು ನಾಲಗೆಯ ಮೇಲೆ ತೇಲಿ ಬರಲು ಯತ್ನಿಸುತ್ತಿತ್ತು; ಸುಮ್ಮನೆ ಮಲಗಿಕೊಳ್ಳಿ; ಚೆನ್ನಾಗಿ ವಿಶ್ರಾಂತಿಪಡೆಯಿರಿ. ಎಂದು ಹೇಳಿದೆ. ಅವರು ಮಾತಾಡುವುದಕ್ಕೆ ಯತ್ನಿಸಿದುದನ್ನು ಇಂದೇ ಕಂಡೆ!"

"ಚೆನ್ನಾಯಿತು; ಆಗಬೇಕಾದಂತೆಯೇ ಆಯಿತು. ಜಾಗ್ರತೆಯಿಂದಿರು. ರಾತ್ರಿ ಅತ್ತಿತ್ತ ಅಲುಗಾಡದಂತೆ ನೋಡಿಕೊ. ಘಂಟೆಗೆ ಸರಿಯಾಗಿ ಮದ್ದು ಕೊಡು. ನಾಡಿಯನ್ನು ಪರೀಕ್ಷಿಸು. ಜ್ವರವನ್ನು ನೋಡು. ಮೂಸುಂಬಿ ಕಿತ್ತಳೆ ರಸಗಳನ್ನು ಧಾರಾಳವಾಗಿ ಕೊಡು." ನಾಗೇಶ ಹೀಗೆ ಹತ್ತೆಂಟು ಆಜ್ಞೆಗಳನ್ನು ಕೊಟ್ಟು ಒಮ್ಮೆ ಕಾಮಾಕ್ಷಿಯ

ಕಡೆಗೆ ಮತ್ತೊಮ್ಮೆ ಪ್ರಭಾಕರನ ಕಡೆಗೆ ದೃಷ್ಟಿ ಹೊರಳಿಸಿದ. ಮೃತ್ಯುವಿನೊಡನೆ ಖಾಡಾಖಾಡಿ ಹೋರಾಡಿ ಒಂದು ಜೀವವನ್ನು ಹಿಂದೆ ತರುವುದು ಎಂತಹ ಘೋರ ಕಾರ್ಯ! ಎಂಬುದನ್ನು ಅವರಿಬ್ಬರೂ ತಿಳಿವಂತೆ ಆಡಿದ.

ಹಾಸಿಗೆಯ ಬಳಿಯಲ್ಲಿ ಎರಡು ಕುರ್ಚಿಗಳನ್ನು ಆ ದಾದಿ ತಂದಿಟ್ಟಳು. ಡಾಕ್ಟರನಿಗೆ ಕುಳಿತು ಕುಳಿತು ಬೆನ್ನು ನೋವಾಗಿದೆ; ಕುಳಿತುಕೊಳ್ಳುವುದಕ್ಕೆ ಒಪ್ಪದೆ ಕೋಣೆಯುದ್ದಕ್ಕೂ ಓಡಾಡುತ್ತಿದ್ದ. ಕಾಮಾಕ್ಷಿ—ಪ್ರಭಾಕರರು ಆ ಕುರ್ಚಿಯಲ್ಲಿ ಕುಳಿತುಕೊಂಡು ಒಂದು ನಿಮಿಷ ಶ್ಯಾಮಣ್ಣನ ಮುಖವನ್ನೆ ಪರಿಕಿಸುತ್ತಿದ್ದರು.

ಕೋಣೆಯೊಳಗೆ ಬಂದ ಈ ವ್ಯಕ್ತಿಗಳ ಕಾಲಸದ್ದಿನಲ್ಲಿಯೂ ರೋಗಿಯ ಕಿವಿಗೆ ಪ್ರೀತಿಯ ಧ್ವನಿಯೇ ಹೊಡೆಯಿತು. ವಿಸ್ಮೃತಿಯಲ್ಲಿ ಹೂತುಹೋಗಿದ್ದ ಮನಸ್ಸನ್ನು ಎಚ್ಚರಿಸಿತು. ಆಯಾಸದೊಡನೆ ಹೋರಾಡಿ ಗೆದ್ದುಬಂದ ಮನಸ್ಸು ಕಣ್ಣಿನಲ್ಲಿ ಸಂತೋಷದ ಕಳೆಯನ್ನು ಹೊಮ್ಮಿಸಿತು. ಎಣ್ಣೆಯಾರಿದ ದೀಪದ ಬತ್ತಿಯಂತೆ ಕರಿಕಿಹೋಗಿದ್ದ ಮುಖದ ಮೇಲೆ ನಗುವೊಂದು ಮೂಡಿ ಅರಳಿತು. ಇವರ ಮುಖದ ಮೇಲೆ ಅವನ ದೃಷ್ಟಿ ಊರಿದಂತೆಯೂ ತೋರಿತು. ಇದುವರೆಗೆ ಇಲ್ಲದ ಜೀವದ ಚಟುವಟಿಕೆ ಈಗ ಕಾಣಿಸಿಕೊಂಡಿತು.

"ಶ್ಯಾಮಣ್ಣನವರೇ! ಬೇಗನೆ ಹುಷಾರಾಗುತ್ತೀರಿ!" ಎಂದಿಬ್ಬರೂ ಅಭಯಕೊಟ್ಟರು.

"ಹೌದು" ಎಂದು ಒಪ್ಪಿಕೊಳ್ಳುವಂತೆ ಅವನ ಗಂಟಲಿನಿಂದ ಏನೋ ಒಂದು ಅವ್ಯಕ್ತ ಧ್ವನಿಯೂ ಹೊರಟಿತು.

ಡಾಕ್ಟರ್ ನಾಗೇಶನಿಗೆ ಕೆಮ್ಮು ಬಂತು. ಕಾಮಾಕ್ಷಿ—ಪ್ರಭಾಕರರ ದೃಷ್ಟಿ ಸೆಳೆಯುವಷ್ಟು ಪ್ರಬಲವಾಗಿ ಕೆಮ್ಮು ಬಂತು. ಅವರ ದೃಷ್ಟಿ ಬಿದ್ದೊಡನೆ ನಾಲಗೆಯನ್ನು ಕಚ್ಚಿಕೊಂಡ. ಮಾತಾಡಬಾರದು—ಎಂಬ ಹುಕುಂ ಆ ಸ್ವರೂಪವನ್ನು ಹೊಂದಿತ್ತು. ತಾವು ಮಾಡಬಾರದುದನ್ನು ಮಾಡಿದೆವು ಎಂಬ ಜ್ಞಾನೋದಯವು ಇಬ್ಬರಿಗೂ ಆದೊಡನೆ ನಾಗೇಶ ಅವರ ಸಮೀಪಕ್ಕೆ ಬಂದು "ನನ್ನನ್ನು ತಪ್ಪಾಗಿ ತಿಳಿಯಬೇಡಿ; ವೈದ್ಯ

ಸಂಪ್ರದಾಯವನ್ನು ಅರಿಯದವರು ರೋಗಿಗಳ ಬಳಿಯಲ್ಲಿರಬಾರದು—ಎನ್ನುವುದಕ್ಕೆ ಇದೇ ಸಾಕ್ಷಿ ನೋಡಿ. ಪ್ರೇಮ-ಸ್ನೇಹ-ಸಲಿಗೆಗಳೆಂದರೆ ಏನೆಂಬುದನ್ನು ಅರಿಯದವರಲ್ಲ ಡಾಕ್ಟರರೆಂದರೆ. ಆದರೆ ಸಂದರ್ಭ ವಶಾತ್ ಅದನ್ನೆಲ್ಲ ಮರೆಯಬೇಕಾಗುತ್ತದೆ; ಎಂಬುದನ್ನು ಡಾಕ್ಟರರು ಮಾತ್ರ ತಿಳಿದಿರುತ್ತಾರೆ; ಇತರರು ತಿಳಿದಿರುವುದಿಲ್ಲ" ಎಂದ. ಇಬ್ಬರೂ ತಮ್ಮ ಮಹಾಪರಾಧವನ್ನು ಒಪ್ಪಿಕೊಂಡರು ; ಮತ್ತೆ ಮೌನವಾಗಿರುವುದಕ್ಕೆ ಸಮ್ಮತಿಸಿದರು.

ಡಾಕ್ಟರ್ ನಾಗೇಶ ಮಾತಾಡುತ್ತಲೆ ಇದ್ದ: "ಇದು ಇಲ್ಲಿಗೆ ಮುಗಿಯಿತೆಂದು ಭಾವಿಸಬೇಡಿ. ವೈದ್ಯ ವಿಜ್ಞಾನಕ್ಕೆ ಒಂದು ವಿಜಯ ವಾಯಿತು. ಆಗಬಹುದೆಂದು ನಾನೇ ಭಾವಿಸಿರಲಿಲ್ಲ. ದೇವರನ್ನು ನಂಬುವುದಕ್ಕಿಂತ ಹೆಚ್ಚಾಗಿ ಶಾಸ್ತ್ರವನ್ನು ನಂಬಿದೆ; ಆರಾಧಿಸಿದೆ. ಅದರ ಫಲವನ್ನಿಲ್ಲಿ ಈಗ ಕಾಣುತ್ತೀರಿ. ಹೆಣದಂತೆ ನಿರ್ಜೀವವಾಗಿ ಬಿದ್ದಿದ್ದ ಈ ಶರೀರದಲ್ಲಿ ಈಗ ಪ್ರಾಣವಾಯುವಿನ ಸಂಚಾರವಾಗುತ್ತಿದೆಯಲ್ಲ! ಇದು ಪ್ರಥಮ ವಿಜಯ. ಇನ್ನು ದಿನೇ ದಿನೇ ರೋಗವು ಹಿಮ್ಮೆಟ್ಟಬೇಕು. ಒಂದೊಂದೇ ಕಂದಕದಿಂದ ಪಲಾಯನಮಾಡಿ ತಲೆ ಮರಸಬೇಕು. ಅದು ದ್ವಿತೀಯ ವಿಜಯ. ರೋಗಿ ಎದ್ದು ಕುಳಿತುಕೊಂಡು ಇಲ್ಲಿಯೇ ಕೋಣೆ ಯೊಳಗೆ ಹಜ್ಜೆಯಿಡುವಂತಾಗಬೇಕು. ಜ್ಞಾನೇಂದ್ರಿಯಗಳು ಈಗ ಹಿಡಿದ ಮುಷ್ಕರವನ್ನು ಬಿಟ್ಟು ಕೆಲಸಮಾಡುವುದಕ್ಕೆ ತೊಡಗಬೇಕು. ಅಂದು....ಆ "ಅಂದು" ಎಷ್ಟು ತಿಂಗಳ ಅನಂತರ ಬರುವುದೋ ಹೇಳ ಲಾರೆ.... ಈತ ಸ್ಥಾನಾಂತರ ಹೊಂದಬಹುದು. ಅದು ತೃತೀಯ ವಿಜಯ.... ಇಷ್ಟಾದ ಮೇಲೆ ಈತ ಎಲ್ಲಿ ವಾಸಿಸುತ್ತಾನೆ ? ಆರೈಕೆ ಹೇಗೆ ನಡೆಯುವುದು? ಎಂಬುದರಲ್ಲಿ ಚತುರ್ಥ ವಿಜಯವು ಅವಲಂಬಿಸಿಕೊಂಡಿದೆ—" ಇಷ್ಟು ಹೇಳಿ ನಾಗೇಶ ಸ್ವಲ್ಪ ತಡೆದ. ತಾವು ಆಡುವುದು ಮಹಾಪರಾಧ ವಾದುದರಿಂದ ಇಬ್ಬರೂ "ಹುಂ" ಎಂದಿಷ್ಟೆ ಉತ್ತರಕೊಟ್ಟರು. ನಾಗೇಶ ಹೇಳುತ್ತಾ ಇದ್ದ.

"ನಾನೀಗ ಮುಖ್ಯ ಪ್ರಶ್ನೆಯನ್ನು ಎತ್ತಿ ಮಾತಾಡುತ್ತೇನೆ. ಈತನಿಗೆ ಇನ್ನು ದೀರ್ಘಕಾಲದ ವರೆಗೆ....ಸುದೀರ್ಘಕಾಲದ ವರೆಗೆ....ಸ್ವಯಂಪಾಕ

ಸಲ್ಲದು....ಶ್ರಮ ಸಲ್ಲದು....ಕಲ್ಲು ತಿಂದು ಬದುಕಿದ ಜೀವವಿದು....ಇನ್ನು ಅಮೃತಾನ್ನ ತಿನ್ನಬೇಕು. ಪೌಷ್ಟಿಕವಾದ ಆಹಾರ ಸೇವನೆ....ಲಘು ಸಂಚಾರ....ವಿಹಾರ....ವಿನೋದ .... ಮನೋರಂಜನೆ .... ಮೊದಲಾದ ಆ ವ್ಯಾಯಾಮದಿಂದ ಮಾತ್ರ ಈತನ ಶರೀರಕ್ಕೆ ಮಾಂಸ ಕೂಡೀತು. ಬತ್ತಿದ್ದ ನೆತ್ತರಿನ ಊಟೆ ಪುನಃ ಒಸರೀತು. ಜಾಗ್ರತೆ! ಜಾಗ್ರತೆ...."

ಪ್ರಭಾಕರ ಮತ್ತೊಮ್ಮೆ ಹುಂ....ಎಂದ.

"ಹುಟ್ಟಿದಂದಿನಿಂದ ವತ್ಸಲ ಹೃದಯಗಳನ್ನು ಕಾಣದ ಜೀವವಿದು; ಮೃದು ಸ್ಪರ್ಶದ ಕೈಗಳಿಂದ ಸೇವೆ ಮಾಡಿಸಿಕೊಳ್ಳದ ಒಡಲಿದು....ಮನೆ ಯೆಂಬ ಗೂಡನ್ನು ಕಂಡರಿಯದ ಹಕ್ಕಿಯಿದು. ಮತ್ತೊಮ್ಮೆ ಇದನ್ನು ಬೀದಿಯಲ್ಲಿ ಎಸೆದರೆ ಏನಾಗುವುದೋ ಹೇಳಲಾರೆ."

"ಇದು ಅಮೂಲ್ಯ ಜೀವ....ನಮ್ಮ ಪತ್ರಿಕೆಯ ಜೀವದ ಜೀವ" ಎಂದು ಪ್ರಭಾಕರ ಧೈರ್ಯದಿಂದ ಉದ್ಗರಿಸಿದ.

"ದೊಡ್ಡ ಧ್ವನಿಯಲ್ಲಿ ಆಡಬೇಡಿರಿ ರಾಯರೆ....ಇಳಿ ನುಡಿಯಲ್ಲಿ ಮಾತಾಡಿ....ನಾನು ಹೇಳತಕ್ಕ ವಿಚಾರವೇನೆಂದರೆ, ಇನ್ನು ದೀರ್ಘಕಾಲದ ವರೆಗೆ ನಿಮ್ಮ ಶ್ಯಾಮಣ್ಣ ಸ್ವತಂತ್ರ ಮನುಷ್ಯನೆಂದು ಎನಿಸಿಕೊಳ್ಳಲಾರ.... ಈ ಕಾಲವೇ ಸಂಧಿಕಾಲ!" ಎಂದು ನಾಗೇಶ ವಿರಮಿಸಿ, ಉತ್ತರ ದೊರೆಯದುದನ್ನು ಕಂಡು ತನ್ನ ಅಭಿಪ್ರಾಯವನ್ನು ಹೀಗೆ ವಿಶದೀಕರಿಸಿದ: ನನಗೆ ನಿಮ್ಮ ತಾಪತ್ರಯ ಚೆನ್ನಾಗಿ ಗೊತ್ತಿದೆ. ಅಕ್ಕ ತಂಗಿ ತಂದೆ ತಾಯಿ ಎಂದು ಕರೆಯಬಹುದಾದ ಮನೆಮಂದಿಗಳಿಲ್ಲ ಎಂದಾದಮೇಲೆ, ಈತನನ್ನು ಯಾವುದಾದರೊಂದು ಆರೋಗ್ಯಾಶ್ರಮದಲ್ಲಿ ಇರಿಸಬೇಕಾಗುತ್ತದೆ. ಏನು ಮಾಡುತ್ತೀರಿ?

"ವಿಚಾರಿಸುತ್ತೇನೆ" ಎಂದ ಪ್ರಭಾಕರ.

"ನೀವು ಇನ್ನು ವಿಚಾರಿಸಬೇಕಾಗದೆ. ನಾನು ವಿಚಾರಿಸುವ ವಿಲಂಬವಿಲ್ಲದೆ ಹೇಳುತ್ತೇನೆ. ನನ್ನ ವಶದಲ್ಲಿ ಒಂದು ಆರೋಗ್ಯಾಶ್ರಮವಿದೆ. ಅಲ್ಲಿ ಒಂದು ವರ್ಷ ಕಾಲಕ್ಷೇಪ ಮಾಡಲಿ. ಈತನು ಹಿಂದಿನ ಗುಂಡು ಗುಂಡಾದ ಶ್ಯಾಮಣ್ಣನಾಗುವಷ್ಟು ಕಾಲ ಅಲ್ಲಿರಲಿ...."

" ಹೇಗಿದ್ದರೂ ಈತ ನಾಳೆಯೇ ಇಲ್ಲಿಂದ ಹೊರಬೀಳುವುದಿಲ್ಲವಷ್ಟೆ?" ಎಂದು ಪ್ರಭಾಕರ ಉತ್ತರಕೊಟ್ಟ. ಪ್ರಸ್ತುತ ಕರ್ತವ್ಯದ ವಿಷಯದಲ್ಲಿ ಯಾರಿಗೂ ಸಂದೇಹವುಂಟಾಗಬಾರದೆಂದು ಕಾಮಾಕ್ಷಿ " ನಮಗೂ ಒಂದು ಮನೆಯಿದೆಯಷ್ಟೆ ?" ಎಂದು ಗಂಡನ ಮುಖವನ್ನು ನೋಡಿದಳು. ತನ್ನ ಅಭಿಪ್ರಾಯದ ಸಮರ್ಥನೆ ಆತನ ಮುಖದಲ್ಲಿ ಪ್ರಕಟವಾಗಬಹುದೆಂದು ನಿರೀಕ್ಷಿಸಿದಳು. " ಅಷ್ಟೆ ಮತ್ತೇನು ? ಪತ್ರಿಕಾ ವ್ಯವಸಾಯದಲ್ಲಿ ನಾವೊಂದು ಕುಟುಂಬದಂತಿದ್ದೇವೆ.... ಸಂಸಾರದಲ್ಲಿಯೂ ಏಕಿರಬಾರದು?" ಎಂದು ಪ್ರಭಾಕರ ಸಮರ್ಥಿಸಿದ.

" ಏಕೆ ಬಾರದು ? ಏಕೆ ಬಂದೀತು ? ಎಂಬುದನ್ನು ನಿಷ್ಕರ್ಷಿಸುವಾತ ನಾನಲ್ಲ. ಸಂಗತಿಗಳನ್ನು ಯಥಾವತ್ತಾಗಿ ಹೇಳುವುದೊಂದೇ ನನ್ನ ಕೆಲಸ. ನೀವು ಆತನ ರಕ್ಷಕರಾಗಿದ್ದೀರಿ. ಹಿತ ಯಾವುದೋ ಅದನ್ನು ಮಾಡಿ." ಎಂದ ನಾಗೇಶನ ಮಾತಿನಲ್ಲಿ ಪ್ರಭಾಕರ ಕಾಮಾಕ್ಷಿಯರ ಅಭಿಮತಕ್ಕೆ ವಿರೋಧವಿದ್ದಂತೆ ಧ್ವನಿತವಾಯಿತು. ನಾಗೇಶ ಮತ್ತೇನೂ ಹೇಳಲಿಲ್ಲ ; ಇವರು ಕೇಳಲೂ ಇಲ್ಲ. ಘಂಟೆ ಹತ್ತು ಹೊಡೆಯಿತು. " ಹೋಗೋಣವೆ? ರಾತ್ರಿ ಬಹಳ ಆಯಿತು; ರೋಗಿ ನಿದ್ರಿಸಲಿ" ಎಂದು ನಾಗೇಶ ಕೋಣೆಯಿಂದ ಹೊರಟ. ಪ್ರಭಾಕರ ಕಾಮಾಕ್ಷಿಯರು ಎದ್ದುನಿಂತು ಮತ್ತೊಮ್ಮೆ ರೋಗಿಯ ಕಡೆಗೆ ನೋಡಿದರು.

ಮನೆ ! ಮನೆ ! ಈ ಎರಡು ಅಕ್ಷರಗಳ ಸಂಯೋಜನೆ ಏನರ್ಥವನ್ನು ಕೊಟ್ಟೀತು ಈ ಹಾಳು ಜೀವನದಲ್ಲಿ? ಒಂದು ಅಂಗೈ ಅಗಲದ ನೆಲ; ಅದರ ಮೇಲೆ ನಿಂತ ನಾಲ್ಕು ಗೋಡೆಗಳು ; ಮೇಲೆ ಮುಚ್ಚಿದ ಚಾವಣಿ. ಅದರೊಳಗೆ ತನ್ನ ಜೀವವನ್ನು ತಮ್ಮದು ಎಂಬ ಅಕ್ಕರೆಯಿಂದ ಬಳಸುವ ಜನರನ್ನು ಕಂಡಿರದ ಶ್ಯಾಮಣ್ಣನಿಗೆ ತನ್ನ ಮರವೆಯ ಮಧ್ಯದಲ್ಲಿಯೂ ಏನೋ ಒಂದು ವಿಷಾದ ಭಾವನೆ ಎದ್ದುಬಂದು ಮನಸ್ಸನ್ನು ಕದಡಿತು. ಮನೆ! ಅದೇ ತನಗಿಲ್ಲದ ವಿಷಯ. ಅದೇ ತನಗಿರಲಾರದ ವಸ್ತು. ಮನೆಯಿಲ್ಲದ ಜೀವಗಳು ಬಾಳುವುದಿಲ್ಲವಾದರೆ ತಾನಾದರೂ ಬಾಳುವುದು ಹೇಗೆ ? ಬಾಳುವುದಾದರೂ ಏಕೆ ? ಪ್ರಭಾಕರ—ಕಾಮಾಕ್ಷಿಯರು ಎದ್ದು

ಹೋಗುವಾಗ, ಅವನ ಎರಡು ಕಣ್ಣುಗಳೂ ನೀರು ತುಂಬಿದಂತಿದ್ದುದನ್ನು ಕಂಡರು !

೨

ಶ್ರೀಮತಿ ಎಸ್. ಭಾಮೆ ಕಟ್ಟುಗ್ರ ಸಮಾಜ ಸುಧಾರಕಿಯೆಂಬುದನ್ನು ಅವಳ ಹೆಸರೇ ಉದ್ಘೋಷಿಸುತ್ತಿದ್ದಿತು. ಆಕೆಯ ತಾಯಿತಂದೆಗಳು ಪುರಾಣದ ಒಂದು ಹೆಸರನ್ನು ಹಿಡಿದು, ಅದರಲ್ಲಿ ಚಂದವಿದೆ ಎಂದು ಭ್ರಮಿಸಿ, ಸತ್ಯಭಾಮೆ—ಎಂದು ನಾಮಕರಣ ಮಾಡಿದ್ದರು. ಸತ್ಯಭಾಮೆ ಉಚ್ಚ ಶಿಕ್ಷಣಾಲಯದಿಂದ ಹೊರಗೆ ಕಾಲಿಡುವಾಗ ಮಿಸ್. ಎಸ್. ಭಾಮೆಯಾಗಿ ಬಂದಳು. ಪ್ರಾಚೀನ ಸಂಪ್ರದಾಯ, ಆಚಾರ, ವಿಚಾರ, ಭಕ್ತಿಭಾವನೆ....ಹೆಚ್ಚೇನು? ಪ್ರಾಚೀನವೆನಿಸಿ ಯಾವುದೆಲ್ಲ ಈ ಪೃಥ್ವಿಯಲ್ಲಿದೆಯೋ ಅದನ್ನೆಲ್ಲ ಸಮೂಲ ದಹನವಾಡಬೇಕೆನ್ನುವ ರೀಗನಿಂದ ಆಕೆ ಪ್ರಪಂಚದ ಮೇಲೆ ಕಾಲಿಟ್ಟಳು. 'ಸತ್ಯ' ಎಂಬ ಪದದ ಮೇಲೆಯೇ ಅವಳ ಆಕ್ಷೇಪ. ಅದರಲ್ಲಿ ಪುರಾಣಚ್ಛಾಯೆಯಿಲ್ಲವೆ? ನಿಷ್ಪೌರುಷತೆಯಿಲ್ಲವೆ? ಒಂದುಬಗೆಯ ಮೂಢತೆಯೂ ಇಲ್ಲವೆ? ನಾನಾ ವಿಧವಾದ ವಿಭ್ರಮ ವಿಲಾಸಗಳ ಗಜಬಜೆಯಿಂದ ಕೂಡಿದ ಈ ವಿಶಾಲ ಪೃಥ್ವಿಯಲ್ಲಿ ಕಾಲಗುಣವನ್ನರಿತು ಸಂದರ್ಭಕ್ಕೆ ಸರಿಯಾಗಿ ಆಚಾರವನ್ನು ಹೊಂದಿಸಿಕೊಂಡು ಹೋಗುವವರೇ ಬಾಳುವುದಕ್ಕೆ ಅರ್ಹರಾಗಿರುತ್ತಾರೆ. ಅಂತಹ ಜೀವನಕ್ಕೆ ಸುಖವಾಗಿ ಬಾಳುವುದೊಂದೇ ಗುರಿ. ಅದರ ವಿಧಾನವೇನು? ಅದರ ತಪ್ಪೊಪ್ಪುಗಳೇನು? ಎಂದು ಜಟಿಲ ವಿಚಾರದಲ್ಲಿ ಸಿಕ್ಕಿಬಿದ್ದು ಕಾಲಹರಣ ಮಾಡುವುದೂ ಒಂದೆ; ಆತ್ಮಹತ್ಯೆ ಮಾಡುವುದೂ ಒಂದೇ! ವ್ಯಕ್ತಿಗುಣಕ್ಕೊಪ್ಪುವ ಹೆಸರಾಗಬೇಕು. ತನ್ನನ್ನು ಸತ್ಯಭಾಮೆಯನ್ನಾಗಿ ಮಾಡಿದ ತಂದೆತಾಯಿಗಳಿಗೆ ಶಾಪಕೊಡುತ್ತಾ ಆಕೆ ಒಂದು ದಿನ ಭಾಮೆಯಾದಳು. ಪ್ರಾಚೀನ ಪದ್ಧತಿಗಳಲ್ಲಿ ತನಗೆಷ್ಟು ಹೇವರಿಕೆಯಿದೆ? ಎಂಬುದನ್ನು ತೋರಿಸುವುದಕ್ಕಾಗಿ ರಿಜಿಸ್ಟ್ರಿ ಕಚೇರಿಯಲ್ಲಿ ಕಾನೂನಿನ ಮದುವೆಯನ್ನು

ಮಾಡಿಕೊಂಡಳು. ತಾನು ಈ ಕಾನೂನಿಗೂ ದಾಸಿಯಲ್ಲ—ಎಂಬ ಪೌರುಷ ವಿಜಯವನ್ನು ಘೋಷಿಸುವುದಕ್ಕಾಗಿ ನಾಲ್ಕು ವರ್ಷಗಳಲ್ಲಿ ಅದೇ ಕಾನೂನಿನ ಕಣ್ಣುಮುಂದೆ ಮದುವೆಯಿಂದ ಬಿಡುಗಡೆ ಮಾಡಿಕೊಂಡಳು. ಊರು ಬಿಟ್ಟ ಅನಂತರ ನೂರಾರು ಪ್ರಚಲಿತ ಸಮಸ್ಯೆಗಳಲ್ಲಿ ತೇಲಿ, ಮುಳುಗಿ, ಮುಳುಗಿ ತೇಲಿ, ಚಿಕ್ಕಮಟ್ಟಿನ ನಾಯಿಕೆಯಾದಳು. ಅವಳನ್ನು ಮಂಗಳೂರಿನ ಕಡೆಗೆ ತಿರುಗಿಸಿದುದು ದೃಷ್ಟಿರೋಗ. ನಯನ ಚಿಕಿತ್ಸೆಯಲ್ಲಿ ಮಹಾ ಪ್ರಖ್ಯಾತಿಯನ್ನು ಪಡೆದಿದ್ದ ನಾಗೇಶರಾಯರು ಇಂತಹ ಎಷ್ಟೋ ರೋಗಗಳನ್ನು ಕ್ಷಣಮಾತ್ರದಲ್ಲಿ ಗುಣಪಡಿಸಿದ ವಾರ್ತೆಯನ್ನು ಕೇಳಿ ಅವಳಿಗೆ ಊರ ನೆನಪಾಯಿತು. ಧಾವಿಸಿ ಬಂದಳು. ಬಂದ ದಿನವೇ ಸ್ಥಳೀಯ ಪತ್ರಿಕೆಯೊಂದರಲ್ಲಿ ಈ ವರ್ತಮಾನವು ಪ್ರಕಟವಾಗಿತ್ತು. ಪತ್ರಿಕಾ ಚಾಲಕರ ಗ್ರಹದೋಷದಿಂದ, "ದೃಷ್ಟಿರೋಗ ಚಿಕಿತ್ಸೆಗಾಗಿ"—ಎಂಬುದರ ಬದಲು "ದೃಷ್ಟಿರಾಗ" ಚಿಕಿತ್ಸೆಗಾಗಿ ಎಂದು ಮುದ್ರಣದೋಷ ಬಿದ್ದು, ಕ್ಷಮಾಯಾಚನೆಯನ್ನೂ ಮಾಡಬೇಕಾಯಿತು!

ಶ್ರೀಮತಿ ಭಾಮೆ ತನ್ನ ಮನೆಯ ವಿಶಾಲವಾದ ಕೈಸಾಲೆಯಲ್ಲಿ ವಿರಾಮಾಸನದ ಮೇಲೆ ದೇಹವನ್ನೊರಗಿಸಿ "ಮಿರರ್" ಎಂಬ ಪತ್ರಿಕೆಯನ್ನು ಓದುತ್ತಿದ್ದಳು. ಮುಂಗಡೆಯಲ್ಲಿ ಪೀಠದಲ್ಲಿ ಬೇರೆ ನಾಲ್ಕಾರು ಪತ್ರಿಕೆಗಳು ಅಸ್ತವ್ಯಸ್ತವಾಗಿ ಬಿದ್ದಿದ್ದುವು. ನಿರೀಕ್ಷಿಸಿದಂತೆ ಡಾ. ನಾಗೇಶರಾಯರು ಆಗತಾನೆ ಬಂದು, ಅಲ್ಲಿಯೇ ಮೂಲೆಯಲ್ಲಿದ್ದ ಕುರ್ಚಿಯನ್ನು ಹತ್ತಿರಕ್ಕೆ ಸರಿಸಿ ಆಸೀನರಾದರು. ಉಪಚಾರದ ಸುಳಿವೇ ಇಲ್ಲದೆ ಒಬ್ಬರು ಇನ್ನೊಬ್ಬರನ್ನು ನೋಡಿ ಮಂದಹಾಸವನ್ನು ಬೀರಿದರು. ಓದುವ ಸಡಗರದ ನಡುವೆ ಭಾಮೆ ಈ ಕಡೆ ಮುಖ ತಿರುಗಿಸಿ "ಮಿಸ್ಟರ್ ನಾಗೇಶ್.... ಈ ಹಿಂದೂ ದೇಶದಲ್ಲಿ ಎಲ್ಲ ವಿಚಿತ್ರವಾಗಿ ತೋರುತ್ತದೆ!" ಎಂದು ಉದ್ಗರಿಸಿದಳು.

ಭಾಮೆ ವಿಚಿತ್ರವೆಂದುದನ್ನು ವಿಚಿತ್ರವೆಂದೊಪ್ಪಿಕೊಳ್ಳುವುದರಲ್ಲಿ ಶ್ರೀಯುತರಿಗೆ ಅನ್ಯಾಯವೇನೂ ಕಾಣಲಿಲ್ಲ.

"ಹೊರಗಿನ ಪ್ರಪಂಚದ ಸ್ತ್ರೀ ಪುರುಷರು ಎಂತೆಂತಹ ಮಹಾ ಕಾರ್ಯಗಳನ್ನು ಮಾಡುತ್ತಿದ್ದಾರೆ? ನಮ್ಮ ಜನ ಕುರಿ ಮಂದೆಯಂತೆ ಕುಳಿತಿದೆಯಲ್ಲ!"

"ಹೌದು"

"ಜಪಾನಿನ ಸ್ತ್ರೀಯರಿಗೆ ಸೈನಿಕ ಶಿಕ್ಷಣವಂತೆ!"

"ಹೌದು"

"ಅಮೇರಿಕದ ನಾರಿಯರು ಆಕಾಶಗಮನದಲ್ಲಿ ಹೊಸ ದಾಖಲೆಗಳನ್ನು ಸ್ಥಾಪಿಸಿದರಂತೆ!"

"ಆಶ್ಚರ್ಯವೇನು?"

"ಉತ್ತರ ಧ್ರುವದ ಸಂಶೋಧನೆಗಾಗಿ ರಷ್ಯದ ವೈಜ್ಞಾನಿಕರಿಬ್ಬರು ಹೊರಟಿದ್ದಾರೆ"

"ಹೊರಟಿದ್ದಾರೆ"

"ನಮ್ಮವರು ಉಣ್ಣುತ್ತಾರೆ; ತಿನ್ನುತ್ತಾರೆ; ಭಾರತವಾಸಿಗಳಿಗೆ ದಿನಕ್ಕೊಂದು ಊಟವಿಲ್ಲ ಎಂದು ರಾಜಕೀಯ ಧುರೀಣರು ಆರ್ಭಟಿಸುತ್ತಾರೆ. ಈ ಊಟವಿಲ್ಲದ ಸ್ಥಿತಿಯಲ್ಲಿಯೂ ಪ್ರಜಾಸಂಖ್ಯೆ ವೃದ್ಧಿಯಾಗುತ್ತದಲ್ಲವೆ?"

ನಾಗೇಶರಾಯ ನಕ್ಕ. "ದಾರಿದ್ರ್ಯದ ಗುಣವದು" ಎಂದ.

"ಮನುಷ್ಯರು ಎಂದೆನಿಸಿಕೊಳ್ಳುವ ಈ ಮೂವತ್ತೆಂಟು ಕೋಟಿ ಸ್ತ್ರೀ ಪುರುಷರನ್ನು ಒದೆಯಬೇಕು; ಎಬ್ಬಿಸಬೇಕು. ನೀವೂ ಮನುಷ್ಯ ಪ್ರಾಣಿಗಳೆಂದು ಸಿದ್ಧಾಂತಪಡಿಸಬೇಕು. ಅದನ್ನು ಪದೇ ಪದೇ ಕಲಿಸಬೇಕು; ಸಮಾಜ ಸುಧಾರಕರ ಕರ್ತವ್ಯ ಅದೇ ತಾನೇ!"

"ನನ್ನ ಬಾಳು ಈ ಸೇವೆಯಲ್ಲಿಯೇ ಸವೆದುಹೋಗಲಿ!" ಎಂದು ಕೈಯಲ್ಲಿದ್ದ ಪತ್ರಿಕೆಯನ್ನು ಪೀಠದ ಮೇಲೆ ಇಟ್ಟು ತನ್ನ ಆಶಯವನ್ನು ಬಿಚ್ಚಿ ಹೇಳಿದಳು.

"ಸಂಗ್ರಾಮ ಪತ್ರಿಕೆಯ ಸಂಪಾದಕರಾರು?"

"ಪ್ರಭಾಕರರಾಯರು"

" ಲೇಖಕ ಶ್ಯಾಮಣ್ಣನು ಅದಕ್ಕಾಗಿ ಅಲ್ಲವೆ ರಕ್ತಶೋಷಣೆ ಮಾಡುತ್ತಿರುವುದು ? "

" ಹೌದು ! "

" ನಮ್ಮ ತತ್ವವನ್ನು ಪ್ರಸಾರಿಸಬೇಕಾದರೆ ಪ್ರಚಾರಕಾರ್ಯ ಸಾಗಬೇಕಾಗಿದೆ. ಯಾವುದಾದರೊಂದು ಪತ್ರಿಕೆಯನ್ನು ಸ್ವಾಧೀನಪಡಿಸಿಕೊಳ್ಳಬೇಕೆಂದು ಹಿಂದೆಯೇ ಹೇಳಿದ್ದೆನಲ್ಲವೇ ? "

" ಹೇಳಿದ್ದೀರಿ ; ನಮ್ಮ ಪ್ರಯತ್ನವೂ ನಡೆದಿದೆ "

" ದೃಷ್ಟಿರೋಗ ಪ್ರಕರಣದ ಸಂಪಾದಕರಾರು ? "

" ಅವರೇ ಆ ಸಂಗ್ರಾಮದವರು ! "

" ಲೋಕಪ್ರಿಯ ಪತ್ರಿಕೆಯಲ್ಲವೇ ಅದು ? "

" ತಕ್ಕಮಟ್ಟಿಗೆ ! "

" ಈ ಲೋಕ ಎಂದರೆ ಎಂತಹ ಲೋಕ ? ನಾಲ್ಕು ಹುಚ್ಚು ಸುದ್ದಿಗಳನ್ನು, ಅಜ್ಞಕತೆಗಳನ್ನು, ಸಮಾಜದ ಅಪವಾದಗಳನ್ನು, ವ್ಯಕ್ತಿಗಳ ದ್ವೇಷಸಾಧನೆಗಳನ್ನು, ಜನರ ನಿಷ್ಕರ್ಮತೆಯನ್ನು, ಸಮರ್ಥಿಸಿ ಅಧಿಕಾರಿಗಳೆನಿಸುವವರನ್ನು ಟೀಕಿಸಿದಂತೆ ನಟಿಸುವ ಲೇಖನಗಳನ್ನೋದಿ ಕೊಂಡಾಡುವ ಲೋಕವಲ್ಲವೇ ಅದು ? "

" ಸಂದೇಹವಿಲ್ಲ. "

" ಆಗಲಿ ; ವಿಶಾಲ ನಭೋಮಂಡಲದಿಂದ ಇಳಿದು ಬಂದು ಈ ಚಿಕ್ಕ ಗೂಡಿನಲ್ಲಿ ಸಿಕ್ಕಿಬಿದ್ದಿದ್ದೇನೆ ; ಇದನ್ನೇ ಲೋಕ ಎನ್ನುತ್ತೇನೆ.... ಈ ನಾಲ್ಕು ಚದರಡಿಯ ವಿಸ್ತೀರ್ಣದ ಲೋಕದಲ್ಲಿ ಸಂಗ್ರಾಮವೇ ಜನಪ್ರಿಯವಾದುದೆಂದು ನೀವು ಹೇಳುತ್ತೀರಿ. ಅದರ ಜೀವಾಳ ಈ ಶ್ಯಾಮಣ್ಣನ ಲೇಖನಗಳು—ವ್ಯಂಗ್ಯ ಚಿತ್ರಗಳು-ಚಾಟುವಾದಗಳು ಎನ್ನುತ್ತೀರಿ. ಸಮಾಜ ಸುಧಾರಣೆಯ ಕುರಿತು ಅವರ ಅಭಿಪ್ರಾಯವೇನು ? "

" ನಮ್ಮ ನಾಡಿನಲ್ಲಿ ಅವರನ್ನು ಮೀರುವ ಸುಧಾರಕರಿಲ್ಲ "

"ನಮ್ಮ ನಾಡಿಗೆ ಬಂದ ಮೇಲೆ ನಮ್ಮ ನಾಡಿನ ಭಾಷೆಯಲ್ಲಿಯೇ ಆಡಬೇಕಾಗಿದೆ. ಸಂಗ್ರಾಮ ಪತ್ರಿಕೆ ಸರ್ವ ಸಮತಾವಾದವನ್ನು ಒಪ್ಪುವುದೇ ?"

"ಮಿತವಾಗಿ"

"ಮಿತಿ ಎಂಬ ಶಬ್ದಕ್ಕೆ ಅರ್ಥವೇ ಇಲ್ಲ. ಯಾವ ತತ್ತ್ವವು ಮಿತವಾಗಿರುವುದೋ ಅದು ಅದಲ್ಲ. ಮಿತವಾದ ಮನುಷ್ಯ ಗುಣವುಳ್ಳವನು ಒಂದು ಮಿತಿಯೊಳಗೆ ಮನುಷ್ಯನಾಗಿದ್ದರೆ, ಇನ್ನೊಂದು ಮಿತಿಯೊಳಗೆ ಬರಿಯ ಜಂತು ಮಾತ್ರ! ಸುಧಾರಣೆಯ ದಾರಿಯಲ್ಲಿ ಪಥಿಕರಾದವರಿಗೆ ಅಡ್ಡ ತಡೆಯಿಲ್ಲ; ಮೇರೆಯಿಲ್ಲ; ಮಿತಿಯಿಲ್ಲ. ಅವರಿಗೆ ಪ್ರಪಂಚದ ಸಮಗ್ರದೃಷ್ಟಿ; ಪಾರ್ಶ್ವದರ್ಶನವಿಲ್ಲ;"

"ಅದೆಲ್ಲ ನಿಜವೇ—"

"ನಿಜವೇ....ಆದರೆ ಕೆಲವೊಮ್ಮೆ ಮಿತವಾದುದನ್ನೂ ಅಮಿತವಾದುದನ್ನು ಸಾಧಿಸುವುದಕ್ಕಾಗಿ ಪ್ರಯೋಗಿಸಬೇಕೆಂಬುದನ್ನು ನಾನೂ ಒಪ್ಪಿಕೊಳ್ಳುತ್ತೇನೆ"

"ಹಾಗಿದ್ದರೆ ನಮ್ಮ ಕಾರ್ಯವು ಸುಗಮವಾಗುವುದು"

"ಸಂಗ್ರಾಮವನ್ನೇ ಹಿಡಿಯಿರಿ; ಹೇಗಾದರೂ ಹಿಡಿಯಿರಿ"

"ಶ್ಯಾಮಣ್ಣ ಬಗಲಿಗೆ ಬಿದ್ದರೆ...."

"ಬಿದ್ದರೆ–ಗಿದ್ದರೆ ಎನ್ನಬೇಡಿ. ಸಂದೇಹಗಳಿಗೆ ಎಡೆಯೇ ಇರಬಾರದು. ಅವನು ಬಗಲಿಗೆ ಬೀಳದಿದ್ದರೆ ಸಂಪಾದಕರನ್ನು ಸೆರೆಹಿಡಿಯಿರಿ; ಅದಾಗದಿದ್ದರೆ ಮುದ್ರಣಶಾಲೆಯ ಕೆಲಸಗಾರರನ್ನು ಸ್ವಾಧೀನಪಡಿಸಿಕೊಳ್ಳಿರಿ. ವೇತನ, ಭತ್ತೆ, ಕೆಲಸದ ಸಮಯ....ಇತ್ಯಾದಿ ಯಾವುದಾದರೊಂದು ವಿಷಯದಲ್ಲಿ ಕೆಲಸಗಾರರಿಗೂ ಒಡೆಯರಿಗೂ ಘರ್ಷಣವಾಗಲಿ. ನಮ್ಮಲ್ಲಿಗೆ ಓಡಿಬರಲಿ; ಮಾಧ್ಯಸ್ಥ್ಯದಿಂದ ಕಲಹ ನಿವಾರಣೆ ಮಾಡುತ್ತೇವೆ. ಆಗ ಪತ್ರಿಕೆ ನಮ್ಮದಾಗದೆ ನಿಲ್ಲುವುದೇ ?"

"ಇದು ಅತಿ ನಿರೀಕ್ಷಣೆಯಾಯಿತು. ಸಂಗ್ರಾಮವು ಪರಾವಲಂಬಿಯಾಗಿಲ್ಲ. ಒಡೆತನವೂ ಸಂಪಾದಕತ್ವವೂ ಒಬ್ಬರದೇ. ಅವಶ್ಯವಾದರೆ

ವೋಳಿ ಜೋಡಿಸುವ ಕೆಲಸವನ್ನೂ ಅವರೇ ಮಾಡಬಲ್ಲರು. ಪ್ರಭಾಕರ–ಕಾಮಾಕ್ಷಿ–ಶ್ಯಾಮಣ್ಣ ಎಂಬ ತ್ರಿಮೂರ್ತಿಗಳ ಸಹಯೋಗವಿರುವಷ್ಟು ಕಾಲ ಪ್ರಪಂಚಕ್ಕೆ ಪ್ರಳಯವಾದರೂ ಪತ್ರಿಕೆ ನಿಲ್ಲದು!"

"ಕಾಮಾಕ್ಷಿಯೆಂದಿರಲ್ಲ....ಯಾರು ಆಕೆ?"

"ಸಂಪಾದಕರ ಹೆಂಡತಿ; ಅಥವಾ ಅವಳೆ ಸಂಪಾದಕಿಯೆಂದರೂ ಸರಿ."

"ಪರಿಚಯವುಂಟೇ?"

"ಇಲ್ಲದೇನು? ನನ್ನ ಸಂಬಂಧಿಸಿಯಾಗಿಯೂ ಇರುವಳು!"

"ನಿಮ್ಮ ಸಂಬಂಧಿನಿಯು ಸಂಪಾದಕತ್ವದಲ್ಲಿರುವ ಪತ್ರಿಕೆ ನಮ್ಮ ತತ್ವವನ್ನು ಎತ್ತಿ ಹಿಡಿಯದೆಂದರೇನು?"

"ಹಾಗೆ ನಾನು ಹೇಳಿಲ್ಲ; ಕಾಮಾಕ್ಷಿ ಒಂದು ಬಗೆಯ ಹೆಣ್ಣು"

"ಎಂದರೆ ಆಡುವವಳು; ಮಾಡುವವಳಲ್ಲ?"

"ಅದೂ ಅಲ್ಲ; ಅವಳ ದೋಷವೆಂದರೆ ಏನೋ ಒಂದನ್ನು ಮನಸ್ಸು ಎಂದು ಭಾವಿಸುವುದು; ಅದರ ಸ್ಫುರಣೆಯನ್ನು ಮನಸ್ಸಾಕ್ಷಿಯೆಂದು ಭ್ರಮಿಸುವುದು"

"ಈ ಚಿಕ್ಕ ಮನಸ್ಸುಗಳಿಗೆ ಏನು ಕಂಡೀತು? ಅವುಗಳಿಂದ ಏನಾದೀತು? ಈ ಮನಸ್ಸಾಕ್ಷಿಗಳು ಎಷ್ಟುಕಾಲ ಬಾಳಿಯಾವು? ಪ್ರಪಂಚದ ಜೀವನ ಸಮುದ್ರಕ್ಕೆ ದುಮುಕದೆ, ಈಜಾಡದೆ, ಈಜುವ ಶಕ್ತಿಯನ್ನು ಪರೀಕ್ಷಿಸದೆ, ಮನಸ್ಸಾಕ್ಷಿ ಮನಸ್ಸಾಕ್ಷಿ ಎಂದು ಜಪಿಸುವುದು ಅದೊಂದು ಬಗೆಯ ರೋಗ ಚಿಹ್ನೆ. ನಿಮ್ಮಂಥ ವೈದ್ಯರಲ್ಲ; ನಮ್ಮಂತಹ ಅನುಭವಿಗಳು ಅದರ ಮೂಲವನ್ನು ಹುಡುಕಬಲ್ಲರು!"

ನಾಗೇಶರಾಯನು ಹೌದು — ಎಂದು ನಕ್ಕ.

"ಹಾಗಾದರೆ, ಏನು ಮಾಡಬೇಕೋ ಅದನ್ನೆಲ್ಲ ಮಾಡಿರಿ. ಇನ್ನು ಕೆಲವೆ ತಿಂಗಳಲ್ಲಿ ನಮ್ಮ ಶಕ್ತಿಪರೀಕ್ಷೆಯಾಗುವುದು. ನ್ಯಾಯವಿಧಾಯಕರ ಚುನಾವಣೆಯಾಗುವುದು ..ಸ್ತ್ರೀಯರನ್ನು ಪ್ರಾತಿನಿಧ್ಯಕ್ಕೆ ನೇಮಿಸಬೇಕೆಂದು ಚಳವಳ ಹೂಡುವೆವು. ಜಿಲ್ಲೆಯ ಉದ್ದಗಲದಲ್ಲಿ ಪ್ರಚಾರಕಾರ್ಯ ಸಾಗ

ಬೇಕು. ಎಚ್ಚತ್ತ ಹೆಣ್ಣು ಯಾವುದಕ್ಕೆಲ್ಲ ಸಮರ್ಥಳೆಂಬುದನ್ನು ಮೂಢ ಜನರು ಕಣ್ಣಾರೆ ಕಾಣುವರು!" ಎಂದು ಭಾವೆ ಉತ್ಸಾಹದಿಂದ ಆಡಿದಳು.

"ನನ್ನ ತನುಮನೋಧನಗಳು ವಿಶ್ವಾಸಲಾಗಿವೆ" ಎಂದು ನಾಗೇಶರಾಯ ಅಭಯಕೊಟ್ಟ.

ಹೊರಟು ಹೋಗುವಾಗ ಆತನ ಹೃದಯದಲ್ಲಿ ಅನಿರ್ವಚನೀಯ ಸಂತೋಷವೊಂದು ನಲಿದಾಡುತ್ತಿತ್ತು. ಹೊಸ ರಾಜ್ಯಕ್ಕೆ ದಾಳಿಯಿಡಬೇಕೆಂದು ಭಾವೆ ಆಜ್ಞೆಕೊಟ್ಟಿದ್ದಾಳೆ....ಏಕೆ ಸಾಹಸದಿಂದ ಮುನ್ನುಗ್ಗಬಾರದು? ಜಯ ದೊರೆಯಬಹುದು. ದೊರೆಯದಿದ್ದರೆ ಅಪಜಯದಲ್ಲಿಯೂ ಒಂದು ಬಗೆಯ ಸುಖವಿಲ್ಲವೆ? ಯಾವ ಕಾಮಾಕ್ಷಿ ತನ್ನನ್ನು ಕಾಲಿನಿಂದ ಒದೆದಿದ್ದಾಳೋ, ಯಾರ ಸಹವಾಸವನ್ನು ಸೇರಿಕೊಳ್ಳಲು ವಿಶ್ವಾಸದ ನೂರಾರು ಸಂಚುಗಳು ಮಳಲೊಳಗೆ ಎಣ್ಣೆ ಹೊಯಿದಂತಾಗಿದ್ದುವೋ, ಅವಳ ಕೋಟೆ ಕೊತ್ತಳದ ಕಡೆಗೆ ಲಗ್ಗೆಹೊಡೆದು ಸೋತರೂ ಸ್ವರ್ಗವಲ್ಲವೇ?

4

ಎರಡು ತಿಂಗಳು ಕಳೆದು ಹೋಯಿತು. ಶ್ಯಾಮಣ್ಣನ ವಿಷಯದಲ್ಲಿ "ಇನ್ನೇನೂ ಅಪಾಯಕ್ಕೆ ಕಾರಣವಿಲ್ಲ" ಎಂದು ಡಾಕ್ಟರ್ ನಾಗೇಶರಾಯನ ತೀರ್ಪು ಬಂತು. "ಆದರೆ ದೇಹಶ್ರಮ ಸಲ್ಲದು. ಹೊಟೇಲುಗಳಲ್ಲಿ ವಾಸ ಯೋಗ್ಯವಲ್ಲ" ಎಂಬೊಂದು ನಿರ್ಬಂಧವೂ ಇತ್ತು. ಮತ್ತೊಮ್ಮೆ ಅದೇ ಪ್ರಶ್ನೆ. ಮನೆಯಲ್ಲಿ ವಾಸಿಸಬೇಕು! ಹಾರುವ ಹಕ್ಕಿಗಾದರೂ ಒಂದು ಗೂಡಿದೆ; ತನಗೆಲ್ಲಿ? ಎಂದು ಶ್ಯಾಮಣ್ಣ ಕಣ್ಣೊರಸಿಕೊಂಡ.

ಅದೇ ದಿನ ಸಂಜೆ ಐದು ಘಂಟೆಯ ಸಮಯಕ್ಕೆ ಪ್ರಭಾಕರನ ಚಿಕ್ಕ ಮನೆಯಲ್ಲಿ ಹೊಸ ಏರ್ಪಾಡುಗಳಾಗುತ್ತಿವೆ. ಮನೆ ಹಳೆಯ ಮರ್ಜಿಯದು. ಗಾಳಿ ಬೆಳಕುಗಳು ಜೀವನದ ಶತ್ರುಗಳೆಂಬ ಭಾವದಿಂದ

ಹಿಂದಿನವರು ಕಟ್ಟಿಸಿದ ಹಳೆ ಆಯದ ಮನೆ. ಇದಿರಿನಲ್ಲಿ ಒಂದು ಮುಖ ಮಂಟಪವನ್ನು ಪ್ರಭಾಕರ ತನ್ನ ಆಡಳಿತದಲ್ಲಿ ಕಟ್ಟಿಸಿದ್ದ; ಕೆಲ ಕಿಟಕಿ ಗಳನ್ನೂ ಇಡಿಸಿದ್ದ. ಎರಡು ನೆಲೆಯ ಈ ಕಟ್ಟಡದ ಕೆಳಗಿನ ಭಾಗದಲ್ಲಿದ್ದು ದೆಂದರೆ ಒಂದು ನಡು ಕೈಸಾಲೆ. ಅಕ್ಕ ಪಕ್ಕಗಳಲ್ಲಿ ಒಂದೊಂದು ಚಿಕ್ಕ ಕೋಣೆ. ಮನೆಯ ಬಲಗಡೆಗೆ ಹೊಂದಿಕೊಂಡು ಸೀಳಾಗಿ ಒಂದು ಅಡಿಗೆ ಮನೆ; ಭೋಜನಶಾಲೆ; ದಾಸ್ತಾನು ಕೋಣೆ. ಉಪ್ಪರಿಗೆಯೆಂಬುದು ಮನೆಯ ಗೌರವವನ್ನು ಹೆಚ್ಚಿಸುವುದಕ್ಕೆ ಮಾತ್ರ. ಪ್ರಭಾಕರನ ತಂದೆ ಕಾಲವಾಗುವವರೆಗೆ ಉಪ್ಪರಿಗೆಯ ಮನೆಯಲ್ಲಿರುವ ನಿತ್ಯೋಪಯೋಗಿ ಯಲ್ಲದ ಸಾಮಾನುಗಳನ್ನು ಅಡ್ಡಾದಿಡ್ಡಿಯಾಗಿ ಚೆಲ್ಲುವ ಒಂದು ಕೊಟ್ಟಾರ ವಾಗಿತ್ತು. ಪ್ರಭಾಕರನು ಅದನ್ನು ಸುಧಾರಿಸಿದ. ಕಿಟಕಿಗಳನ್ನಿಡಿಸಿ ಗಾಳಿ ಬೆಳಕುಗಳಿಗೆ ಸ್ವಾಗತ ಕೊಟ್ಟ. ನೆಲಕ್ಕೆ ಇಟ್ಟಿಗೆ ಹೊದಿಸಿ ಹದನಾಗಿಸಿದ. ಅದುವೆ ಅವನ ಶಯ್ಯಾಗಾರವಾಯಿತು. ಓದುವ ಕೋಣೆಯಾಯಿತು; ಬರೆಯುವ ಕಚೇರಿಯಾಯಿತು. ಒಂದು ಮೇಜು; ಮೂರು ಕುರ್ಚಿಗಳು; ಒಂದು ಕಪಾಟು. ಎರಡು ಮಂಚಗಳು....ಇಷ್ಟರಿಂದಲೆ ಸ್ಥಳವೆಲ್ಲ ಇಕ್ಕಟ್ಟಾಗಿ ಇದಕಿರಿದಂತೆ ತೋರುತ್ತಿತ್ತು. ಅತಿಥಿಗಳೂ ಸಂದರ್ಶಕರೂ ಇಲ್ಲದಾಗ ಪ್ರಭಾಕರ-ಕಾಮಾಕ್ಷಿಯರ ಕಾಲವು ಈ ಮಾಳಿಗೆ ಕೋಣೆಯ ನಾಲ್ಕೂ ಗೋಡೆಗಳೊಳಗೇ ಕಳೆದು ಹೋಗುತ್ತಿತ್ತು. ಹೊಸಬರು ಬಂದಾಗ ಮಾತ್ರ ಮುಖ ಮಂಟಪವನ್ನು ಆಕ್ರಮಿಸುತ್ತಿದ್ದರು. ಇದ್ದುದು ಒಂದೇ ಒಂದು ಚಿಕ್ಕ ಕುಟುಂಬವಾದುದರಿಂದ, ಈ ಕುಟುಂಬದಲ್ಲಿ ಇದ್ದ ಜನರೆಂದರೆ ಕಾಮಾಕ್ಷಿ, ಪ್ರಭಾಕರ, ಸಾಂತಮ್ಮ, ಕೆಲಸಕ್ಕಾಗಿ ಇಟ್ಟು ಕೊಂಡ ಚಿಕ್ಕ ಹುಡುಗನೊಬ್ಬ—ಇಷ್ಟೆ ಮಂದಿಯಾದುದರಿಂದ ಸ್ಥಳದ ಅಡಚಣೆ ಆಗಿರಲಿಲ್ಲ. ಇಂದು ಪ್ರಭಾಕರ ಕಾಮಾಕ್ಷಿಯರು ಉಪ್ಪರಿಗೆ ಯನ್ನು ತೆರವುಮಾಡುತ್ತಿದ್ದಾರೆ. ಅವರ ಮಲಗುವ ಮಂಚ ಕೆಳಗಿಳಿ ದಿದೆ. ಹೊಸತಾಗಿ ಕೊಂಡುಕೊಂಡ ಮಂಚವೊಂದು, ಹಾಸಿಗೆಯೊಂದು, ಮೇಲೇರಿವೆ. "ಈ ಅನಾಹುತ"ಕ್ಕೇನು ಕಾರಣವೆಂದು ಸಾಂತಮ್ಮನಿಗೆ ತಿಳಿಯಲಿಲ್ಲ.

" ಅನಾಹುತ ಏನೂ ಇಲ್ಲ !"

"ಇಲ್ಲವೆಂದರೇನು ? ಮನೆಗೆ ದಿಬ್ಬಣ ಬರುವಹಾಗೆ ತೋರುತ್ತದಲ್ಲ... ಯಾವ ದಿಬ್ಬಣ ಎಂದು ಕೇಳಿದೆನಷ್ಟೆ !"

"ದಿಬ್ಬಣವೆ ? ಕೊಡುವ ಹೆಣ್ಣು ಮನೆಯಲ್ಲಿಲ್ಲ. ದಿಬ್ಬಣ ಏಕೆ ಬರುತ್ತದೆ ?"

" ಸಾಕು ನಿನ್ನ ಕುಚೋದ್ಯ. ಉಪ್ಪರಿಗೆಯನ್ನೇಕೆ ಖಾಲಿಮಾಡಿದಿರಿ?"

"ಅವರನ್ನು ಕೇಳಿ !" ಎಂದು ಕಾಮಾಕ್ಷಿ ಆಗತಾನೆ ಮುಖ ಮಂಟಪಕ್ಕೆ ಕಾಲಿಟ್ಟ ಪ್ರಭಾಕರನನ್ನು ತೋರಿಸಿದಳು....

" ನೀನು ಮಹಾ ಸೀತೆ....ಮಹಾ ಸಾವಿತ್ರಿ....ಗಂಡನನ್ನು ಕೇಳಿಯೇ ಪ್ರತಿಯೊಂದು ಕೆಲಸವನ್ನು ಮಾಡುವವಳು....ನನಗೆ ಗೊತ್ತಿಲ್ಲ....ಅವನಿಗೆ ತಿಳಿದಿದೆ....ನೀನೇ ಅವನ ಬೀಗದಕ್ಕೈ ಎಂದು ನಾನು ತಿಳಿಯೋನೇ ?" ಎಂದು ಸಾಂತಮ್ಮ ಆಕ್ಷೇಪಿಸಿದಳು.

"ಅವಳು ಸೀತೆಯೂ ಅಲ್ಲ; ಸಾವಿತ್ರಿಯೂ ಅಲ್ಲ. ನಾನು ರಾಮನೂ ಅಲ್ಲ. ಸತ್ಯವಂತನೂ ಅಲ್ಲ....ನಾವು ಈ ಕಲಿಯುಗದಲ್ಲಿ ಹುಟ್ಟಿದ ಬರಿಯ ಕಾಮಾಕ್ಷಿ ಪ್ರಭಾಕರರು. ಈ ದಿನ ಇಲ್ಲಿಗೊಂದು ಹೊಸ ವ್ಯಕ್ತಿ ಬರುತ್ತದೆ. ಕೈಯಲ್ಲಿ ಹಿಡಿದ ಕುಂಟೆಯಿಂದ ಆಚ್ಛಾದನ ಮಾಡುವುದಿಲ್ಲವಾದರೆ ಹೇಳುತ್ತೇನೆ....ಅವನು ಶ್ಯಾಮಣ್ಣ....ಶ್ಯಾಮಣ್ಣ ನೆಂದರೆ ತಿಳಿಯಲಿಲ್ಲವೆ ? ನಮ್ಮ ಪತ್ರಿಕೆಯ ಉಪ ಸಂಪಾದಕ. ವಾರಕ್ಕೊಮ್ಮೆ ಬರುತ್ತಾನಲ್ಲ....ಆತ...."

"ಶ್ಯಾಮಣ್ಣನೊ ಭೀಮಣ್ಣನೊ....ಯಾರಾದರೇನು ಪ್ರಭು! ಆತ ಮಹಾರಾಜನಲ್ಲವಷ್ಟೆ....ಸುಪ್ಪತ್ತಿಗೆಯನ್ನೇರಿಸಬೇಕೆ ?"

"ಮಹಾರಾಜನಲ್ಲ....ಬರಿಯ ಶ್ಯಾಮಣ್ಣ ಆತ....ಮೂರು ತಿಂಗಳಿನಿಂದ ಸಂನಿಪಾತ ಹಿಡಿದು ಮೂಲೆ ಪಾಲಾಗಿದ್ದಾನೆ. ಪಾಪ....ನಿತ್ಯ ಕೈಯಡಿಗೆ ಮಾಡಿ ಕಾಲಕ್ಷೇಪ ಮಾಡುವ ಜೀವವದು. ಇನ್ನು ಸ್ವಲ್ಪಕಾಲ ಅವನ ಕೈ ಅವನ ವಶದಲ್ಲಿರದು"

"ಎಂದರೆ ಇಲ್ಲಿಯೆ ಮೊಕ್ಕಾಂ ಮಾಡುತ್ತಾನೆ"

"ನಾವು ಅವನನ್ನು ಒತ್ತಾಯಿಸಿ ಮೊಕ್ಕಾಂ ಮಾಡಿಸುತ್ತೇವೆ"

"ರಾಮರಾಮ! ನಿಮ್ಮ ಬುದ್ಧಿಯು....ಕಲಿಯುಗ ವಿಹಾರುತ್ತಿದೆ ಅಲ್ಲವೆ?"

"ಕಲಿಯುಗಕ್ಕೂ ಶ್ಯಾಮಣ್ಣನಿಗೂ ಸಂಬಂಧವೇನು ಚಿಕ್ಕಮ್ಮ...."

"ಅಯ್ಯೋ ಲಜ್ಜೆಗೇಡಿ....ನಿನಗೆ ಇಷ್ಟು ತಿಳಿಯುವುದಿಲ್ಲ....ನಮ್ಮ ಮನೆ ಭೋಜನಶಾಲೆಯೆಂದು ಭಾವಿಸಿರುವೆಯಾ?"

"ಹಾಗೇಕೆ ಭಾವಿಸಬೇಕು ಚಿಕ್ಕಮ್ಮ...."

"ಹಾಗಲ್ಲವಾದರೆ ಹೊಸಹೊಸ ಜನರನ್ನು ಏಕೆ ಕರೆಯುತ್ತೀರಿ?"

"ಕರೆಯುವುದಕ್ಕೆ ಕಾರಣವಿಷ್ಟೆ. ಶ್ಯಾಮಣ್ಣ ನಮ್ಮ ಪತ್ರಿಕೆಯ ಜೀವ. ಅವನ ಬದುಕು ನಮ್ಮ ಪತ್ರಿಕೆಯ ಬದುಕು"

"ಹಾಳಾಗಲಿ ನಿಮ್ಮ ಪತ್ರಿಕೆ....ಯಾವ ಜಾತಿಯೋ ಯಾವ ಕುಲವೋ ಎಂಥವನೋ ಯಾರಿಗೆ ಗೊತ್ತು....ಅಡುಗೂಳಜ್ಜಿ ಸಾಂತಮ್ಮ ಯಂತ್ರದ ಹಾಗೆ ಕೆಲಸ ಮಾಡುತ್ತಾಳೆ....ನಿಮಗೆ ಮಣೆಹಿಡಿದು ಸಾಲುಕಟ್ಟಿ ಕುಳಿತರಾಯಿತು. ಹೊಟ್ಟೆ ತುಂಬುತ್ತದೆ. ಥರ್ರೆಂದು ತೇಗು ಬರುತ್ತದೆ. ಎದ್ದು ನಡೆದುಬಿಡುತ್ತೀರಿ. ಹೊಟ್ಟೆಯೊಂದು ತುಂಬಿದ ಮೇಲೆ ಪತ್ರಿಕೆಯೂ ಇದೆ. ಶ್ಯಾಮಣ್ಣ ಭೀಮಣ್ಣ ಎಲ್ಲರೂ ಇದ್ದಾರೆ. ಆಡುವಾಗ ಸಕಲವನ್ನೂ ತಿಳಿದ ಸರ್ವಜ್ಞರಂತೆ ಕಷ್ಟ ಸುಖಗಳನ್ನೆತ್ತಿ ಮಾತಾಡುತ್ತೀರಿ. ಮಾಡುವ ಕೆಲಸ ಇಂತಹದು ನೋಡಿ. ನಿಮ್ಮಹಾಗೆ ನಾನು ಬಿ. ಎ. ಗೀಯೆ ಕಲಿಯ ಲಿಲ್ಲ. ಒಂದು ದಿನ ನಾನೀ ಮನೆಯಲ್ಲಿ ಇಲ್ಲದಿದ್ದರೆ ಏನಾದೀತು ಬಲ್ಲಿರಾ? ಕೈ ಬಾಯಿಗೆ ಹೋಗದು. ಒಂದು ಲೋಟ ಕಾಫಿ ಮಾಡುವ ಕ್ರಮವನ್ನು ಈ ಕಾಮಾಕ್ಷಿಯ ಬಿ. ಎ. ಕಲಿಸಿಕೊಡಲಿಲ್ಲ. ಮಡಿವಾಳರ ಕತ್ತೆಯಂತೆ ಎಷ್ಟು ಭಾರವನ್ನೂ ಹೊರುತ್ತೇನೆಂದು ಮತ್ತೂ ಭಾರ ಹೊರಿಸುತ್ತೀರಲ್ಲ....ನಿಮ್ಮ ವಿದ್ಯೆಗೆ ಮಣ್ಣುಹಾಕಿತು" ಸಾಂತಮ್ಮ ಇದೇ ಧಾಟಿಯಲ್ಲಿ ಇನ್ನೂ ಪದ ಹೇಳುತ್ತಿದ್ದಳು. ಪ್ರಭಾಕರ ನಡುವೆ ಬಾಯಿ ಹಾಕಿ "ಇಷ್ಟು ದೊಡ್ಡ ಭಾಷಣವೇನೂ ಬೇಕಾಗಿಲ್ಲ. ಆರೋಗ್ಯ ಸುಧಾರಿಸುವ ವರೆಗೆ ಶ್ಯಾಮಣ್ಣ ಇಲ್ಲಿರುತ್ತಾನೆ. ಅವನಿರುವಷ್ಟು ಕಾಲ

ಒಬ್ಬ ಅಡಿಗೆಯುವವನನ್ನು ನೇಮಿಸುತ್ತೇನೆ. ನಿಮ್ಮ ಶುದ್ಧಾಚಾರ ಸಂಪ್ರದಾಯ ನನಗೆ ಗೊತ್ತಿಲ್ಲವೆಂದು ಭಾವಿಸಬೇಡಿ" ಎಂದ.

ಇದರಿಂದ ಸಾಂತಮ್ಮನ ರೋಷಾವೇಶ ಇಳಿಯಲಿಲ್ಲ. "ಈ ಸಾಂತಮ್ಮ ಇಲ್ಲಿರುವಷ್ಟು ಕಾಲ—ಅವಳ ಕೈಯಲ್ಲಿ ಈ ಹಿಡಿಕುಂಟೆ ಇರುವಷ್ಟು ಕಾಲ, ಯಾವ ಭಟ್ಟ ಈ ಅಡಗೆ ಕೋಣೆಯೊಳಗೆ ಪ್ರವೇಶಿಸುವನೋ ನೋಡುತ್ತೇನೆ. ಅಡಿಗೆಯುವರ ಸಮಾಚಾರ ನನಗೆ ಗೊತ್ತಿಲ್ಲವೆ? ನಾಗೇಶನ ಮನೆಯಲ್ಲಿದೆ ಒಂದು ಭಟ್ಟ. ತಿಂಗಳಿಗೆ ಒಂದು ನೀರನ್ನು ನೋಡದ ಬಟ್ಟೆ. ದಿನಕ್ಕೆ ಒಂದು ಹೊರೆ ಬೀಡಿ. ಎಂಜಲು ಮೈಲಿಗೆ ಹೋದ ದಾರಿಯಲ್ಲಿಲ್ಲ. ಅವನು ತಿಂದು ಬಿಟ್ಟದ್ದು ಆ ನಾಗೇಶನಿಗೆ.... ಹೆಂಗಸರು ಈ ಇಂಗ್ಲೀಷ್ ವಿದ್ಯೆಯನ್ನು ಓದುವುದರಿಂದಲೇ ಗಂಡಸರು ಅಡಿಗೆ ಭಟ್ಟರ ಉಚ್ಛಿಷ್ಟವನ್ನು ತಿನ್ನಬೇಕಾಗುತ್ತದೆ!" ಎಂದು ಸಾಂತಮ್ಮ ತನ್ನ ಅನುಭವಗಳನ್ನು ಬಿಚ್ಚಿದಳು.

"ಅಡಿಗೆಯುವನು ಬೇಡವಾದರೆ ಅಷ್ಟೇ ಲೇಸಾಯಿತು. ನಾವೇ ನಿನ್ನಿಂದ ಈ ಪಾಕ ವಿದ್ಯೆಯನ್ನು ಕಲಿಯುತ್ತೇವೆ. ದಿನಕ್ಕೆ ಹತ್ತು ಕೊಡ ನೀರನ್ನು ಈ ಪೆಗಲು ಹೊರುತ್ತದೆ. ಕಾಫಿ ಗೀಫಿಯನ್ನು ಈ ಕಾಮಿ ಮಾಡುತ್ತಾಳೆ. ನೀನು ಮೇಲೆ ಮೇಲೆ ವಿಚಾರಿಸಿ ನಡೆಸಿಕೊಂಡು ಬಂದರಾಯಿತು"

"ಥೂ! ಈ ಕಾಮಿ ಕೈಯಲ್ಲಿ ಸೌಟು ಹಿಡಿದು ಅಡಗೆ ಮಾಡತ್ತಾಳೆ! ಅಂಗೈಯ ಮೇಲೆ ರೋಮ ಮೂಡಿದಾಗ ಅವಳು ಎಸರಿಟ್ಟು ಅನ್ನ ಮಾಡುವುದಕ್ಕೆ ಕಲಿತಾಳು. ಹೊಟ್ಟೆ ಹೇಗೂ ತುಂಬುತ್ತದೆ ಎನ್ನಿ.... ನಾಯಿಯ ಹೊಟ್ಟೆಯೂ ತುಂಬುವುದಿಲ್ಲವೆ? ಕೇಳು....ಇವಳಲ್ಲಿ ಕೇಳು.... ಮಡಿ ಎಂದರೇನು ಕೇಳು....ಮನೆಯ ಹೊರಗೆ ಹೋಗಿ ಬರುವವಳು ಮೈಲಿಗೆ ಬಟ್ಟೆಯನ್ನು ಕಳಚಿ ಹೊಸ ಬಟ್ಟೆಯುಡಬೇಕ? ಬೇಡವೆ? ಕೇಳು....ಅಯ್ಯೊ....ಪುಸ್ತಕದಲ್ಲಿ ಬರೆದಿಲ್ಲ ನನಗೇನು ಗೊತ್ತು? ಎನ್ನುತ್ತಾಳೆ. ಇಂಥವರಿಗೆ ಅಡಿಗೆಕೋಣೆಯ ಪಾರುಪತ್ಯ ಕೊಟ್ಟು ಮಡಿ ಮೈಲಿಗೆ

ಎಂದು ಬಾಯಿಬಡಿದುಕೊಂಡು ಗಂಟಲು ಒಣಗಿಸುವುದಕ್ಕಿಂತ ತಾನೆ ಒಲೆ ಬುಡದಲ್ಲಿ ಬಿದ್ದು ಸಾಯಬಾರದೇಕೆ?"

"ಬಹುದು!" ಎಂದು ಇಬ್ಬರೂ ನಕ್ಕರು

"ಲಜ್ಜೆಗೇಡಿಗಳು....ಕೆಲಸಗಳ್ಳರು....ನಗುತ್ತಾರೆ....ನಾನು ಅಡಿಗೆ ಮಾಡುವುದಕ್ಕೆ ಹಿಂಜರಿಯುತ್ತೇನೆಂದು ಭಾವಿಸಿ ನಗುತ್ತೀರಲ್ಲವೆ.....ಅದೇ ನಿಮ್ಮ ಅಜ್ಞಾನ....ಅವಶ್ಯಬಿದ್ದರೆ ನೂರು ಜನರ ಬ್ರಹ್ಮಸಂತರ್ಪಣೆಗೆ ಅಡಿಗೆ ಮಾಡಬಲ್ಲೆ....ನೀನು ಈ ಕಾಮಿಯನ್ನು ಮದುವೆಯಾಗಿ ಗೃಹಪ್ರವೇಶದ ಮುಂಚಿನ ದಿನ ಏನಾಯಿತು? ಬಲ್ಲಿರಾ? ಅವರು ಇವರು ಎಂದು ನೂರೈವತ್ತು ಮಂದಿ ಊಟಕ್ಕಿದ್ದರು. ಅಡಿಗೆಯ ತಿಮ್ಮಣ್ಣ ಮೋಸಕೊಟ್ಟ. ಬರುತ್ತೇನೆ ಎಂದು ಬರಲೇ ಇಲ್ಲ. ನಿನ್ನ ತಂದೆ ಏನು ಮಾಡುವುದು ಅತ್ತಿಗೆ? ಎಂದು ನನ್ನ ಮುಖನೋಡಿ ಕಣ್ಣೀರು ಸುರಿಸಿದ. ನಿನ್ನ ತಾಯಿ ಆಗಲೆ ಕಾಯಿಲೆಯಲ್ಲಿದ್ದು ಮಲಗಿದಲ್ಲಿಂದ ಏಳುವುದಕ್ಕೂ ಆಗುತ್ತಿರಲಿಲ್ಲ. ಅವಳು ಮೈಯ್ಯಲ್ಲಿ ಚೆನ್ನಾಗಿದ್ದರೆ ಈ ಗೊಡ್ಡಿನಂತೆ ಸುಮ್ಮನೆ ಕುಳಿತಿರುತ್ತಿರಲಿಲ್ಲ. ಉಪಾಯವಿಲ್ಲ ನೋಡು. ನಿನ್ನಪ್ಪನ ಮರ್ಯಾದೆ ಉಳಿಯಬೇಕಾಗಿತ್ತು. ಯಾವುದಕ್ಕೂ ಹೆದರಬೇಡ ಭಾವ....ಎಂದು ಧೈರ್ಯಹೇಳಿ ಎರಡೇ ಗಂಟೆಯಲ್ಲಿ ಪಲ್ಯ, ಸಾರು, ಹುಳಿ, ಮಜ್ಜಿಗೆಹುಳಿ ಪರಮಾನ್ನ ಅಂಬೊಡೆಗಳನ್ನು ಮಾಡಿ ಮೃಷ್ಟಾನ್ನ ಹಾಕಿಸಿದೆ. ಆದಿನ ಊಟಮಾಡಿ ಹೊಗಳಿದವರ ಮಾತು ಈಗಲೂ ಈ ಕಿವಿಗಳಲ್ಲಿ ಘಣಘಣಿಸುತ್ತಿದೆ...."

"ಹೌದು ಚಿಕ್ಕಮ್ಮ....ನಿನ್ನ ಸಾಮರ್ಥ್ಯ ಅಂತಹದು...."

"ಹೌದೊ ಮಗು....ಈ ಚಿಕ್ಕಮ್ಮ....ಈ ನಿನ್ನ ಸ್ವಂತ ಚಿಕ್ಕಮ್ಮ ಗೆಯ್ಯುವುದಕ್ಕೆ ಎಂದಾದರೂ ಹೆದರಿದುದುಂಟೆ? ಇವಳಿಗೆ ಈ ಮನೆಯೊಳಗೆ ಒಂದು ನಿಮಿಷ ಬೆನ್ನು ತುರಿಸಿಕೊಳ್ಳುವುದಕ್ಕೆ ಬಿಡು ಉಂಟೇ?....ಅದಕ್ಕಲ್ಲ ನಾನು ಹೆದರುವುದು....ನೀವು ನೋಡಬೇಕು. ಕುಲೀನರಾಗಿ ಹುಟ್ಟಿದ್ದೀರಿ. ಆಚಾರವಂತರ ಮನೆಯಲ್ಲಿ ಬೆಳೆದಿದ್ದೀರಿ....ಬಿ. ಎ. ಗಿ. ಎ. ಪಾಸಾದುದರಿಂದ ಆಚಾರಕ್ಕೆ ತುಳಸೀ ನೀರನ್ನು ಬಿಡಬೇಕೆಂದಿದೆಯೆ ಮಗು....ಈ ನಿನ್ನ ಹೆಂಡತಿ ಎಂತಹ ಬುದ್ಧಿಶಾಲಿನಿಯಾಗಿದ್ದರೂ ಹೆಣ್ಣು ಹೆಂಗುಸು. ಹನ್ನೆರಡು

ವರ್ಷಗಳಾದ ಮೇಲೆ ತನ್ನ ಹೊಟ್ಟೆಯ ಮಗನನ್ನೂ ಪರಕೀಯನೆಂದು ಭಾವಿಸಬೇಕೆಂದು ಹಿರಿಯರು ಹೇಳಲಿಲ್ಲವೆ? ಈ ನಿನ್ನ ಚಿಕ್ಕಮ್ಮನಿಗೆ ಈ ಅವಸ್ಥೆ ಬಂದ ಮೇಲೆ ಒಂದು ದಿನ ಒಂದು ನಿಮಿಷ ಪರಪುರುಷರ ಬಳಿ ಇದ್ದವಳಲ್ಲ. ಅವರಿದ್ದ ಜಾಗಕ್ಕೆ ಸುಳಿದು ಮೆಟ್ಟಿದವಳಲ್ಲ.... ಹೋಗಲಿ. ನನ್ನ ಮಾತು ಬೇಕಾಗಿಲ್ಲ. ಈ ಕಾಮಿಗೆ ಇನ್ನೂ ಇಪ್ಪತ್ತೈದು ತುಂಬಲಿಲ್ಲ. ಹಸಿಹಸಿ ವಯಸ್ಸು....ನಾವೆಷ್ಟು ಪುನೀತರಾಗಿದ್ದರೂ ಪರಕೀಯರು ಏನೆಂದಾರು ಮಗು? ಶ್ಯಾಮಣ್ಣನೇನು ವೇದವ್ಯಾಸ ಮಹರ್ಷಿಯೆ? ಅವನು ಶುದ್ಧನೆಂದೇ ಭಾವಿಸಿಕೊಳ್ಳಿ. ಜನರೇನೆಂದು ಹೇಳಬಹುದು? ಅದನ್ನೆಲ್ಲ ಈ ಕಿವಿಗಳಿಂದಲೇ ಕೇಳಬೇಕಲ್ಲವೆ? ಕೇಳಿ ಬದುಕಬೇಕಲ್ಲವೆ? ನೀವು ಎಷ್ಟೆಲ್ಲ ಪುಸ್ತಕಗಳನ್ನು ಓದಿದ್ದೀರೋ ದೇವನೇ ಬಲ್ಲ. ಗಂಡಸನ್ನು ನಂಬಬಾರದೆಂದು ಹೆಂಗುಸಿಗೂ, ಹೆಂಗುಸನ್ನು ನಂಬಬಾರದೆಂದು ಗಂಡುಸಿಗೂ ಹೇಳಿಕೊಡುವ ಒಂದು ಪುಸ್ತಕವೂ ಇಲ್ಲವೆ?"

ಸಾಂತಮ್ಮನ ಆಕ್ಷೇಪಕ್ಕೆ ಕಾರಣವೇನೆಂಬುದು ಮೊದಲೇ ತಿಳಿದಿದ್ದರೂ ಈಗ ಸ್ಪಷ್ಟೋಕ್ತಿಯಿಂದ ವಿದಿತವಾಯಿತು. ಸಾಂತಮ್ಮ ತಾವೇಶದಿಂದ ಬೋಧನೆ ಕೊಡುವಾಗ ಇದಿರಾಡದಿರುವವನಿಗೇ ಜಯ ಸಿಕ್ಕುತ್ತದೆ ಎಂಬುದು ಗಂಡ ಹೆಂಡಿರಿಬ್ಬರಿಗೂ ತಿಳಿದ ವಿಷಯ. ಅವಳ ಕೋಪವೆಂದರೆ ತನ್ನಿಂದ ತಾನೇ ಉರಿದು ತಾನೇ ನಂದಿಹೋಗುವ ಬೆಂಕಿ. ಉರಿಯುವುದಕ್ಕೆ ಇಂಧನ ಬೇಡ. ನಂದಿಸುವುದಕ್ಕೆ ನೀರು ಬೇಡ. ಕೋಪವಿಳಿದ ಮೇಲೆ ಅವಳಂತಹ ಪ್ರೇಮಮಯ ಸ್ವಭಾವ ಯಾರಿಗೂ ಇಲ್ಲ. ತಾನು ಕೋಪಿಸಿ ಯದ್ವಾ ತದ್ವಾ ಆಡುವಾಗ, ತನ್ನ ಮಗ ಪ್ರಭಾಕರ—ತನ್ನ ಸೊಸೆ ಕಾಮಾಕ್ಷಿ ಮೌನವಾಗಿ ಸುಮ್ಮನೆ ಕುಳಿತರಲ್ಲ ಎಂಬುದೇ ಅವಳಿಗೆ ಬೇಕಾಗಿದ್ದ ಹೆಗ್ಗಳಿಕೆ. ಸಾಂತಮ್ಮ ಗರ್ಜಿಸುವಾಗ—ಈ ಕಿವಿಗಳು ತಮ್ಮವಲ್ಲ—ಎಂದು ನಿಂತಲ್ಲಿಂದ ಅಗಲದೆ ಕೇಳುವ ಅಭ್ಯಾಸ ಆಗಿಹೋಗಿದೆ. ಹೀಗೆ ಹೆಚ್ಚುಕಾಲ ನಿಲ್ಲಬೇಕಾಗಿಲ್ಲ. ತನ್ನ ಮಾತಿನ ಕಾಠಿನ್ಯ ಹೆಚ್ಚಾಯಿತೆಂದು ತಿಳಿದು ಅವಳೆ ಕಣ್ಣೀರನ್ನು ಸುರಿಸುತ್ತ ತಮ್ಮಿಬ್ಬರನ್ನೂಲಲ್ಲೈಸುವಳೆಂದೂ ಅವರಿಗೆ ತಿಳಿದಿದೆ. ಆದುದು ಹಾಗೆಯೆ.

ನಾಟಕಗಳ ಆತ್ಮಗತ ಭಾಷಣದಂತೆ ಅವಳು ಏನೇನನ್ನೊ ಆಡಿದಳು. ಕೊನೆಯಲ್ಲಿ, ಕೈಯಲ್ಲಿದ್ದ ಹಿಡಿಕುಂಟೆಯನ್ನು ನೆಲಕ್ಕೆಸೆದು ಪ್ರಭಾಕರ ಕಾಮಾಕ್ಷಿಯರನ್ನುದ್ದೇಶಿಸಿ "ಮಕ್ಕಳೆ....ನನಗೇನು ಬೇಕು? ಬೇಕಾದರೆ ಏನಿದೆ ಈ ಪ್ರಪಂಚದಲ್ಲಿ....ನೀವೇ ನನ್ನ ಸರ್ವಸ್ವ....ಮಾನ ಮರ್ಯಾದೆ... ಎಂದು ನೋಡಿಕೊಳ್ಳಬೇಡವೆ? ಲೋಕಾಪವಾದಕ್ಕೆ ಹೆದರಬೇಡವೆ?.... ಆಗಲಿ...ಆ ಶ್ಯಾಮಣ್ಣ....ಹಾಳು ಜನದ ಹಾಗೆ ತೋರುವುದಿಲ್ಲ.... ಹಾಗಿದ್ದರೂ ಪರಕೀಯನು ಪರಕೀಯನೆ....ಇರಲಿ. ಬೇಕಾದರೆ ಒಂದೆರಡು ತಿಂಗಳು ಇದ್ದುಕೊಂಡು ಶರೀರಸೌಖ್ಯ ಹೊಂದಿದ ಮೇಲೆ ತನ್ನ ದಾರಿ ಹಿಡಿಯಲಿ" ಎಂದು ಅನುಗ್ರಹ ಮಾಡಿದಳು.

ಪ್ರಭಾಕರ ಕಾಮಾಕ್ಷಿಯರ ಮುಖ ಗೆಲವೇರಿತು. ಪರಸ್ಪರವಾಗಿ ಮಂದಹಾಸವನ್ನು ವಿನಿಮಯ ಮಾಡಿಕೊಂಡರು. ಸಾಂತಮ್ಮ ಕಸಬರಿಗೆ ಹಿಡಿದು ಮನೆ ಗುಡಿಸುವುದಕ್ಕೆ ಆರಂಭಿಸಿದಳು....ಇವರಿಬ್ಬರೂ ಮಾಳಿಗೆಗೆ ನಡೆದು ಮಾಳಿಗೆಯ ವ್ಯವಸ್ಥೆಗೆ ಕೊನೆಯ ಸಂಸ್ಕಾರ ಕೊಡುತ್ತಿದ್ದರು. ಘಂಟೆ ಆರು ಹೊಡೆಯಿತು.

"ಆರುವರೆಗಲ್ಲವೆ ನಾಗೇಶರಾಯರಲ್ಲಿಗೆ ಹೋಗಬೇಕಾದುದು?" ಎಂದು ಪ್ರಭಾಕರ ಕೇಳಿದ.

"ಹೌದು" ಎಂದಳು ಕಾಮಾಕ್ಷಿ.

ಪ್ರಭಾಕರ ತನ್ನ ಬಿಳಿ ಮೈಯ ಮೇಲೆ ಜುಬ್ಬವನ್ನು ಹಾಕಿಕೊಂಡ. ಶುಭ್ರ ವರ್ಣದ ಶಾಲೊಂದನ್ನು ಕೊರಳಿಗೆ ಸುತ್ತಿಕೊಂಡ. ಕಾಮಾಕ್ಷಿಯು ಸಜ್ಜಾಗುವುದಕ್ಕೆ ಹೆಚ್ಚು ವಿಲಂಬವಾಗಲಿಲ್ಲ. ನಸು ಹಳದಿಯ ರೇಷ್ಮೆ ಸೀರೆ; ಆ ಬಣ್ಣಕ್ಕೆ ಹೊಂದಿಕೆಯಾಗುವ ಹಸುರಿನ ಕುಪ್ಪಸ; ಕೈಯಲ್ಲಿ ಒಂದೊಂದು ಸಪುರ ಬಳೆ; ಕೊರಳಲ್ಲಿ ಒಂದೆಳೆಯ ಮುತ್ತಿನ ಸರ. ಅವಳ ನಿತ್ಯದ ವೇಷಭೂಷಣಗಳು ಇಷ್ಟೆ. ಆಕೆ ಸಿದ್ಧಳಾಗಿಯೇ ಇದ್ದಳು.

ಇಬ್ಬರೂ ಅಂಗಳಕ್ಕಿಳಿದು ಹತ್ತು ಹೆಜ್ಜೆ ನಡೆದರು. ಪ್ರಭಾಕರ ಯಾವುದನ್ನೊ ಮರೆತಿದ್ದ. "ನಾನು ಬಂದೆ. ನೀನು ಮುಂದೆ ನಡೆ!" ಎನ್ನುತ್ತಾ ಮನೆಯ ಕಡೆಗೆ ಓಡಿಬಂದು ಉಪ್ಪರಿಗೆಯೇರಿ ಮರೆತ ವಸ್ತು

ವನ್ನು—ಎಂದರೆ ಹಣದ ಚೀಲವನ್ನು ಜೇಬಿಗೆ ತುರುಕಿಸಿಕೊಂಡು ಓಡುತ್ತೋಡುತ್ತಾ ಬಂದ. ಮನೆಯ ಮುಂದುಗಡೆ ಬೇಲಿಯ ಒತ್ತಿನಲ್ಲಿ ರಸ್ತೆಯ ಪಕ್ಕದಲ್ಲಿ ಒಂದು ಅರಳಿ ಮರವಿದೆ. ಅದರ ಬುಡದಲ್ಲಿ ಕಾಮಾಕ್ಷಿ ಪ್ರಭಾಕರನನ್ನು ನಿರೀಕ್ಷಿಸುತ್ತಾ ನಿಂತಿದ್ದಳು. ಪ್ರಭಾಕರನ ಮುಂದುಗಡೆ ಪ್ರೇಮಮೂರ್ತಿ ನಿಂತಿದ್ದಳು. ಮುಳುಗುವ ಸೂರ್ಯನ ಹೊಂಬಣ್ಣದ ಕಿರಣಗಳು ಮರದೆಲೆಗಳ ನಡುವೆ ಇಣಿಕಿ ನೋಡುತ್ತಿದ್ದು, ನೋಡಿದುದು ಸಾಲದೆ ಆ ಚೆಲುವೆಯ ಮುದ್ದು ಮೊಗವನ್ನು ಮೆದುವಾಗಿ ಸ್ಪರ್ಶಿಸುತ್ತಿದ್ದುವು. ಪ್ರಭಾಕರನ ಮುಂದೆ ತೇಜೋಮಯ ಮೂರ್ತಿಯೊಂದು ಗೋಚರಿಸುತ್ತಿತ್ತು. ಇದುವರೆಗೆ ಬರಿಯ ಕಾಮಾಕ್ಷಿ—ಕಾಮಿ—ಕಾಮುವಾಗಿದ್ದವಳ ಸ್ಥಾನದಲ್ಲಿ ದಿವ್ಯ ಸುಂದರ ವಿಗ್ರಹವೊಂದು ಆವಿಷ್ಕೃತವಾಗಿತ್ತು !

ನಸು ನೀಳವಾಗಿ ಸೌಂದರ್ಯ ಲಹರಿಗಳನ್ನು ಚಿಮ್ಮಿಸುವ ಮುಖ; ನೀಲ ರತ್ನವನ್ನು ಸಪುರವಾಗಿ ಕಡೆದು ವಕ್ರಾಕಾರವಾಗಿ ಕೆತ್ತಿಸಿದಂತಿರುವ ಹುಬ್ಬು. ಮಾಗಿದ ಪನ್ನೇರಳೆಯಂತೆ ಹಳದಿ ಕೆಂಪಿನ ಬಣ್ಣ. ಬಾಚಿ ನುಣುಪಾಗಿಸಿದರೂ ಸರಳವಾಗದೆ ಗುಂಗುರು ಗುಂಗುರಾಗಿ ತೊನೆದಾಡುವ ಕೂದಲು; ಗಾಳಿಯಲ್ಲಿ ಮೃದುಲಾಸ್ಯ ವಾಡುತ್ತಿದ್ದ ಮುಂಗುರುಳು. ಮುಖದ ಚಂದಕ್ಕೆ ಅನುಗುಣವಾಗಿ ತಾನೆ ರೂಪುಗೊಂಡು ಎದ್ದು ನಿಂತಿದ್ದ ನೀಳವಾದ ಮೂಗು. ಎಸಳೆಸಳಾಗಿ ಅರೆ ನಿದ್ದೆ ಅರೆ ಎಚ್ಚರದಲ್ಲಿ ಮುಳುಗಿ ತೇಲುವ ಕಣ್ಣು ರೆಪ್ಪೆಗಳು....ಕವಿಯೊಬ್ಬನು ಕಿವಿಯನ್ನು ಶ್ರೀಕಾರಕ್ಕೆ ಹೋಲಿಸಿದ್ದಾನೆ. ಇವಳ ಕಿವಿ ಶ್ರೀಕಾರ ಸದೃಶವಾಗಿದ್ದರೆ, ದಂತಗಳು ಒತ್ತೊತ್ತಾಗಿ ಬರೆದ ಮುತ್ತಿನಂತಹ ಅಕ್ಷರ ಪಂಕ್ತಿಗಳಂತೆ ಗೋಚರಗೊಂಡು ಬಿಳಿ ಬಣ್ಣವನ್ನುಕಾರುತ್ತಿದ್ದುವು. ಇನ್ನು ಕೊರಳು, ಎದೆ, ಪಾದ ಇದನ್ನೆಲ್ಲ ಬೇರೆ ಬೇರಾಗಿ ಬಣ್ಣಿಸಬೇಕಾಗಿಲ್ಲ. ಕವಿಗಳ ವರ್ಣನೆಯೆಲ್ಲ ಮೈಗೊಂಡು ನಿಂತಂತೆ ಆ ಸುಂದರಿ ಗೋಚರಿಸುತ್ತಿದ್ದಳು. ಹತ್ತು ವರ್ಷದ ದಾಂಪತ್ಯದಲ್ಲಿ ಕಾಣದ ಸೊಬಗು ಪ್ರಭಾಕರನಿಗೆ ಇಂದು ಕಂಡಿತು. ಅಂದು ಮುಗುಳಾಗಿ ಬಂದವಳು ಇಂದು ಅರಳಾಗಿ ಶೋಭಿಸುತ್ತಳೆ. ಅಳ

ಬಾಳುವ ಬಳುಕುವ ನುಡಿಯುವ ನಡೆಯುವ ಭಂಗಿಯಲ್ಲಿ ಉದಾರ ಸೌಂದರ್ಯದ, ಉದಾತ್ತ ಹೃದಯದ ಸಂಭಾವಿತ ಚರ್ಯೆಯ ಗಾಂಭೀರ್ಯದ ಗತಿವಿಲಾಸಗಳು ಚೆಲ್ಲುತ್ತಿವೆ. ಪ್ರಭಾಕರನಿಗೆ ಇದುವರೆಗೆ ಕಾಣದ ಸೌಂದರ್ಯ ಇಂದು ಕಂಡಿತು. ಅಪೂರ್ವ ಸೌಂದರ್ಯದ ಖನಿಯೊಂದು ತನ್ನೊಡವೆಯಾಗಿದೆ ಎಂಬ ಹಿಗ್ಗುಂಟಾಯಿತು. ಪ್ರಭಾಕರ ನಸುನಗುತ್ತಾ "ಕಾಮಾ! ಮಂಗರಸನ ಜಯನೃಪ ಕಾವ್ಯದ ಸ್ತ್ರೀವರ್ಣನೆಯನ್ನೋದಿರುವೆಯಾ?" ಎಂದು ಕೇಳಿದ.

ಈಗ ಮಂಗರಸನೇಕೆ ಬರಬೇಕು? ಎಂದು ಕಾಮಾಕ್ಷಿ ಪ್ರಶ್ನಿಸಿದಳು.

"ನಿನ್ನನ್ನು ನೋಡುವಾಗ ಆ ನೆನಪು ಬಂತು!" ಎಂದನು ಪ್ರಭಾಕರ.

"ಅದರರ್ಥ ನನಗಾಗುವುದೇ?" ಎಂದಳು ಕಾಮಾಕ್ಷಿ.

"ಅರ್ಥವಾಗಬೇಕಾದರೆ ಕನ್ನಡಿಯ ಮುಂದೆ ನಿಂತು ಪದ್ಯಗಳನ್ನು ಓದು. ನಿನಗೆ ನೀನೆ ವ್ಯಾಖ್ಯಾನ" ಎಂದು ಪ್ರಭಾಕರ ನುಡಿದ

"ಏನು ಹುಚ್ಚಿದು?" ಎಂದು ಕಾಮಾಕ್ಷಿ ಉತ್ತರಕೊಟ್ಟಳು

ಬೀದಿಹಿಡಿದು ಹತ್ತು ಹೆಜ್ಜೆ ಮುಂದುವರಿಯುವಷ್ಟರಲ್ಲಿ ಸಾಂತಮ್ಮ ಓಡುತ್ತಾ ಬಂದು ಇವರನ್ನು ತಡೆದು ನಿಲ್ಲಿಸಿ ಹೀಗೆ ಸೂಚನೆಕೊಟ್ಟಳು. "ಮಕ್ಕಳೆ....ಏನೇನೋ ಒದರಿಬಿಟ್ಟೆ. ಮನಸ್ಸಿನಲ್ಲಿ ಇಟ್ಟುಕೊಳ್ಳಬೇಡಿ. ಇದೆಲ್ಲ ನಿಮ್ಮ ಹಿತಕ್ಕೆಂದೇ ಭಾವಿಸುವಷ್ಟು ದೇವರು ನಿಮಗೆ ಬುದ್ಧಿ ಕೊಡಲಿ....ಶ್ಯಾಮಣ್ಣ 'ಪೋಂಗಿ'ಯ ಹಾಗೆ ತೋರುವುದಿಲ್ಲ. ಕಳ್ಳನ ಮುಖ ಅಲ್ಲ ಅವನದು; ಇದಿರಿದಿರಾಗಿ ನೆಟ್ಟ ನೋಟದಿಂದ ನೋಡುವ ಮುಖ. ನೀವೇ ಹೇಳುತ್ತೀರಿ....ಅವನಿಂದಲೆ ನಿಮ್ಮ ಪತ್ರಿಕೆ ಸಾಗುವುದೆಂದು. ತಾಪತ್ರಯ ನನಗೆ ತಿಳಿಯದೆ? ಹಣದ ಅಡಚಣೆ ಗೊತ್ತಿಲ್ಲವೆ? ಇದರಿಂದಲೇ ನಿಮ್ಮ ಹೊಟ್ಟೆ ತುಂಬಬೇಕೆಂದರೂ ಸರಿ. ಮತ್ತೇನಿದೆ? ಕಾಮುಗೆ ತಂದೆಯೇನೋ ಕೊಟ್ಟಿದ್ದಾರೆ. ಆ ಹತ್ತು ಸಾವಿರದಿಂದ ಎಷ್ಟು ಹೊಟ್ಟೆಗಳು ತುಂಬಿಯಾವು? ಇರಲಿ ಪಾಪ....ಶ್ಯಾಮಣ್ಣ ಇರಲಿ....ಹಾಲು ಕೊಡುವ ಎಮ್ಮೆಗಾದರೂ ಹಿಂಡಿ ಕೊಡಬೇಕಲ್ಲವೆ? ನಿಮ್ಮ ಪತ್ರಿಕೆಯಿಂದ ಸಿಕ್ಕುವ ಲಾಭವು ಈ ಚಿಕ್ಕ ಸಂಸಾರವನ್ನು ನಡೆಯಿಸುತ್ತಿದೆ. ಆ ಶ್ಯಾಮ

ಇಷ್ಟೆಲ್ಲದಕ್ಕೂ ಕಾರಣವಾದರೆ ದೂರ ಮಾಡಬೇಕಾದುದು ಏಕೆ? ಆದರೆ ಒಂದರ ವಿಷಯದಲ್ಲಿ ಎಚ್ಚರ ಕೊಡುತ್ತೇನೆ. "ಗಂಡಸರ ಅಧಿಕ ಪ್ರಸಂಗ" ಎಂಬ ಒಂದು ವಿಷಯವಿದೆ. ಪ್ರಪಂಚದ ವಾಸನೆ ಇಲ್ಲದ ನಿಮಗೆ ಅದೇನೆಂದು ತಿಳಿಯದು. ಅಂತಹದೇನಾದರೂ ಕಂಡುಬಂದರೆ ನನಗೆ ಗೊತ್ತಾದೀತು. ಆಗ ಹುಡಿಕಂಟಿಯ ಸೇವೆ ಸಂದೀತು....ಎಂಬುದು ನಿಮಗೆ ತಿಳಿದಿರಲಿ; ಅವನಿಗೆ ತಿಳಿವಂತೆ ಮಾಡಿ"

ಪ್ರಭಾಕರ—ಕಾಮಾಕ್ಷಿಯರಿಬ್ಬರೂ ಗಹಗಹಿಸಿ ನಕ್ಕರು. "ಆಗ ಬಹುದು ಚಿಕ್ಕಮ್ಮ. ನೀವು ಕೊಟ್ಟ ಎಚ್ಚರದ ಮಾತು ನಮಗೆ ವಜ್ರಕವಚ ವಾಗಿದೆ"—ಎಂದು ಪ್ರಭಾಕರ ಒಡಂಬಟ್ಟ.

೪

ಕಠಿಣವೆಂದು ಕರೆಯಬಹುದಾದ ರೋಗವೊಂದನ್ನು ವಾಸಿಮಾಡಿದ ಡಾಕ್ಟರನಿಗೆ ಸರ್ವಸಾಧಾರಣವಾದ ತೃಪ್ತಿ ಇದ್ದೇ ಇರುತ್ತದೆ. ಇರಲೇ ಬೇಕು. ಅದರಿಂದವನಿಗೆ ಆತ್ಮವಿಶ್ವಾಸ ಹೆಚ್ಚುತ್ತದೆ. ಜನವರ್ಗದ ಮತ್ತು ಅವನ ನಡುವಣ ದಾರಿ ವಿಶಾಲವಾಗುತ್ತದೆ. ಪ್ರಕೃತಿಗೂ ಅವನಿಗೂ ಹೆಚ್ಚಿನ ಸಂಪರ್ಕವುಂಟಾಗುತ್ತದೆ. ನಾಗೇಶನ ಹೃದಯದಲ್ಲಿ ಇಂತಹ ಸಂತೋಷ ಸಮಾಧಾನಗಳಾಗುವ ಸಂದರ್ಭಗಳು ಎಷ್ಟೋ ಬಂದಿದ್ದುವು. ಅವನಿಂದು ಮಂಗಳೂರಿನ ಗಣ್ಯ ಚಿಕಿತ್ಸಕರಲ್ಲಿ ಒಬ್ಬನೆನಿಸಿದ್ದ. ಅವರೆ ಶ್ಯಾಮಣ್ಣನನ್ನು ಸಜೀವವಾಗಿ ಚಿಕಿತ್ಸಾ ಮಂದಿರದಿಂದ ಹೊರಕಳುಹಿಸಿದ ದಿನ ಅವನಿಗೆ ಅನನುಚಿತವಾದ ಹೆಗ್ಗಳಿಕೆಸಂತಸಗಳ ಅನುಭವವಾಯಿತು. ಹೀಗೇಕೆ ಆಗಬೇಕು? ಶ್ಯಾಮಣ್ಣನ ಜೀವ ಒಮ್ಮೆ ಯಮನ ಮುಷ್ಟಿ ಯೊಳಗೆ ಅಡಗಿತ್ತು. ಬಿಡಿಸಿ ತಂದವ ತಾನು; ವಿಜಯಿಯಾದವನು ತಾನು. ಎಲ್ಲಿಯೋ ಹೇಗೋ ಕಳಚಿ ಬೀಳಬಹುದಾಗಿದ್ದ ಬಾಳನ್ನು ಸಂಪಾದಿಸಿ ತಂದು ದಾನಕೊಟ್ಟವನು ತಾನು. ಎಂದರೆ ನಾಗೇಶ....ಇದಕ್ಕೆ ಯಾರೆಲ್ಲ ಕೃತಜ್ಞರಾಗಿರಬೇಡ? ಪ್ರಭಾಕರ ಕಾಮಾಕ್ಷಿಯರ ಪತ್ರಿಕಾ

ಸಂಸಾರದ ನಿರ್ವಾಹವೇ ಇವನಿಂದಾಗುತ್ತಿದ್ದರೆ ಅವಶ್ಯವಾಗಿ ಅವರು ಕೃತಜ್ಞತೆಯನ್ನು ಸಲಿಸಬೇಕು; ಸಲಿಸಿಯೂ ಇದ್ದಾರೆ. ಆದರೆ ಇಷ್ಟ ರಿಂದಲೇ ಪೂರ್ಣ ತೃಪ್ತಿ ಅವನಿಗಿಲ್ಲ. ಪ್ರಭಾಕರನಿಗೆ ಇಂತಹ ಕಠಿಣ ರೋಗವೊಂದು ಏಕೆ ಬರಬಾರದು? ಕಾಮಾಕ್ಷಿ ಇದೇ ಮಂದಿರಲ್ಲಿ ರೋಗ ಪರವಶೆಯಾಗಿ ಕಡೆದು ಬಿದ್ದು ತನ್ನ ಶುಶ್ರೂಷೆಯಿಂದ ಪುನರ್ಜನ್ಮ ಪಡೆದು ಮುಂದಳಬಾರದೇಕೆ? ಡಾಕ್ಟರಿಗೆ ಇಂತಹ ಭಾವನೆ ಬರಲಾಗದು ಎಂಬುದು ನಿಜ. ಆದರೆ ಆ ಪ್ರಭಾಕರ—ಆ ಕಾಮಾಕ್ಷಿ....ಇವರ ವಿಷಯದಲ್ಲಿ ನಾಗೇಶನಿಗೆ ಅಂತಹ ನಿರೀಕ್ಷಣೆಯಿದೆ; ಪ್ರಬಲವಾದ ಆಸೆಯಿದೆ. ಕೇವಲ ಅವರ ಕೃತಜ್ಞತೆಯನ್ನು ಸಂಪಾದಿಸುವ ಪುಣ್ಯಕ್ಕಾಗಿ ಇಂತಹ ಅವಸ್ಥೆಯೇಕೆ ಬರಬಾರದು? ಎಂದು ಅವನ ಮನಸ್ಸಿನ ಒಳಗೊಳಗೆ ಆಲೋಚನೆಯೊಂದು ಮಿಂಚುತ್ತಿತ್ತು. ಗಿದ್ದ ವೀರನು "ಇನ್ನು ಯಾರನ್ನು ಗೆಲ್ಲೋಣ?" ಎಂದು ವಿಜಯಗಳನ್ನು ಹುಡುಕುತ್ತಾ ಬರುವಂತೆ ಅವನೂ ಇದ್ದ. ಅವನು ಮಾತ್ರ ಬಲು ದೂರದ ಲೋಕವನ್ನು ನೋಡಲಿಲ್ಲ. ಅವನ ಲೋಕ ಪ್ರಭಾಕರನ ಮನೆ ಮಾತ್ರ. ಅವನು ಗೆಲಬೇಕಾದುದು ಆ ಭೂಭಾಗ ದಲ್ಲಿ ಮಾತ್ರ!

ನಾಗೇಶನ ಆಲೋಚನೆಗಳು ಹೀಗೇಕೆ? ಎಂದು ತಿಳಿಯಬೇಕಾದರೆ ಕೆಲ ವರ್ಷಗಳ ಹಿಂದೆ ನಡೆದ ಘಟನೆಗಳ ಬೇರನ್ನು ಕಿತ್ತು ನೋಡಬೇಕು. ಅಂದು ಈ ಕಾಮಾಕ್ಷಿ ಮುದ್ದು ಮೋಹಿಸುವ ಚಿಕ್ಕ ಹುಡುಗಿಯಾಗಿದ್ದಳು. ಕಣ್ಣಿನಲ್ಲಿ ಲಜ್ಜೆ ಸಡಗರಗಳು ಕಣ್ಣುಮುಚ್ಚಾಟವಾಡುತ್ತಿದ್ದುವು. ಮುಖ ದಲ್ಲಿ ಎಸ್ತುಸಿಂತು ಕೈಹೊಡೆದು ಕರೆವ ಸೊಬಗು ನಲಿದಾಡುತ್ತಿತ್ತು. ನಾಗೇಶ ಆಕೆಯನ್ನು ಕಂಡುದೇ ತಡ. ಅವನ ಮನಸ್ಸು ಅಲ್ಲಿಯೇ ನೆಟ್ಟಿತು. ಅವಳು ನಾಗೇಶನ ಅರ್ಧಾಂಗಿ ಎನಿಸುವ ಸಂಭವವೂ ಇತ್ತು.... ಆದುದೇನು?

ನಾಗೇಶ ಪಾಪಿಯೆನ್ನಬೇಡವೆ? ಆತ ಪಡುಬೈಲು ಕೇಶವಯ್ಯ ನವರ ದ್ವಿತೀಯ ಪತ್ನಿಯ ಅಣ್ಣನ ಮಗನಾಗಿ ಹುಟ್ಟುವ ಬದಲು, ಪ್ರಥಮ ಪತ್ನಿಯ ಸೋದರ ಪುತ್ರನಾಗಿರುತ್ತಿದ್ದರೆ, ಸೋದರ ಸಂಬಂಧದಿಂದ,

ಕಾಮಾಕ್ಷಿ ಅವನ ಸೊತ್ತಾಗುತ್ತಿದ್ದಳು. ಕೇಳುವ ಪಡೆಯುವ ಹಕ್ಕು ಅವನಿಗಿರುತ್ತಿತ್ತು. ಕೇಶವಯ್ಯನವರ ಪ್ರಥಮ ಪತ್ನಿ ಭಾಗೀರಥಿ ಯೌವನ ದಲ್ಲಿಯೇ ಕಾಮಾಕ್ಷಿಯೆಂಬ ಒಂದೇ ಒಂದು ರತ್ನವನ್ನು ಲೋಕದ ಮುಂದಿಟ್ಟು ಮಾಯವಾದಳು. ಸಕಾರಣವಾಗಿಯೇ ಕೇಶವಯ್ಯ—ಜಮೀನುದಾರ ಕೇಶವಯ್ಯ, ಬೇರೆ ಯಾವುದನ್ನೂ ನೋಡದೆ, ಸೌಂದರ್ಯ ತಾರುಣ್ಯಗಳನ್ನು ಮಾತ್ರ ಕಂಡು ಬಡ ಕುಟುಂಬದ ಕೂಸಾದ ಸುಶೀಲಮ್ಮ ನನ್ನು ಮದುವೆಯಾದನು. ಸುಶೀಲಮ್ಮನ ಅಣ್ಣನ ಮಗನಾಗಿ ಹುಟ್ಟಿದ ದುರ್ಭಾಗ್ಯ ನಾಗೇಶನದಾಯಿತು. ನಾಗೇಶನೊಬ್ಬ ಸ್ವಯಂಭು. ತನ್ನ ತಂದೆಯ ಪ್ರೋತ್ಸಾಹವಿಲ್ಲದೆ, ಬಂಧು ಬಳಗದವರನ್ನು ಬೇಡಿಕಾಡಿ ಹಣ ವನ್ನು ಸಂಗ್ರಹಿಸಿ ವೈದ್ಯವನ್ನು ಅಭ್ಯಾಸಿಸಿ ಡಾಕ್ಟರನೆನಿಸಿಕೊಂಡ. ಕೊನೆಯ ಪರೀಕ್ಷೆಗೆ ಹೋಗುವ ವರ್ಷ ಆತನಿಗೆ ಕಾಮಾಕ್ಷಿಯನ್ನು ಕೇಳುವ ಧೈರ್ಯ ಬಂತು. ಸುಶೀಲಮ್ಮನ ಮುಖದಿಂದ ಆ ಬೇಡಿಕೆಯನ್ನು ಹೊರಡಿಸಿದ. ಮೋಹದ ಮಡದಿಯೆಂಬ ಕಾರಣದಿಂದ, ನಾಗೇಶನು ವೈದ್ಯಕೀಯದಲ್ಲಿ ಹೆಸರು ಸಂಪಾದಿಸುವ ನಿರೀಕ್ಷಣೆಯಿಂದ, ಎಲ್ಲದಕ್ಕಿಂತಲೂ ಹೆಚ್ಚಾಗಿ ದ್ವಿತೀಯ ಪತ್ನಿಯ ಮತ್ತು ತಮ್ಮ ಪ್ರೇಮಕ್ಕೆ ತಡೆಯುಂಟಾಗಬಾರದೆಂಬ ಕಾರಣದಿಂದ, ಕೇಶವಯ್ಯ ಈ ಸಂಬಂಧಕ್ಕೆ ಒಪ್ಪುತ್ತಿದ್ದ. ಆಗ ಪ್ರೌಢವಿದ್ಯೆ ಯನ್ನು ಕಲಿಯುತ್ತಿದ್ದ ಕಾಮಾಕ್ಷಿಯ ಕಿವಿಗೆ ಈ ವಾರ್ತೆ ಅಯಾಚಿತವಾಗಿ ಬಿತ್ತು. "ಥೂ! ಆ ಹೆಗ್ಗಣವನ್ನು ನಾನು ಮದುವೆಯಾಗಬೇಕೆ?" ಎಂದವಳು ಗರ್ಜಿಸಿದಳು. ಮದುವೆಯ ಪ್ರಸ್ತಾವ ಅಲ್ಲಿಯೆ ನಿಂತು ಹೋಯಿತು. ಸುಶೀಲೆ ಅಂಗಲಾಚಿ ಬೇಡಿಕಾಡಿ ಗಂಡನನ್ನು ಒಲಿಸು ತ್ತಿದ್ದಳು. ಆದರೆ ಕಾಮಾಕ್ಷಿ ಕೇಳಬೇಕೆ? ಹೀಗೆ ಒತ್ತಾಯದ ಮದುಮಗ ನಾಗಲು ನಾಗೇಶನಿಗೆ ಇಷ್ಟವಿರಲಿಲ್ಲ. ಅದು ಪೌರುಷಕ್ಕೆ ಕುಂದಲ್ಲವೆ?

ಸೌಂದರ್ಯದ ಸಾಮಾನ್ಯ ವಿಮರ್ಶಪ್ರಮಾಣದಂತೆ ನಾಗೇಶ ಸುರೂಪನಲ್ಲ. ಆದರೆ ಕುರೂಪನು ಎನ್ನಬರುವುದಿಲ್ಲ. ಬಣ್ಣ ನಸು ಗಪ್ಪಾಗಿದ್ದು, ಕಾಲು ಉದ್ದವಾಗಿದ್ದು, ಮೂಗು ನೀಳವಾಗಿದ್ದು, ಹಣೆ ಸ್ವಲ್ಪ ಅಗಲ ಕಿರಿದಾಗಿದ್ದಮಾತ್ರಕ್ಕೆ ಅಂತಹ ಒಬ್ಬ ವ್ಯಕ್ತಿಯನ್ನು "ಹೆಗ್ಗಣ"

ವನ್ನುವುದು ನ್ಯಾಯಸಮ್ಮತವೇ? ಇದು ಐಶ್ವರ್ಯದ ಸೊಕ್ಕಿನ ಪ್ರಭಾವ! ಎಂದವನು ಭಾವಿಸಿದ. ಅಂದಿನಿಂದ ಧನಿಕದ್ವೇಷಿಯಾದ. ಅಂದಿನಿಂದಲೆ ಕಾರ್ಲ್ ಮಾರ್ಕ್ಸ್‌ನ ಆರಾಧಕನಾದ. ಅಂದಿನಿಂದ ವಿವಾಹ ಬೇಡ ಎಂಬ ಭೀಷ್ಮಪ್ರತಿಜ್ಞೆ ಮಾಡಿದ. ಇಂದೂ ಅವನು ಅವಿವಾಹಿತನೆ. ವೃತ್ತಿಯಿಂದ ತುಂಬ ಹಣ ಬರುತ್ತದೆ. ದೊಡ್ಡ ಮನೆಯನ್ನು ಕೊಂಡುಕೊಂಡಿದ್ದಾನೆ. ದುಡ್ಡಿನ ಸಹಚರ ಸುಖಗಳು ಬೇಡವೆಂದರೂ ಹುಡುಕಿ ಬರುತ್ತಿವೆ. ಮದುವೆಯಾಗಿದ್ದು ಮನೆತುಂಬ ಮಗಳಿರುತ್ತಿದ್ದರೆ ಯಾವ ಸುಖಕ್ಕವನು ಬಾಹಿರನಾಗುತ್ತಿದ್ದನೋ ಅದರಲ್ಲಿಂದು ಓಲಾಡುತ್ತಿದ್ದಾನೆ. ಬೇರೇನೂ ಮಾಡುವುದಕ್ಕಿಲ್ಲದಾಗ ಸಮತಾವಾದವನ್ನು ಹೊಗಳುತ್ತಾನೆ.

ನಾಗೇಶನು ಬಡವನಾಗಿದ್ದರೆ, ಇಂಪೀರಿಯಲ್ ಬ್ಯಾಂಕಿನ ನೂರು ರೂಪಾಯಿ ಮುಜೂರಿಯ ಕರಣಿಕ ಸುಬ್ಬರಾಯರು ಕುಬೇರರಾಗಿರಲಿಲ್ಲ. ಕಾಮಾಕ್ಷಿಯ ಸೊಕ್ಕನ್ನು ಕಂಡು ಹಲ್ಲುಕಡಿಯುತ್ತಿದ್ದ ನಾಗೇಶನಿಗೆ, ಕಾಮಾಕ್ಷಿ, ಸುಬ್ಬರಾಯರ ಮಗ ಪ್ರಭಾಕರನನ್ನು ಕೈಹಿಡಿದುದರಿಂದ ಸ್ವಲ್ಪ ಸಮಾಧಾನವೇ ಆಯಿತು. ಆಕೆಯ ಸೊಕ್ಕಿಗೆ ಪ್ರತಿಕಾರವಾಯಿತು.... ಎಂದು ಮನಸ್ಸಿನೊಳಗೇ ನಗುತ್ತಿದ್ದ. ಕೇಶವಯ್ಯನವರಿಗೂ ಪ್ರಭಾಕರನ ಸಂಬಂಧವು ಅಷ್ಟು ಪಥ್ಯವಾಗಿ ತೋರದಿದ್ದರೂ ಪ್ರಾಯಬಂದ ಹುಡುಗಿ ಅವನನ್ನಲ್ಲದೆ ಅನ್ಯರನ್ನು ವರಿಸಲಾರೆನೆಂದು ಶಪಥಮಾಡಿದಾಗ ಅವರೇನು ಮಾಡಬಹುದಿತ್ತು? ಉಪಾಯವಿರಲಿಲ್ಲ. ಮಾತ್ರವಲ್ಲ ಸುಶೀಲಮ್ಮನ ಮನೋಗತಕ್ಕೆ ವಿರುದ್ಧವಾಗಿ ಸ್ವಾಭಿಪ್ರಾಯವನ್ನು ಕೊಟ್ಟು ಯೋಗ್ಯ ವರನಾದ ನಾಗೇಶನನ್ನು ವರಿಸಲೊಪ್ಪದಾಕೆ ಯಾರನ್ನು ಮದುವೆಯಾದರೇನು? ಎಂಬ ಸಿಡುಕುಸ್ವಭಾವವೂ ಇದ್ದುದರಿಂದ, ಹತ್ತು ಸಾವಿರ ರೂಪಾಯಿಯೊಂದಿಗೆ, ಕೇಶವಯ್ಯನವರು ಕಾಮಾಕ್ಷಿಯನ್ನು ದಾಟಿಸಿ ಬಿಟ್ಟರು. ಮಗಳಿಗೆ ಪ್ರಭಾಕರನಲ್ಲಿ ಒಲುಮೆಯಿದ್ದಿತೆಂಬುದು ಕೇಶವಯ್ಯನವರಿಗೂ—ಹತ್ತಿರದ ಪ್ರಪಂಚಕ್ಕೂ ತಿಳಿದಿದ್ದುದರಿಂದ, ಈ ಮದುವೆಗೆ ಒಡಂಬಟ್ಟನೆಂದು ಅವರನ್ನು ಯಾರಾದರೂ ದೂರಲುಂಟೆ? ಕೇಶವಯ್ಯನವರು ಬುದ್ಧಿವಂತಿಕೆಯ ಕೆಲಸವನ್ನೆ ಮಾಡಿದರು

ಅಂದಿನಿಂದ ಕಾಮಾಕ್ಷಿಯ ಪರಿಸ್ಪಂದದಿಂದ ದೂರವಾಗಿದ್ದ ನಾಗೇಶ, ಈ ಹತ್ತೆಂಟು ವರ್ಷಗಳಲ್ಲಿ ಹತ್ತು ಬಾರಿಯಾದರೂ ಅವಳನ್ನು ಕಂಡಿದ್ದನೋ ಇಲ್ಲವೋ? ಅಂತೂ ದೀರ್ಘಕಾಲ ನೋಡುವ ಸಂದರ್ಭ ಬಂದಿರಲಿಲ್ಲ. ಇಂದು ನೋಡುತ್ತಾನೆ. ವಿಕಸಿತವಾದ ಭವ್ಯ ಸೌಂದರ್ಯದ ಕನಸೊಂದು ಕಾಮಾಕ್ಷಿಯ ರೂಪದಲ್ಲಿ ಎದ್ದು ಕಾಣಿಸುತ್ತಿದೆ. ನಾಗೇಶನಿಗೆ ತನ್ನ ದೌರ್ಭಾಗ್ಯದ ನೆನಪಾಗದೆ ಇರುವುದಾದರೂ ಹೇಗೆ?

"ಹೆಗ್ಗಣವಿದು ಸಾಮಾನ್ಯವಾದ ಹೆಗ್ಗಣವಲ್ಲ. ಅದರ ಕಾಲ ಬುಡದಲ್ಲಿ ಬಿದ್ದು ಕಾಮಾಕ್ಷಿಯಂತಹ ಅಪ್ಸರಃ ಸ್ತ್ರೀಯರು, ಪ್ರಭಾಕರ ನಂತಹ ಗಂಧರ್ವರು, ಜೀವನಾರೋಗ್ಯಗಳನ್ನು ಬೇಡಿ ಪಡೆಯಬೇಕು"— ಎಂದಾದರೆ ನಾಗೇಶನ ಹೆಮ್ಮೆ ಎಷ್ಟು ಎತ್ತರಕ್ಕೆ ಬೆಳೆಯದು? ಅವನಿಗೆ ಬೇಕಾದುದೂ ಅದೆ. ಒಂದು ದಿನ ಕಾಮಾಕ್ಷಿ....ತನ್ನ ತಾರುಣ್ಯ ಸೌಕು ಮಾರ್ಯಗಳನ್ನು ಅಪಶಬ್ದದಿಂದ ರೋಡಾಡಿದ ಆ ದುರಹಂಕಾರಿಣಿ, ತ್ರಾಹಿ! ತ್ರಾಹಿ! ಎಂದು ಪಾದಾವನತಳಾಗುವುದನ್ನೂ ತನ್ನ ವಿವಾಹಕ್ಕಾಗಿ ಪಶ್ಚಾ ತ್ತಾಪಪಡುವುದನ್ನೂ ಅವನು ಕಣ್ಣಾರೆ ನೋಡಬಯಸಿದ್ದನು. ಅದು ಅಸಾಧ್ಯ ವಾದರೆ ಶ್ಯಾಮಣ್ಣನನ್ನು ಹಸ್ತಕನನ್ನಾಗಿ ಮಾಡಿ ಪ್ರಭಾಕರ ಕಾಮಾಕ್ಷಿಯರ ಮನೆಯೊಳಗೆ ಕಾಲನ್ನಾದರೂ ಊರಬೇಕೆಂದು ಬಯಸಿದ್ದನು.

ಆದುದರಿಂದಲೆ, ಶ್ಯಾಮಣ್ಣನನ್ನು ತಮ್ಮ ಮನೆಗೆ ಕೊಂಡೊಯ್ಯಲು ಬಂದಾಗ ಪ್ರಭಾಕರ ಕಾಮಾಕ್ಷಿಯರಿಗೆ ಮುಂಜಾಗ್ರತೆಯ ಮಾತುಗಳನ್ನು ಹೇಳಬೇಕಾಯಿತು. ಇನ್ನು ಕೆಲಕಾಲ ಅತಿ ಜಾಗರೂಕತೆ ಬೇಕು. ಅಲಕ್ಷಿಸಿದರೆ ರೋಗ ಮರುಕೊಳಿಸಬಹುದು. ಅಥವಾ ಒಂದು ಕಾರಣ ದಿಂದ ಬಂದ ರೋಗ ಇನ್ನೊಂದು ಕಾರ್ಯದಲ್ಲಿ ಪರಿಣಮಿಸಬಹುದು. ವಾರಕ್ಕೆ ಮೂರಾವೃತ್ತಿಯಾದರೂ ದೇಹಪರೀಕ್ಷೆಯಾಗಬೇಕು. ಶ್ಯಾಮಣ್ಣ ಮನೆಬಿಟ್ಟು ಕದಲಬಾರದು; ಎಂದಮೇಲೆ ನಾಗೇಶನೇ ಅಲ್ಲಿಗೆ ಹೋಗ ಬೇಕಷ್ಟೆ? ಈ ಅವಧಿ ಎಷ್ಟುಕಾಲ ಇದ್ದೀತೆಂದು ಹೇಳಬರುವುದಿಲ್ಲ. ಅದು ವರೆಗೆ ತನ್ನ ಆರೈಕೆ ಸಾಗುತ್ತಿರಬೇಕು. ಹೀಗೆಂದು ತನ್ನ ಮತ್ತು ಅವರ ಸಂಬಂಧ ಕಡಿದುಹೋಗದಂತೆ ಏರ್ಪಡಿಸಿದನು.

ಕಾಮಾಕ್ಷಿ ಪ್ರಭಾಕರರಿಬ್ಬರೂ ಒಕ್ಕೊರಳಿನಿಂದ "ಆಗಬಹುದು; ಅದಕ್ಕೇನು ಆಕ್ಷೇಪ?" ಎಂದರು.

೫

ಪ್ರಭಾಕರನ ಮನೆಗೆ ಬಂದು ನೆಲಸಿದುದೇ ತಡ; ಶ್ಯಾಮಣ್ಣನ ಶರೀರವು ತುಂಬುತ್ತಾ ಬಂತು. ಕಿತ್ತಳೆಯ ಒಣ ಸಿಪ್ಪೆಯಾಗಿದ್ದ ಕೆನ್ನೆಗಳು ಹಸಿಹಸಿಯಾದುವು. ಎಲುಬು ಗೂಡಾಗಿದ್ದ ಶರೀರದಲ್ಲಿ ರಕ್ತ ಸಂಚಾರವಾಗಿ ಮಾಂಸ ಕೂಡಿಬಂತು. ಆಯಾಸದಿಂದ ಮಾತಾಡುತ್ತಿದ್ದವನ ಮುಖದಲ್ಲಿ ಉಲ್ಲಾಸವು ಕಂಡುಬಂತು. ಶ್ಯಾಮಣ್ಣ ದೀರ್ಘಕಾಯದ ಆಜಾನುಬಾಹು; ತುಂಬು ಮೈಯ ಸೊಬಗ. ರೋಗವು ನುಂಗಿಬಿಟ್ಟು ಲುಪ್ತವಾಗಿದ್ದ ಆ ಹಿಂದಿನ ಕಾಂತಿಯೆಲ್ಲ ಮತ್ತೊಮ್ಮೆ ಒದಗಿ ಬಂದು ಆತನು ಮತ್ತೊಮ್ಮೆ ಪುರುಷರತ್ನನೆನಿಸಿಕೊಂಡ.

ಶ್ಯಾಮಣ್ಣನು ಮನೆಗೆ ಬಂದು ಹೆಚ್ಚುಕಾಲ ಹಸೆಹಿಡಿದಿರಲಿಲ್ಲ, ಶಾಂತಮ್ಮನ ರೋಷಾವೇಶಕ್ಕೆ ಎಡೆಕೊಡಲೂ ಇಲ್ಲ. ಡಾಕ್ಟರರ ನಿರ್ಬಂಧದಿಂದ ಮನೆಯೊಳಗೇ ಕುಳಿತಿರಬೇಕಾಗಿದೆ. ಆದರೆ ಆಲಸ್ಯವೆಂದರೆ ಮರಣಕ್ಕಿಂತ ಘೋರವಲ್ಲವೆ? ಆರು ವರ್ಷದ ಮಗುವಾಗಿದ್ದ ಮೊದಲುಗೊಂಡು ನಲುವತ್ತು ವರ್ಷದ ಗಂಡಾಗುವವರೆಗೆ ಪರಕೀಯರ ನಡುವೆ, ಒದ್ದಾಟಗಳ ಮಧ್ಯದಲ್ಲಿ, ಕಷ್ಟ ನಿಷ್ಠುರಗಳ ಸಂಕಟದಲ್ಲಿ ಕಾಲಕಳೆದಾತ ಈಗ ನಿರುದ್ಯೋಗಿಯಾಗಿ ಹೇಗೆ ಕುಳಿತಾನು? ಮನಸ್ಸಿಗೆ ಶ್ರಮಮಾಡಿಕೊಳ್ಳಬೇಡಿ; ದೇಹಕ್ಕೆ ಶ್ರಮಕೊಟ್ಟರೂ ಬಾಧಕವಿಲ್ಲ—ಎಂದೊಮ್ಮೆ ನಾಗೇಶರಾಯರು ಹೇಳಿದ್ದರು. ಶ್ಯಾಮಣ್ಣನ ಮನಸ್ಸಿಗೂ ವಿಶ್ರಾಂತಿಯಿಲ್ಲ. ದೇಹಕ್ಕೂ ಇಲ್ಲ. ಇವರು ಯಾರು? ನಾನು ಯಾರು? ಏನೊ ಆನುಷಂಗಿಕ ಕಾರಣಗಳಿಂದ ನಾನೀ ಕುಟುಂಬದ ವ್ಯಕ್ತಿಯಾಗಿದ್ದೇನಲ್ಲದೆ ಬೇರೆ ಕಾರಣವುಂಟೆ? ಇತರ ಸಂಪಾದಕರು ತಮ್ಮ ಅಡಿಯಾಳುಗಳ ಮೇಲೆ ಇಷ್ಟು ಮಮತೆಯಿಡುವರೇ? ನಾನು ಸತ್ತಿದ್ದರೆ 'ಏನೋ ಪಾಪ ಸತ್ತು ಹೋದ' ಎಂದೊಮ್ಮೆ ಕಣ್ಣೊರಸಿ ಪತ್ರಿಕೆಯಲ್ಲಿ ಒಂದು ಪಂಕ್ತಿಯ ವ್ಯಸನ

ವನ್ನು ಪ್ರದರ್ಶಿಸುತ್ತಿದ್ದರು. ಇಷ್ಟು ವೆಚ್ಚ ಮಾಡುತ್ತಿದ್ದರೇ? ಕಷ್ಟ ಪಡುತ್ತಿದ್ದರೇ? ಹೊರಗಿನ ಜೀವವನ್ನು ಮನೆಯೊಳಗೆ ಕರೆದು ಆಸರೆ ಕೊಡುತ್ತಿದ್ದರೇ? ಇಂತಹ ಕೃಪಾಳುಗಳಿಗೆ ಪ್ರತಿಫಲವಾಗಿ ತಾನೇನುಕೊಟ್ಟೆ? ಏನು ಕೊಡಬಹುದು? ಎಂದವನಿಗೆ ತಿಳಿಯಲಿಲ್ಲ.

ಎರಡು ತಿಂಗಳ ನಿರುದ್ಯೋಗದಲ್ಲಿ ಶ್ಯಾಮಣ್ಣ ಮನೆಯಲ್ಲಿ ಸಂದು ಕೂಡಿಸೇರಿಹೋದ. ಸಾಂತಮ್ಮನಿಗೆ ಆಶ್ಚರ್ಯ....ಆಕೆ ಎಷ್ಟೋ ಗಂಡುಸರನ್ನು ಕಂಡಿದ್ದಾಳೆ. ಇಂತಹ ಸ್ವಚ್ಛ ಹೃದಯರನ್ನು ಕಾಣಲಿಲ್ಲ. ಒಂದು ನಿಮಿಷವಾದರೂ ಈತನು ಸುಮ್ಮನೆ ಕುಳಿತಿರುವುದುಂಟೆ? ಮೈಯಲ್ಲಿ ಸ್ವಲ್ಪ ಶಕ್ತಿ ಬಂದಂದಿನಿಂದ ಪ್ರಾತಃಕಾಲ ಐದು ಘಂಟೆಗೆ ಏಳುತ್ತಾನೆ. ಬಚ್ಚಲಿಗೆ ನೀರು ಹಾಕುತ್ತಾನೆ. ಕಸಗುಡಿಸುತ್ತಾನೆ. ಸ್ನಾನಮಾಡಿ ತಾನೇ ಎರಡು ಕೊಡ ನೀರು ತಂದು ಸಾಂತಮ್ಮನ ಅಡಿಗೆಗೆ ನೆರವಾಗುತ್ತಾನೆ. ನೆಲದ ಮೇಲೆ ಚಾಪೆ ಚಕ್ಕಣಗಳು ಬಿದ್ದಿದ್ದರೆ ಮಡಿಚಿ ಮೇಲಿಡುತ್ತಾನೆ. ಒಮ್ಮೊಮ್ಮೆ ಅಗಿಯುವುದಕ್ಕೆ ಬಿಟ್ಟ ಕರು ಬಾಲವನ್ನು ನೆಟ್ಟಗೆ ನೆಗಹಿ ಹಿತ್ತಲಲ್ಲೆಲ್ಲ ಓಡುವುದುಂಟು. ಸಾಂತಮ್ಮ ನೂರಾರು ಶಾಪ ಕೊಡುತ್ತಾ ಕೈಯಲ್ಲಿ ಒಂದು ಹಿಡಿ ಹುಲ್ಲು ಹಿಡಿದು....'' ಅಂಬಾ! ಅಂಬಾ! '' ಎಂದು ಕರೆದು ಕರೆದು ಹೇಗಾದರೂ ಕರುವನ್ನು ಹಟ್ಟಿಗೆ ಕೂಡಬೇಕಾಗುತ್ತಿತ್ತು. ಈಗ ಆ ಕಷ್ಟವಿಲ್ಲ. ಕರು ಬಾಲ ನೆಟ್ಟಗೆ ಮಾಡಿದೊಡನೆ ಗುರಿ ನೋಡಿ ಹೊಡೆದ ಬಾಣದಂತೆ ಶ್ಯಾಮಣ್ಣ ಓಡಿ ಹಿಡಿದು ತಂದು ಗೂಟಕ್ಕೆ ಕಟ್ಟಿಹಾಕುತ್ತಾನೆ. ಬೇಕಾದರೆ ತಾನೇ ಹಾಲುಕರೆದು ಕೊಡುತ್ತಾನೆ. ಏನಾದರೂ ಸಾಮಾನು ಬೇಕಾಗಿದ್ದರೆ ತಾನೇ ಹೋಗಿ ತಂದು ಕೊಡುತ್ತಾನೆ. ಪತ್ರಿಕೆಯ ಕೆಲಸಗಳಿಂದ ದೂರವಾಗಿ ಕುಳಿತಿರಬೇಕೆಂದೂ, ಅದೇ ಆತನ ಜೀವವನ್ನು ಹಿಂಡಿದುದೆಂದೂ ನಾಗೇಶರಾಯರು ಹೇಳಿದ ಕಾರಣ ಅದನ್ನೆಲ್ಲ ಸದ್ಯಕ್ಕೆ ಬಿಟ್ಟು ಶುದ್ಧ ಮನೆಯೊಳಗಿನ ಆಳಿನಂತೆ ಬಾಳಿಕೊಂಡಿದ್ದಾನೆ. ಒಮ್ಮೆ ಒದ್ದೆ ಬಟ್ಟೆಯನ್ನುಟ್ಟು ನೀರು ತರುತ್ತಿದ್ದ ಸಾಂತಮ್ಮ ತುಳಸಿ ಕಟ್ಟೆಯ ಸಮೀಪ ಬರುವಾಗ ಉದ್ದಂಡ ನಮಸ್ಕಾರ ಮಾಡಿದಳು. ಅಂಗೋಪಾಂಗಗಳೆಲ್ಲ ಮಾಂಸದ ಒಂದೇ ಮುದ್ದೆಯಾದಂತೆ ಬಿದ್ದು ಅತ್ತಿತ್ತ ಅಲುಗಾಡ

ಲಾರದೆ ಗೋಳಿಟ್ಟಳು. ಕೆಲಸದ ಹೆಣ್ಣು ರಾಮಕ್ಕನನ್ನೂ ಅವಳ ತಾಯಿ ತಂಗಿಯರನ್ನೂ ಕರೆದು ಸಾಂತಮ್ಮನನ್ನು ಹೊರಿಸಿ ಹಾಸಿಗೆಯ ಮೇಲಿರಿಸಿ ಡಾಕ್ಟರರನ್ನು—ನಾಗೇಶರಾಯರನ್ನು ಬರಿಸಿ—ಏನೆಲ್ಲ ಆಗಬೇಕೋ ಅದ ನ್ನೆಲ್ಲ ಮಾಡಿಸಿದ. ಸಾಂತಮ್ಮನ ಕೈಕಾಲು ಅಲ್ಲಾಡದ ಕಾಲದಲ್ಲಿ ತಾನೆ ಅಡಿಗೆಮಾಡಿ ಅನ್ನ ಬಡಿಸುತ್ತಿದ್ದ. ಈ ಗುಣಗಳನ್ನು ಸಾಂತಮ್ಮ ಹೇಗೆ ಮರೆತಾಳು ?

ಒಂದು ದಿನ ಸಾಯಂಕಾಲ ಶ್ಯಾಮಣ್ಣ ಹೊರಗೆ ಹೋಗಿದ್ದ ಕಾಲದಲ್ಲಿ ಪ್ರಭಾಕರನನ್ನು ಕರೆದು ಸಾಂತಮ್ಮ "ಮಗು....ನಿಮ್ಮ ಶ್ಯಾಮಣ್ಣ ತಾಜಾ ಮನುಷ್ಯನಪ್ಪ....ಬಂಗಾರದಂತಹ ಮನುಷ್ಯ....ಅಂದು ನಾನು ಹೇಳಿದ ಬಿರುಮಾತುಗಳನ್ನೆಲ್ಲ ಮರೆತುಬಿಡು" ಎಂದಳು.

"ನೀನು ಹೇಳಿದುದರಲ್ಲಿ ತಪ್ಪೇನು ತಾಯಿ? ಮುಖ ನೋಡಿ ದೊಡನೆ ಮನುಷ್ಯರ ಗುಣ ತಿಳಿದುಬಂದೀತೆ? ನೀನೂ ಶ್ಯಾಮಣ್ಣನ ಕುರಿತು ಏನೋ ಹೇಗೋ ಎಂದು ಭಾವಿಸಿದ್ದೆ. ಪ್ರತ್ಯಕ್ಷ ಕಂಡ ಮೇಲೆ ನಮ್ಮ ಮಾತನ್ನು ನಂಬುವೆಯಲ್ಲವೆ?" ಎಂದ ಪ್ರಭಾಕರ....

"ನಂಬುವುದೇ ಮಗು! ಈ ಕಲಿಯುಗದಲ್ಲಿ ಇಂತಹ ಗಂಡುಸರು ಹುಟ್ಟುತ್ತಾರೆ—ಎಂಬುದನ್ನು ನಂಬುವುದು ಹೇಗೆ ಮಗು?"

"ಅಂತಹ ಪರಿಶುದ್ಧ ವ್ಯಕ್ತಿಯಾದ ಕಾರಣವೇ ನಮಗೆ ಅವನಲ್ಲಿ ಬಂಧುಪ್ರೇಮ"

"ಬಂಧುಗಳು....ಬಂಧುಗಳು....ಬಂಧುಗಳೇನು ಮಾಡುತ್ತಾರೆ ಮಗು ....ನಾನು ತುಳಸಿ ಕಟ್ಟೆಯಲ್ಲಿ ಉರುಳಿ ಬಿದ್ದೆನಲ್ಲ....ಆಗ ನನ್ನ ಬಂಧು ಗಳು....ನಿನ್ನ ಬಂಧುಗಳು, ಎಷ್ಟು ಮಂದಿ ಬಂದರು? ನಮ್ಮ ಬೀಗರು ಒಮ್ಮೆ ಯಾದರೂ ಮುಖ ತೋರಿಸಿದರೇ? ಈ ಶ್ಯಾಮಣ್ಣ....ಪೂರ್ವ ಜನ್ಮದಲ್ಲಿ ನನ್ನ ಮಗನಾಗಿ ಹುಟ್ಟಿದ್ದಿರಬೇಕು....ಅವನು ಓಡಿಬರಬೇಕೆ? ಅವಿಚಾರಿಗಳಾಗಿದ್ದರೆ ಕೂಡಲೆ ನನ್ನನ್ನು ಎತ್ತಿತಂದು ಮನೆಯೊಳಗೆ ಇರಿಸು ತ್ತಿದ್ದರು. ಅವನು ಹಾಗೆ ಮಾಡಲಿಲ್ಲ ನೋಡು. ಪ್ರಾಯವಾದರೇನು ನಾನು ಪರಸ್ತ್ರೀಯಲ್ಲವೆ? ಕೆಲಸದ ಹೆಂಗುಸರನ್ನು ಕರೆಸಿ ಅವರಿಂದ

ನನ್ನನ್ನು ಈಚೆಗೆ ಸಾಗಿಸಿದ. ಮನುಷ್ಯರ ನಿಜ ಸ್ವಭಾವ ತಿಳಿಯಬೇಕು ಇಂತಹ ಸಂದರ್ಭದಲ್ಲಿ. ಕುಲೀನ ಗುಣಗಳು ಕಾಣಿಸಿಕೊಳ್ಳುವುದು ಇಂತಹ ಸಂದರ್ಭದಲ್ಲಿ...."

"ಸಂದೇಹವೇನು ಚಿಕ್ಕಮ್ಮ...."

"ಇಷ್ಟು ದಿನ ಇಲ್ಲಿದ್ದನಲ್ಲ....ಪ್ರತಿದಿನ ನಾನು ನೋಡುತ್ತೇನಲ್ಲ.... ಒಮ್ಮೆಯಾದರೂ ಅತ್ತಿತ್ತ ಕಣ್ಣು ತಿರುಗಿಸಿ ನೋಡಿದುದುಂಟೆ? ನೋಡಿದರೆ ಸೂರ್ಯದೇವ ನೋಡುವಂತೆ ನೇರಾಗಿ ನೋಡುತ್ತಾನೆ....ಅದೇ ನೋಡು ಗಂಭೀರ ಸ್ವಭಾವವೆಂದರೆ! ಆ ನಾಗೇಶನನ್ನೂ ಇವನನ್ನೂ ಹೋಲಿಸು.... ಅವನು ಶುದ್ಧ ಅಧಿಕಪ್ರಸಂಗಿ....ಅನುಮಾನವಿಲ್ಲ....ಒಂದು ಕಾಲ ಸದ್ದಾದರೆ ಆ ಕಡೆಗೆ ಕಣ್ಣು ತಿರುಗಿಸದೆ ಇಲ್ಲ....ಸೀರೆಯನ್ನುಟ್ಟ ಕಪಿ ಬಂದರೂ ಇದು ಯಾರು ಎಂದು ವಿಚಾರಿಸದೆ ಇಲ್ಲ. ಏಕೆ ಆ ಪ್ರಶ್ನೆ ಕೇಳಬೇಕು? ಏಕೆ ಅತ್ತಿತ್ತ ಕಣ್ಣು ತಿರುಗಿಸಬೇಕು? ಹೇಳುವುದಕ್ಕೆ ಅವಕಾಶವಿಲ್ಲ. ಶ್ಯಾಮಣ್ಣನ ಜೀವ ಬದುಕಿಸಿದ್ದಾನೆ. ಯಮುನ ಪಟ್ಟಣದ ವರೆಗೆ ಹೋಗಿದ್ದ ನನ್ನನ್ನು ಹಿಂದೆ ಕರೆತಂದಿದ್ದಾನೆ. ಉಪಕಾರ ಮಾಡಿದ್ದಾನೆ. ಇನ್ನೂ ಉಪಕಾರ ಮಾಡಬಹುದು. ಆದರೂ ಹೇಳದೆ ನಿರ್ವಾಹವಿಲ್ಲ. ಶುದ್ಧ ಅಧಿಕಪ್ರಸಂಗಿ ಆತ. ಬರುತ್ತಾನೆ; ಹೋಗುತ್ತಾನೆ; ಹೆಚ್ಚುಕಾಲ ನಿಲ್ಲುವ ಸಂದರ್ಭ ವಿಲ್ಲವಾದುದರಿಂದ ನನ್ನ ಹಿಡಿಕುಂಟೆಯ ಸೇವೆಯನ್ನು ತಪ್ಪಿಸಿಕೊಂಡಿದ್ದಾನೆ. ಅಲ್ಲ; ನೋಡು....ನಮ್ಮ ಕಾಮಿ....ಸೊಸೆ....ಹೋದ ಕಡೆಗೆ ಕಣ್ಣುತೆಗೆಯದೆ ನೋಡುತ್ತಾನಲ್ಲ....ಏಕೆ ನೋಡಬೇಕು? ಒಬ್ಬಳು ಸ್ತ್ರೀಯ ಗುರುತು ಹಚ್ಚಬೇಕಾದರೆ ಎಷ್ಟುಕಾಲ ನೋಡುತ್ತಿರಬೇಕು? ನೀನೇ ಹೇಳು. ನಾನು ದೂರದಲ್ಲಿ ಬರುತ್ತೇನೆಂದು ಭಾವಿಸು. ನಿನ್ನ ಚಿಕ್ಕಮ್ಮನಿವಳು....ಎಂದು ಗುರುತಿಸಬೇಕಾದರೆ ಐದು ನಿಮಿಷ ರೆಪ್ಪೆ ಮುಚ್ಚದೆ ನೋಡುತ್ತಿರಬೇಕೆ? ನೀನೇ ಹೇಳು ಪ್ರಭ....ಜಾಗ್ರತೆ....ಎಚ್ಚರಕೊಡುತ್ತೇನೆ...."

ಪ್ರಭಾಕರನು ಆಯಾಸವಾಗುವಷ್ಟು ನಕ್ಕ....

"ನಗುವಷ್ಟೆ ಅಳುವುದುಂಟು ಮಗು....ಇದು ಸೃಷ್ಟಿ ನಿಯಮ.... ಕಾಮಿಗೆ ಬುದ್ಧಿ ಹೇಳು....ಅವಳಿಗೆ ವಯಸ್ಸಾಗಿದೆ; ಬುದ್ಧಿಬರಲಿಲ್ಲ.

ಐದಾರು ಹೆತ್ತು ಸಂಸಾರ ನೋಡಿಕೊಂಡಿರಬೇಕಾದವಳಿಗೆ ಸೌಟು ಹಿಡಿಯುವುದು ಹೇಗೆಂದು ತಿಳಿದಿಲ್ಲ. ಇದು ಚಂದವೇ ಮಗು....ಪತ್ರಿಕೆಯಂತೆ ಪತ್ರಿಕೆ....ಅವಳಿಗೇಕೆ ಪತ್ರಿಕೆ....ಹೆಂಗುಸರಿಗೆ ಊಟದ ಬಾಳೆ ಎಲೆಯೇ ಪತ್ರಿಕೆ. ಅದರ ಮೇಲೆ ಬಡಿಸುವುದೇ ಓದಿ ತಿಳಿಯಬೇಕಾದ ವಿದ್ಯೆ.... ಕಾಮಿ....ಪಾಪ....ಇನ್ನೂ ಅವಳ ಬುದ್ಧಿ ಆರು ವರ್ಷದ ಕೂಸಿನದು.... ಇಂತಹ ತಿಳಿಗೇಡಿಗಳೇ ಈ ಪ್ರಪಂಚದಲ್ಲಿ ಮೋಸಹೋಗುವವರು ಕಂಡೆಯಾ....''

ಎಲ್ಲದಕ್ಕೂ ಒಪ್ಪುವುದಕ್ಕೆ ಅವನು ಸಿದ್ಧನೇ ಆಗಿದ್ದ. ಅಷ್ಟರಲ್ಲಿ ಶ್ಯಾಮಣ್ಣ ಬಂದ; ಆತನ ಹಿಂದೆಯೇ ಕಾಮಾಕ್ಷಿ ಬಂದಳು. ಸಾಂತವ್ವ ಅಡಿಗೆ ಕೋಣೆಗೆ ನಡೆದಳು.

ಮೂವರು ಮುಖಮಂಟಪಕ್ಕೆ ಬಂದು ಕುರ್ಚಿಯ ಮೇಲೆ ಕುಳಿತುಕೊಂಡರು. ಕಾಮಾಕ್ಷಿ ಹೊಸ ವಾರ್ತೆಯೊಂದನ್ನು ತಂದಿದ್ದಳು....

" ಧನುರ್ಧಾರಿ ಎಂಬ ಪತ್ರಿಕೆ ಹೊರಡುವುದಂತೆ, ಕೇಳಿದಿರಾ? "

" ಗಾಳಿಸುದ್ದಿಯಿತ್ತು "

" ಇದು ಗಾಳಿಸುದ್ದಿಯಲ್ಲ."

" ಮತ್ತೇನು? "

" ಒಳಗೊಳಗೆ ಏರ್ಪಾಡು ನಡೆಯುತ್ತಿದೆ! "

" ಇರುವ ಪತ್ರಿಕೆಗಳಿಗೇ ಗ್ರಾಹಕರಿಲ್ಲದ ಕಾಲದಲ್ಲಿ....''

" ಯೋಗ್ಯವಾದುದು ಉಳಿಯುತ್ತಿದೆ; ಅನರ್ಹವಾದುದು ಅಳಿಯುತ್ತಿದೆ. "

" ನಾವು ಎಚ್ಚರದಿಂದಿರಬೇಕು "

" ಎಚ್ಚರ ಅವಶ್ಯವೆಂಬುದೇನೋ ನಿಜ. ಆದರೆ....''

" ಆದರೇನು ಕಾಮಿ....ನಮ್ಮ ಸ್ಥಾನಮಾನ ಶಾಶ್ವತವೆಂದು ನಿನ್ನ ಅಭಿಪ್ರಾಯವೇ? "

" ಅಭಿಪ್ರಾಯಗಳೆಂದರೆ ಅಂಗಡಿ ಸರಕುಗಳಲ್ಲ. ನಮ್ಮ ಸಂಗ್ರಾಮವು ಲೋಕಪ್ರಿಯವಾದುದು ಅದರ ಆಕರ್ಷಕ ಆವರಣದಿಂದಲ್ಲ; ಚಲಚ್ಚಿತ್ರ

ತಾರಾ ಚಿತ್ರಗಳಿಂದಲ್ಲ. ವಾರಭವಿಷ್ಯದಿಂದಲ್ಲ. ಪಾಪಕೂಪಗಳ ಕರ್ಮ ಕತೆಯಿಂದಲ್ಲ. ಸಮಾಜಕ್ಕೆ ದಾರಿದೋರುವ ಏನೋ ಒಂದು ಸಂಪ್ರದಾಯ ವನ್ನು ಅನುಸರಿಸಿದೆವು, ಜನರು ಮೆಚ್ಚಿದರು...."

"ಇನ್ನೂ ಮೆಚ್ಚುತ್ತಾರೆ....ಎಂಬ ಧೈರ್ಯವೇನು?"

"ಅಂತಹ ವಿಶ್ವಾಸ ಬೇಕಾಗಿಲ್ಲ. ಆದರೆ ಇರುವ ಮಟ್ಟಿಗೆ ನಾವು ಚೆನ್ನಾಗಿ ನಡೆಸಬೇಕಲ್ಲವೇ?"

"ಹೌದು; ನಡೆಸಬೇಕು. ಕಳೆದ ನಾಲ್ಕಾರು ತಿಂಗಳಿನಿಂದ ನಮ್ಮ ಕಾರ್ಯರಥದ ಗಾಲಿ ಕಳಚಿದಂತಾಗಿದೆ"—ಎಂದು ಪ್ರಭಾಕರ ಶ್ಯಾಮಣ್ಣನ ಕಡೆಗೆ ನೋಡಿದ.

"ಶರೀರ ಇಷ್ಟು ದುರ್ಬಲವೆಂದು ಈಗತಾನೆ ತಿಳಿದೆ" ಎಂದು ಶ್ಯಾಮಣ್ಣ ನಿಟ್ಟುಸಿರು ಕರೆದ.

"ಈದಿನ ನೀವು ನಗರ ಸಭಾಧ್ಯಕ್ಷರನ್ನು ಕಾಣಹೋಗಿದ್ದಾಗ ನಾಗೇಶ ರಾಯರು ಕಚೇರಿಗೆ ಬಂದರು"

"ಯಾವ ಅವಸರಕ್ಕಾಗಿ?"

"ಡಾ. ಭಾಮೆಯವರ ಗುರುತಿದೆಯಷ್ಟೆ?"

"ದೃಷ್ಟಿರೋಗದ ಭಾಮೆ!"

"ಹೌದು; ಅವರೇ! ಅವರ ಒಡೆತನದಲ್ಲಿ...."

"ಅವಶ್ಯವಾಗಿ ಇನ್ನೊಂದು ಪತ್ರಿಕೆ ಹೊರಡಲಿ"

"ಆ ಕುರಿತು ಮಾತಾಡುವುದಕ್ಕಾಗಿ ಬಂದರು!"

"ನಮ್ಮಿಂದೇನು ಸಹಾಯವಾಗಬೇಕಾಗಿದೆ"

"ಏನೂ ಇಲ್ಲ. ನಮ್ಮ ಪತ್ರಿಕೆಯಲ್ಲಿ ಸ್ತ್ರೀಸ್ವಾತಂತ್ರ್ಯದ ಪ್ರಚಾರವು ಸಾಕಾದಷ್ಟು ನಡೆದಲ್ಲಿ ಈ ಪತ್ರಿಕೆಗೇ ಅವರ ಬೆಂಬಲ ದೊರೆಯುವುದಂತೆ"

"ನಮ್ಮ ಧೋರಣವೇನು ಪ್ರಗತಿ ವಿರೋಧಿಯೆ?"

"ಅಲ್ಲ; ವಿರೋಧವಲ್ಲ. ಆದರೆ ಉಗ್ರತೆ ಸಾಲದಂತೆ."

"ಉಗ್ರ ನರಸಿಂಹನ ವೇಷ ಧರಿಸೋಣ" ಎಂದು ಶ್ಯಾಮಣ್ಣ ನಕ್ಕ.

"ನಾಗೇಶರಾಯರ ಮುಖದಿಂದ ತಿಳಿದುಬಂದ ವಿಷಯವಿಷ್ಟು. ಮಿಸ್. ಭಾಮೆ—ಬರುವ ಚುನಾವಣೆಗೆ ಪ್ರತಿಸ್ಪರ್ಧಿನಿಯಾಗಿ ನಿಲ್ಲುತ್ತಾಳೆ. ಕೆಲ ಸಹಸ್ರ ರೂಪಾಯಿಗಳನ್ನು ಸುರಿಯುವುದಕ್ಕೆ ಸಿದ್ಧಳಾಗಿದ್ದಾಳೆ. ಆ ಬಗ್ಗೆ ಅವಳ ತಂಬಟೆ ಬಾರಿಸುವ ಪತ್ರಿಕೆಯೊಂದು ಬೇಕಾಗಿದೆ. ನಮ್ಮ ಆಶ್ರಯ ಸಿಕ್ಕದರೆ ಈ ಕಡೆಗೆ ಅನುಗ್ರಹ ಬೀರುತ್ತಾಳೆ....ದೊರೆಯದಿದ್ದರೆ...."

"ಇಂತಹ ಬೆದರಿಕೆಗೆ ನಾವು ಬಾಗಬೇಕಾಗಿಲ್ಲ; ನಮ್ಮ ನೀತಿ—ಅವರ ನೀತಿ ಒಂದುಗೂಡುವುದಿದ್ದರೆ ಕೂಡಲಿ. ತಾನಾಗಿ ಕೂಡಲಿ.... ಇಲ್ಲವಾದರೆ"

"ಇಲ್ಲವಾದರೆ ಎಂಬ ಪ್ರಶ್ನೆ ಇಲ್ಲಿಲ್ಲ. ಸ್ತ್ರೀಪುರುಷರಲ್ಲಿ ಯಾವ ಭೇದವೂ ಇರಬಾರದು. ವ್ಯಕ್ತಿ ವ್ಯಕ್ತಿಗಳೊಳಗೆ ಕೃತ್ರಿಮತೆಯ ಅಂತಸ್ತುಗಳಿರಬಾರದು....ಎಂದಲ್ಲವೇ ನಾವು ಹೇಳುತ್ತಾ ಬಂದುದು?"

"ಹೌದು. ಹೇಳುತ್ತಾ ಬಂದಿದ್ದೇವೆ. ನಮ್ಮ ಚಿಕ್ಕ ಪತ್ರಿಕಾ ಸಂಸಾರದೊಳಗೆ ಆ ತತ್ವವನ್ನು ಆಚರಿಸುತ್ತಲೂ ಇದ್ದೇವೆ"

ಈ ಮಾತು ಕಾಮಾಕ್ಷಿಗೆ ಮೆಚ್ಚಲಿಲ್ಲ. ಹಲ ವಿಷಯಗಳಲ್ಲಿ ತನ್ನ ಗಂಡನ ಹೆಜ್ಜೆ ಆಮೆಯ ಹೆಜ್ಜೆ ಎಂದವಳ ಭಾವನೆ. ಇದು ನಿಜವೂ ಹೌದು. ಆತನ ಮಾತಿನ ವೇಗದ ನೂರನೆಯ ಒಂದಂಶ ಕೃತಿಗಿಲ್ಲ. ಕಾಮಾಕ್ಷಿಯದು ಮಿಂಚಿನಂತೆ ಮಿಂಚುವ ಬುದ್ಧಿ. ಗುಡುಗಿನಂತೆ ಹಾರುವ ಹೆಜ್ಜೆ. ಈ ಸ್ವಭಾವ ವ್ಯತ್ಯಾಸವು ಆಗಾಗ ಘರ್ಷಣಗಳಿಗೆ ಕಾರಣವಾಗುತ್ತಲೂ ಇತ್ತು. ಆದರೆ ಇದು ನಿಜವಾದ ಘರ್ಷಣವಲ್ಲ; ಪ್ರೇಮಕಲಹ.

"ನಮ್ಮ ಪತ್ರಿಕೆ ಸ್ತ್ರೀ ಪಕ್ಷವನ್ನು ಎತ್ತಿಹಿಡಿಯಬೇಕು. ಇದಿರೊಡ್ಡುವವರು ಯಾರಾಗಿದ್ದರೂ ಅವರನ್ನು ಖಂಡಿಸಿ ಉರುಳಿಸಬೇಕು" ಎಂದವಳು ಆವೇಶದಿಂದ ಆಡಿದಳು.

ಪ್ರಭಾಕರ: "ನೀನು ಏನುತ್ತರ ಕೊಟ್ಟೆ?"

ಕಾಮಾಕ್ಷಿ: "ಈ ಭಾಗದಲ್ಲಿ ನಮ್ಮಿಂದ ಏನಾಗಬೇಕೋ ಅದನ್ನು ಮಾಡುವುದಾಗಿ ಭರವಸೆಕೊಟ್ಟೆ"

ಪ್ರಭಾಕರ: ನನ್ನ ನಿನ್ನ ಸ್ವಭಾವದಲ್ಲಿ ಇಷ್ಟು ವ್ಯತ್ಯಾಸ ಇದೊಂದೆ. ಮಾಡಬೇಕಾದುದು ಏನೆಂದು ತಿಳಿದ ಮೇಲೆ ಮಾತು ಕೊಡುವವನು ನಾನು; ತಿಳಿಯುವ ಮುಂಚೆ ಮಾತುಕೊಡುವವಳು ನೀನು"

ಕಾಮಾಕ್ಷಿ: ನೀವು ಏನೆಂಬುದನ್ನು ಮೊದಲು ತಿಳಿಯುತ್ತೀರಿ. ತಿಳಿದು ಯೋಚಿಸುತ್ತೀರಿ; ಯೋಚನೆಯ ಅವಸಾನದಲ್ಲಿ ಕಾರ್ಯೋತ್ಸಾಹವು ಆರಿಹೋಗುತ್ತದೆ. ಮತ್ತೆ ಏನೂ ಇಲ್ಲ ಬರಿಯ ಪ್ರಭಾಕರರಾಯರಾಗಿ ಉಳಿದುಬಿಡುತ್ತೀರಿ.

ಈಬಗೆಯ ಟೀಕೆಯನ್ನು ಕೇಳಿ ಪ್ರಭಾಕರನಿಗೆ ನಗು ಬಂತು. ತನ್ನ ಹೃದಯದ ಒಳಗು ಹೊರಗುಗಳನ್ನು ಎಷ್ಟು ಚೆನ್ನಾಗಿ ತಿಳಿದಿದ್ದಾಳೆ? ಅನೇಕ ವಿಷಯಗಳಲ್ಲಿ ಭೇದಗಳಿದ್ದರೂ ಅವಳ ಚುರುಕು ಬುದ್ಧಿ ಮನಸ್ಸನ್ನು ಮೋಹಗೊಳಿಸಿದೆ.

ಶ್ಯಾಮಣ್ಣ ಮಧ್ಯದಲ್ಲಿ ಪ್ರವೇಶಿಸಿದ: ನಮ್ಮ ಅಕ್ಕನ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳುವುದಿದ್ದರೆ ಹೀಗೆನ್ನಬಹುದು. ಪ್ರಪಂಚದ ಸಂಗತಿಗಳನ್ನು ನಾವು ಮೇಲಿಂದ ಮೇಲೆ ನೋಡಿ ಕರ್ತವ್ಯವನ್ನು ನಿಷ್ಕರ್ಷಿಸಿಕೊಳ್ಳಬೇಕು. ಧುರೀಣರಲ್ಲಿಯೂ ಅನುಯಾಯಿಗಳಲ್ಲಿಯೂ ಹಲವು ಗುಪ್ತದೋಷಗಳಿರುತ್ತವೆ. ಅವನ್ನೆಲ್ಲ ಹೆಕ್ಕಿತೆಗೆದು ದೂಷಿಸುವುದಲ್ಲ. ಬಹಿರಂಗ ಜೀವನ ಬೇರೆ; ಅಂತರಂಗ ಬೇರೆ. ಅಂತರಂಗವನ್ನು ನೋಡದೆ ಬಹಿರಂಗವನ್ನೆ ಆಧರಿಸಿ ನಡೆಯಬೇಕು ಈ ಸಮಾಜದಲ್ಲಿ. ಎಂದರೆ ಮಿಸ್. ಧಾಮೆ ಎಂಥವಳಾಗಿದ್ದರೂ ಅವಳ ನಡತೆಯ ಒಳಪದರಿಗೂ ಹೊರಗಿನ ಆಚಾರಕ್ಕೂ ಸಂಬಂಧ ಕಲ್ಪಿಸಿ ಟೀಕಿಸುವ ಹಕ್ಕು ನಮಗಿಲ್ಲ. ಅವಳ ಕರ್ತೃತ್ವಶಕ್ತಿ ಅಸಾಮಾನ್ಯ. ಹೆಂಗುಸರಲ್ಲಿ ಆಕೆ ಗಂಡು. ಮೀಸೆ ಹೊರದ ಗಂಡು. ಸ್ತ್ರೀ ಸಮಾಜೋದ್ಧಾರಕ್ಕೆ ಕಂಕಣಕಟ್ಟಿದಳು. ಹಿಂದೆ ಏನೋ ಆಯಿತು. ಅದನ್ನು ಲೋಕವು ಹೇಗೂ ಕಾಣಲಿ. ಈಗ ಸ್ತ್ರೀ ಸಮಾಜ ಸೇವೆಗೆ ಇಳಿದಿದ್ದಾಳೆ. ಏಕೆ ಬೆಂಬಲಕೊಡಬಾರದು? ನಾನು ಸರಿಯಾಗಿ ಹೇಳಿದೆನಲ್ಲವೆ ತಂಗಿ? ಎಂದು ಶ್ಯಾಮಣ್ಣ ಕಾಮಾಕ್ಷಿಯ ಕಡೆಗೆ ನೋಡಿದ.

"ಸರಿಯಾಗಿ ಹೇಳಿದಿರಿ, ಶ್ಯಾಮಣ್ಣನವರೇ!" ಎಂದು ಶಾಮಿ ಶಿಫಾರಸು ಕೊಟ್ಟಳು.

"ನಮ್ಮ ಪತ್ರಿಕಾ ಪ್ರಪಂಚದ ತ್ರಿಮೂರ್ತಿಗಳಲ್ಲಿ ಇಬ್ಬರ ಅಭಿಪ್ರಾಯ ಒಂದು ತೆರನಾಗಿರುವಾಗ ಒಬ್ಬನದಕ್ಕೆ ಬೆಲೆಯೆಲ್ಲಿ? ಮಿಸ್. ಶಾಮಿ ದೊಡ್ಡ ಹಿಡಿಂಬೆಯೆಂದು ನನ್ನ ಅಭಿಪ್ರಾಯ. ಹೀಗಿದ್ದರೂ ಬಹುಮತಕ್ಕೆ ಜಯ ದೊರೆಯಲಿ" ಎಂದು ಪ್ರಭಾಕರ ತೀರ್ಮಾನಿಸಿದ.

ಎಲ್ಲರೂ ಧಾರಾಳವಾಗಿ ನಕ್ಕರು. ಇಂದು ಶ್ಯಾಮಣ್ಣನ ಕೊನೆಯ ಶರೀರ ಪರೀಕ್ಷೆ. ಈದಿನ ನೋಡಿ ಪ್ರಪಂಚದ ಸಂಕಟಕ್ಕೆ ಈತನನ್ನು ಬಿಡಬಹುದೆ? ಎಂದು ತಿಳಿಸುವುದಾಗಿ ನಾಗೇಶರಾಯರು ಹೇಳಿದ್ದರು. ಆಗ ಅವರೇ ಬಂದರು.

"ಇಂದಿನಿಂದ ನಾನು ಸಜೀವ ಸ್ವತಂತ್ರ ಪ್ರಾಣಿಯಾಗುತ್ತೇನೆ" ಎಂದು ಶ್ಯಾಮಣ್ಣ ಮನಸ್ಸಿನಲ್ಲಿಯೇ ಹಿಗ್ಗುತ್ತಿದ್ದ.

೬

ಆದರೆ ಶ್ಯಾಮಣ್ಣನಂತಹ ಒದ್ದಾಡುವ ಜೀವಿಗಳಿಗೆ ಸ್ವಾತಂತ್ರ್ಯ ಎಂಬುದುಂಟೆ? "ಇನ್ನು ನೀನೇನೂ ಮಾಡಬಹುದು; ಎಲ್ಲಿಗೂ ಹೋಗ ಬಹುದು" ಎಂದು ನಾಗೇಶರಾಯ ರಾಯಸ ಕೊಟ್ಟಾಗ, ಆಗಂತುಕ ವಾಗಿದ್ದ ಆ ಒಂದು ಜೀವವನ್ನು ಎಂದರೆ ಶ್ಯಾಮಣ್ಣನನ್ನು, ಅಲ್ಲಿಂದ ಹೊರಗೆ ಹಾಕುವುದಕ್ಕಾಗಿಯೆ ಒತ್ತಿ ಒತ್ತಿ ಹೇಳಿದನೆಂಬುದು ಸ್ವರಭಂಗಿ ಯಿಂದ ವಿದಿತವಾಯಿತು. ಹಾಗೆ ಶ್ಯಾಮಣ್ಣ ಹೊರಬಿದ್ದರೆ ನಾಗೇಶನ ಅಂತರಾತ್ಮಕ್ಕೆಷ್ಟೋ ತೃಪ್ತಿಯೆಂದೂ ತಿಳಿದುಬಂತು. ಅವನನ್ನು ಹೋಗ ಬಿಡುವುದು ಪ್ರಭಾಕರನಿಗೆ ಪಥ್ಯವಾಗಿ ತೋರಲಿಲ್ಲ. ಇಷ್ಟು ತಿಂಗಳು ಅವನ ಚರ್ಯೆಯನ್ನು ಕಂಡಬಳಿಕ ಚಿಕ್ಕಮ್ಮ ಸ್ವತಃ ಶಿಫಾರಸುಕೊಟ್ಟಿದ್ದಾಳೆ "ತಾಜಾ ಮನುಷ್ಯ"ನೆಂದು! ಅನ್ಯತ್ರ ಗತಿಸ್ಥಿತಿಯಿಲ್ಲದ ಅವನನ್ನು ಮನೆಯಲ್ಲಿ ಇರಿಸಿಕೊಂಡರೆ ತಪ್ಪೇನು? ಅಲ್ಲದೆ ಧನುರ್ಧಾರಿ ಪತ್ರಿಕೆಯೂ

ಹೊರಡುವ ಸಂಭವವಿದೆ. ಇದಕ್ಕೆ ಭಾಮೆಯ ಬೆಂಬಲವಿದೆ. ನಾಗೇಶನ ಧನಸಹಾಯವಿರಬಹುದು. ಇಂದು ತಲೆದೋರದಿದ್ದರೆ ಇನ್ನು ಕೆಲಕಾಲ ದೊಳಗೆ ಉದ್ಭವಿಸಬಹುದು. ಶ್ಯಾಮಣ್ಣನಂತಹ ವ್ಯಕ್ತಿಯನ್ನು ಆ ಧನುರ್ಧಾರಿ ಹೊಡೆದುಬಿಟ್ಟರೆ? "ಶ್ಯಾಮಣ್ಣ! ನಿನ್ನ ಸಮಯ ಅತ್ಯಮೂಲ್ಯ ವಾಗಿದೆ. ಕಚೇರಿಯಲ್ಲಿ ದಿನಕ್ಕೆ ಹನ್ನೆರಡು ಘಂಟೆ ಕೆಲಸಮಾಡುತ್ತ. ಶ್ವಾಸೋಚ್ಛ್ವಾಸವನ್ನೂ ಮರೆತು ನಮ್ಮ ಸೇವೆಯಲ್ಲಿ ನಿರತನಾಗಿರುತ್ತ. ನಿನ್ನಂಥವರ ಸಮಯ ಅಡಿಗೆಮಾಡುವುದರಲ್ಲಿ ಪಾತ್ರೆ ಉಜ್ಜುವುದರಲ್ಲಿ ಕಳೆಯಬೇಕೆ? ಇಲ್ಲಿಯೇ ಇದ್ದುಬಿಡು. ನಿನಗೇನಾಗಬೇಕು? ನಮಗೆ ಬೇಕಾದ ಅಕ್ಕಿಯಲ್ಲಿ ಒಂದು ಮುಷ್ಟಿ ಜಾಸ್ತಿ ಸೇರಿಸಿಕೊಂಡು ಬೇಯಿಸಿದ ರಾಯಿತು" ಎಂದು ಪ್ರಭಾಕರ ಹೇಳಿದ. "ಅದು ಆಗದಣ್ಣ...." ಎಂದು ಶ್ಯಾಮಣ್ಣ ನಿರಾಕರಿಸಿದ.

"ನಿನ್ನ ಮೇಲಧಿಕಾರಿಯಲ್ಲವೆ ನಾನು? ನನ್ನ ಆಜ್ಞೆಯನ್ನು ಮೀರುವ ಹಕ್ಕುಂಟೆ?" ಎಂದು ಪ್ರಭಾಕರ ಕೇಳಿದ.

"ಒಂದು ಕೆಲಸಕ್ಕಿಂತ ಮೇಲಿನದಾಗಿ ಇನ್ನೊಂದು ಕೆಲಸ ಇದ್ದೇ ಇರುತ್ತದೆ. ಆದರೆ ಅವರವರ ಮನಸ್ಸಾಕ್ಷಿಯ ಮೇಲ್ನೆಲೆಯಲ್ಲಿ ಯಾರಿದ್ದಾರೆ?"

ಸರಸಕ್ಕಾಗಿ ತಾನಾಡಿದ ಈ ಪ್ರಶ್ನೆಗೆ ಇಷ್ಟು ಗಂಭೀರತೆಯ ಉತ್ತರ ವನ್ನು ಕೊಟ್ಟ ಶ್ಯಾಮಣ್ಣನನ್ನು ಪ್ರಭಾಕರ ಆಪಾದ ಮಸ್ತಕವಾಗಿ ಅವ ಲೋಕಿಸುತ್ತಾ "ಶ್ಯಾಮಣ್ಣ....ಇಂತಹ ಅವಿಧೇಯತೆಯ ಮಾತನ್ನು ಕೇಳು ವುದಕ್ಕೆ ನಾನು ಸಿದ್ಧನಾಗಿಲ್ಲ." ಎಂದು ಕಪಟದರ್ಪದಿಂದ ಆಡಿದ.

ಶ್ಯಾಮಣ್ಣ ಹತ್ತು ನಿಮಿಷ ಮೌನವಾಗಿದ್ದ. ಈ ಹತ್ತು ನಿಮಿಷಗಳು ಅವನನ್ನು ಬಲು ಹಿಂದಿನ ಕಾಲಕ್ಕೆ ಒಯಿದುವು. ಶ್ಯಾಮಣ್ಣನಿಗೆ ತಂದೆ ತಾಯಿಗಳನ್ನು ನೋಡಿದ ನೆನಪು ಸರಿಯಾಗಿ ಇಲ್ಲ. ಯಾರೊ ಒಬ್ಬಳು ಹೆಂಗುಸು—ಲೋಕದಲ್ಲಿರುವ ನೂರಾರು ಹೆಂಗುಸರಂತಹ ಒಬ್ಬಳು—ತನ್ನನ್ನು ಎತ್ತಿಕೊಂಡೊಮ್ಮೆ ಹೋಗುವಾಗ ಕಾಲುಜಾರಿ ಬಿದ್ದುದೂ ತನ್ನ ಮೈಗೂ ಸ್ವಲ್ಪ ನೋವಾದುದೂ ಆತನ ನೆನಪಿನಲ್ಲಿದೆ. ಅವಳೇ ತನ್ನ

ತಾಯಿಯಾಗಿರಬೇಕೆಂಬ ಭಾವ. ತಂದೆಯೆಂಬ ಶಬ್ದವು ಅವನ ನಾಲಗೆಗೆ ಅಪರಿಚಿತ. ಆತ ತಾಯಿಯನ್ನು ಎಂದೋ ಕಾಲಿನಿಂದೊದೆದು ಊರುಬಿಟ್ಟು ಹೋಗಿದ್ದಾನೆ. ಯಾಕೆ? ಎಂದು ತಿಳಿದಿರಲಿಲ್ಲ; ಅವನನ್ನು ಕಂಡ ನೆನಪೂ ಇರಲಿಲ್ಲ. ತಾಯಿಯೂ ಹಾಗೆಯೇ ಬಲುಕಾಲ ತನ್ನೊಡನೆ ಇರಲಿಲ್ಲ. ಆದುದರಿಂದ ಅಚ್ಚಳಿಯದ ಸ್ಮರಣೆಗಳಲ್ಲಿ ತಾಯಿಮಗ ಇಬ್ಬರೂ ನೆಲದ ಮೇಲೆ ಕೆಡೆದ ನೆನಪೊಂದೇ ಮುಖ್ಯವಾದುದು. ಅನಂತರ ಮಾವನ ಮನೆಯಲ್ಲಿ ವಾಸವಾಯಿತು. ಅಲ್ಲಿ ಅತ್ತೆಯ ಕಾಟ ಸಹಿಸಲಾರದೆ, ಶ್ರೀಮಂತರೊಬ್ಬರ ಮನೆಯಲ್ಲಿ ಕೀಳು ಕೆಲಸಕ್ಕೆ ನಿಂತುದು; ಕ್ರಮೇಣ ಪಾಕಶಾಲೆಗೆ ಪ್ರವೇಶಿಸಿದುದು; ಆ ಶ್ರೀಮಂತರ ಮಗ ಕಲಿಯುವುದಕ್ಕಾಗಿ ಮಂಗಳೂರಿಗೆ ಬಂದಾಗ, ಅವನ ಜೊತೆಯಲ್ಲಿ ಅಡಿಗೆ ಮಾಣಿಯಾಗಿ ಬಂದುದು; ಆಗಲೇ ತಾನು ಅಕ್ಷರಾಭ್ಯಾಸ ಮಾಡಿದುದು; ಬಲುಚುರುಕಾಗಿ ಓದುಬರಹವನ್ನು ಕಲಿತು ಆ ಹುಡುಗನಿಗಿಂತ ಎಷ್ಟೋ ಹೆಚ್ಚು ಗಟ್ಟಿಗ ನಾದುದು; ಶ್ರೀಮಂತರು ಆಕ್ಷೇಪಿಸಿ ಈ ಅಡಿಗೆ ಮಾಣಿಯ ಸಹವಾಸದಿಂದ ತನ್ನ ಮಗ ದಡ್ಡನಾದ ಎಂದು ರೇಗಿಬಿದ್ದುದು. ಇಷ್ಟಾದ ಮೇಲೆ ಶ್ಯಾಮಣ್ಣಾ ಅವನೊಡನೆ ಅಡಿಗೆ ಮಾಣಿಯಾಗಿರಲಿಲ್ಲ. ಊರಲ್ಲಿ ಅಲೆದಾಡಿಕೊಂಡು ನಾಟಕ ಮಂಡಲಿಯೊಂದು ಬಂತು. ಅದರ ಪರದೆಯೆಳೆಯುವ ನೌಕರ ನಾಗಿ ಸೇರಿಕೊಂಡ. ನೋಡಿನೋಡಿ ಹಾರ್ಮೋನಿಯಂ ಬಾರಿಸುವುದಕ್ಕೆ ಅಭ್ಯಾಸ ಮಾಡಿದ. ಕೇಳಿಕೇಳಿ ಹಾಡುವುದಕ್ಕೆ ಕಲಿತ. ಒಮ್ಮೆ ಯಾವುದೋ ಒಂದು ದೃಶ್ಯ ಪರಿವರ್ತನದ ಪರದೆಯ ಅವಶ್ಯಕತೆ ಬಿತ್ತು. ಶ್ಯಾಮಣ್ಣಾ ಸ್ವತಃ ಕುಂಚ ತೆಗೆದುಕೊಂಡು ಚಿತ್ರಬರೆದು ತಯಾರಿಸಿ ಕೊಟ್ಟ. ಯಾವ ಪೂರ್ವಜನ್ಮ ಸಂಸ್ಕಾರ ಫಲವಾಗಿ ಅವನ ಕೈಯಿಂದ, ಕಂಠದಿಂದ, ಮುಖ ಭಾವದಿಂದ ಕಲಾರಸ ಹೊರಟುಬರುತ್ತಿತ್ತೊ ಹೇಳುವುದು ಹೇಗೆ? ರಾಜ ಪಾತ್ರ ವಹಿಸುವುದಕ್ಕೆ ತೊಡಗಿದೊಡನೆ ಯಜಮಾನನಿಗೂ ಶ್ಯಾಮಣ್ಣನಿಗೂ ಮತ್ಸರಕ್ಕೆ ಕಾರಣವಾಯಿತು. ಇಷ್ಟರಲ್ಲಿ ಶ್ಯಾಮಣ್ಣನ ವಯಸ್ಸು ಮೂವತ್ತು. ಉಜ್ವಲ ಮುಖಭಾವ. ಸಂಸ್ಕೃತವಾದ ಆಚಾರ. ನಾಯಿಕಾ ಪಾತ್ರ ವಹಿಸುತ್ತಿದ್ದ ಶಕುಂತಲೆಯನ್ನು ಇಷ್ಟು ಸುಂದರನಾದ ದುಷ್ಯಂತನ

ಸಮ್ಮುಖದಲ್ಲಿರಗೊಡುವುದು ಅಪಾಯಕರವೆಂದು, ನಾಟಕಮಂಡಲಿಯ ಪ್ರಧಾನ ನಟರೂ "ವಿಕಟವಿನೋದರಸ ಸರೋವರ ಹಂಸ" ಎಂಬ ಬಿರುದು ವಹಿಸಿದ್ದವರೂ ಆದ ದೇವಣ್ಣನವರು ಶ್ಯಾಮುವನ್ನು ಕೆಲಸದಿಂದ ತೆಗೆದುಹಾಕಿದರು. "ತನ್ನ ದೋಷವೇನೂ ಇಲ್ಲ" ಎಂದು ಶ್ಯಾಮಣ್ಣನ ಅಂತರಾತ್ಮ ಸಾರಿ ಹೇಳುತ್ತಿದ್ದಿತು. ಅವನ ದೋಷವೇನೂ ಇರಲಿಲ್ಲ—ಎಂಬುದು ಖಂಡಿತ. ಇದ್ದರೆ ಆತನ ಕಣ್ಣು ಕೋರೈಸುವ ಸೌಂದರ್ಯದ ದೋಷ. ಶ್ಯಾಮಣ್ಣ ನಾಟಕಮಂಡಲಿಯಿಂದ ಹೊರಬಿದ್ದ ಮೇಲೆ ಸ್ಥಾಯಿಯಾದ ಒಂದು ವೃತ್ತಿಯನ್ನು ಹಿಡಿಯಬೇಕೆಂದೆಣಿಸಿ ಪತ್ರಿಕೆಗಳಿಗೆ ಸುದ್ದಿ ಕೊಡುವ ಕೆಲಸವನ್ನು ಕೈಕೊಂಡ. ಪತ್ರಿಕಾ ಸಂಬಂಧದೊಡನೆ ಮುದ್ರಣ ಶಾಲೆಯ ಸಂಬಂಧ ಬೆಳೆಯಿತು. ಅಚ್ಚುಜೋಡಣೆಯನ್ನು ಅಭ್ಯಾಸ ಮಾಡಿದ. ಲಘು ಲೇಖನಗಳನ್ನು ಬರೆಯತೊಡಗಿದ; ಓದತೊಡಗಿದ. ಪ್ರಪಂಚದ ಬೀದಿ ಬೀದಿಯಿಂದ ಹೆಕ್ಕಿಕೊಂಡ ಆತನ ಜ್ಞಾನದ ಆವರಣದೊಳಗೆ ಅಡಕವಾಗದ ವಿಷಯವಿಲ್ಲ. "ಬಟಾಟೆಯ ಆತ್ಮಕಥೆ"ಯ ಮೊದಲುಗೊಂಡು ವಜ್ರದ ಹರಳುಗಳ ಸೋಜಿಗ ಎಂಬ ವೈಜ್ಞಾನಿಕ ವಿಷಯದ ವರೆಗೆ ಪ್ರತಿಯೊಂದನ್ನೂ ಬರೆಯಬಲ್ಲನು; ಆಡಬಲ್ಲನು; ಭಾಷಣ ಕೊಡಬಲ್ಲನು; ಯಾವ ಕೆಲಸವನ್ನೂ ಮಾಡಬಲ್ಲನು. ಅವನಿಗೆ ಒಗ್ಗದುದಿಲ್ಲ. ಇಂತಹ ಅಸಾಮಾನ್ಯ ವ್ಯಕ್ತಿ ಪ್ರಭಾಕರನ ಗಮನವನ್ನಾಕರ್ಷಿಸಿದುದೂ, ಆಗತಾನೆ ಹೊರಡುವುದರಲ್ಲಿದ್ದ ಸಂಗ್ರಾಮ ಪತ್ರಿಕೆಗೆ ಸಹಾಯಕನಾಗಿ ದೊರೆತುದೂ ಆಶ್ಚರ್ಯವಲ್ಲ. ಊರಿಂದೂರಿಗೆ ಅಲೆದಾಡಿ ಸಾಕಾಯಿತು. ಲೋಕದ ಮರ್ದನದ ವಿಷಯವನ್ನರಿತುದಾಯಿತು. ಇನ್ನು ಒಂದೆಡೆಯಲ್ಲಿ ನೆಲೆಯೂರಬೇಕು. ಕರ್ಮಯೋಗಿಯಂತೆ ಮೈಯನ್ನು ಮುರಿದು ಜ್ಞಾನಯೋಗಿಯಂತೆ ಮನಸ್ಸನ್ನು ಉತ್ತಮಾದರ್ಶದ ಕಡೆಗೆ ಯೋಜಿಸಬೇಕೆಂದು ಆತ ಸಂಕಲ್ಪಿಸಿದ್ದ. ಇರುವುದು ಒಂದು ಜೀವ; ಇದರ ಹೊಟ್ಟೆ ತುಂಬುವುದಕ್ಕೇನಾಗಬೇಕು? ಸಂಸಾರದ ಸಿಕ್ಕುಗಳಲ್ಲಿ ತೊಡರಿಕೊಳ್ಳುವ ಅವಶ್ಯತೆಯಿರಲಿಲ್ಲ; ಇಚ್ಛೆಯೂ ಇರಲಿಲ್ಲ.

"ಇಲ್ಲಿಯೇ ಇದ್ದುಬಿಡು" ಎಂದು ಪ್ರಭಾಕರನ ಅಜ್ಞೆ ಹೊರಟಾಗ ಅವನಲ್ಲಿದ್ದ ಆಲೋಚನೆ ಒಂದೇ ಒಂದು. ತಾನೇಕೆ ಇವರ ಗೃಹಪ್ರಪಂಚ

ದಲ್ಲಿ ಕಾಲಿಡಬೇಕು? ಶ್ಯಾಮಣ್ಣ ಮನೆಗಳಿಂದ, ವ್ಯಕ್ತಿಸಂಬಂಧಗಳಿಂದ ಬಾಹಿರನಾಗಿದ್ದ ಕಾಲದಲ್ಲಿ ಮನಸ್ಸಿಗೆ ಯಾವ ಕ್ಲೇಶಗಳೂ ಇರಲಿಲ್ಲ. ಗೃಹ ಕ್ಷೇತ್ರಗಳೊಳಗೆ ಕಾಲಿಟ್ಟೊಡನೆಯೆ ಜುಗುಪ್ಸೆಯುಂಟಾಗುವ ಘಟನೆಗಳು ನಡೆದಿದ್ದುವು. ಮನೆ ಬಾಳು ತನಗೆ ಹಿತಕರವಾಗಿಲ್ಲ; ಎಂದವನು ಎಷ್ಟೋ ಹಿಂದೆ ನಿರ್ಧರಿಸಿದ್ದ. ಈಗ ಆ ನಿರ್ಧಾರಕ್ಕೆ ವಿರೋಧವಾಗಿ ನಡೆಯಬೇಕೆ?

ಪ್ರಭಾಕರನ ಮಾತನ್ನು ಕೇಳಿ ಹತ್ತು ನಿಮಿಷ ಮೌನಿಯಾಗಿದ್ದವನನ್ನು ಕಂಡು ಕಾಮಾಕ್ಷಿ "ಶ್ಯಾಮಣ್ಣ....ಅಲ್ಲದ ಯೋಚನೆಗಳನ್ನು ಇಟ್ಟುಕೊಳ್ಳಬೇಡ; ಅವರ ಮಾತಿಗೆ ಹೂಂ ಎನ್ನು" ಎಂದು ಅಧಿಕಾರದ ವಾಣಿಯಿಂದ ಆಡಿದಳು. ಶ್ಯಾಮಣ್ಣನ ಉತ್ತರವಿಲ್ಲ!

"ಮೌನಂ ಸಮ್ಮತಿ ಲಕ್ಷಣಮ್. ಒಲ್ಲೆನು ಎಂದು ನಿನ್ನ ಮೌನವನ್ನು ಭಂಗಿಸಬೇಡ. ಒಂದುವೇಳೆ ಒಲ್ಲೆನೆಂದರೆ ಕೇಳುವವರಾರು? ನಿನ್ನ ಜೀವವು ಈಗ ನಿನ್ನದಲ್ಲ. ಪರಕೀಯರ ಸೊತ್ತು." ಎಂದು ಪ್ರಭಾಕರ ಆಗ್ರಹದಿಂದ ಆಡಿದ.

ಶ್ಯಾಮಣ್ಣ—ಆಗಬಹುದು—ಎನ್ನಲೂ ಇಲ್ಲ; ಕೂಡದೆಂದು ನಿರಾಕರಿಸಲೂ ಇಲ್ಲ. ಮನೆಬಿಟ್ಟು ನಡೆಯಲೂ ಇಲ್ಲ.

೭

ನಾಗೇಶರಾಯನ ಮನಸ್ಸು ಇತ್ತೀಚೆಗೆ ಸ್ತಿಮಿತವಾಗಿರಲಿಲ್ಲ. ಶ್ಯಾಮಣ್ಣನ ರೋಗರೂಪದಲ್ಲಿ ಕಾಣಿಸಿಕೊಂಡಿದ್ದ ಆತನ ಸೌಭಾಗ್ಯ—ಆತನ ಆರೋಗ್ಯದಲ್ಲಿ ಅಡಗಿಹೋದುದರಿಂದ, ಅವನಿಗೆ ಪ್ರಪಂಚದ ಒಂದು ಭಾಗಕ್ಕೆ ಪ್ರವೇಶ ದೊರೆಯುದಂತಾಯಿತು.

ನಾಗೇಶ ಎಷ್ಟೊ ಮಂದಿ ಸ್ತ್ರೀಯರನ್ನು ಕಂಡಿದ್ದನು....ಆದರೆ ಕಾಮಾಕ್ಷಿಯಂತಹ ಸುಂದರ ವಸ್ತುವನ್ನು ಕಂಡಿರಲಿಲ್ಲ. ಸ್ವಚ್ಛವಾದ ಸೊಬಗು—ಅದರಲ್ಲೊಂದುಬಗೆಯ ಹೆಮ್ಮೆ—ಆ ಹೆಮ್ಮೆಯೊಳಗೊಂದು ವಿನಯ; ರೂಕ್ಷವಾಗಿ ತೋರುವ ಸ್ವಭಾವ—ಅದರೊಳಗೆ ಬೆಣ್ಣೆಯ ಮಾರ್ದವ; ಗಂಡುಸರನ್ನು ಮೀರುವ ಎದೆಯ ಧೈರ್ಯ—ಆ ಧೈರ್ಯದಲ್ಲಿ

ಬೆಸಿಗೆಗೊಂಡಿದ್ದ ಸೌಜನ್ಯ....ಇದೊಂದು ವಿಚಿತ್ರ ಸೃಷ್ಟಿಯಾಗಿ ತೋರಿತು. ತಾನು ಈಕೆಯನ್ನು ಮದುವೆಯಾಗಬೇಕೆಂದು ಒಮ್ಮೆ ಅಪೇಕ್ಷಿಸಿದ್ದರೆ, ತಪ್ಪಲ್ಲ. ಅವಳನ್ನು ಕಳೆದುಕೊಂಡ ಮೇಲೆ ಅವಿವಾಹಿತನಾಗಿಯೇ ಯಾವ ಜ್ಜೀವವೂ ಬಾಳುವ ಭೀಷ್ಮ ಪ್ರತಿಜ್ಞೆ ಮಾಡಿದುದೂ ತಪ್ಪಲ್ಲ. ಅವಳೂ ಅವಿವಾಹಿತೆಯಾಗಿರುತ್ತಿದ್ದರೆ ಯಾರನ್ನೂ ದೂರುವುದಕ್ಕಿರಲಿಲ್ಲ. ಆದರೆ ಆ ಸೊಬಗಿನ ಮುದ್ದೆ ಇನ್ನೊಂದು ಪ್ರಾಣಿಯ ಬೆನ್ನನ್ನು ಅಂಟಿಕೊಳ್ಳು ವಂತಾಗಿದೆಯಲ್ಲ. ಇದಲ್ಲವೇ ಅನ್ಯಾಯ? ತನಗಿಲ್ಲದ ಪುಣ್ಯ ಅನ್ಯರ ವಶವಾಗಿದೆ—ಎಂಬುದರ ನೆನಪನ್ನು ಸಹಿಸಲಾರನು. ಆ ನೆನಪಾದೊಡನೆ ಜೀವವು ಸಿಡಿಮಿಡಿ ಹೊಂದದಿರುತ್ತಿರಲಿಲ್ಲ.

ಶ್ಯಾಮಣ್ಣನು ಸೌಖ್ಯಹೊಂದಿದಂದಿನಿಂದ ಕಾಮಾಕ್ಷಿಯನ್ನು ವಾರ ಕ್ಕೊಮ್ಮೆ ಕಂಡು ಮಾತಾಡುವ ಸಂದರ್ಭವೂ ತಪ್ಪಿಹೋಯಿತು. ಇದು ದೊಡ್ಡ ಲೋಪ. ಅಸಹ್ಯವಾದ ಲೋಪ. ತನ್ನ ಜೀವಕ್ಕೆ ಬೇಸರಿಕೆ ಹಿಡಿಸು ವಂತಹ ಘೋರ ಸಂಗತಿ. ಇದಕ್ಕೆ ಪ್ರತೀಕಾರವಿಲ್ಲವೆ?

ಸಂಗ್ರಾಮ ಪತ್ರಿಕೆ ಇತ್ತೀಚೆಗೆ ಸ್ವಲ್ಪ ಕಷ್ಟಕ್ಕೀಡಾಗಿದೆ. ಶ್ಯಾಮಣ್ಣನ ಕೈ ಅದರಲ್ಲಿ ಕಾಣಿಸದೆ ತಿಂಗಳು ಆರಾಗಿತ್ತು. ಇದೇನು? ಪತ್ರಿಕೆ ಸಪ್ಪೆ ಯಾಗಿಹೋಗಿದೆ; ನಿರ್ಜೀವವಾಗಿದೆ....ಎಂದು ಚಂದಾದಾರರು ಪ್ರಶ್ನಿಸ ತೊಡಗಿದ್ದರು. ಅವರ ಸಂಖ್ಯೆಯೂ ಕಡಿಮೆಯಾಗಿದ್ದಿತು.

ಕೆಲಸಗಾರರ ಅತೃಪ್ತಿ ಇನ್ನೊಂದೆಡೆ. ಮಿಸ್. ಭಾಮೆಯ ಕಟಾಕ್ಷವು ಮಂಗಳೂರ ಮೇಲೆ ಬಿದ್ದಂದಿನಿಂದ—ಎಂದರೆ ಒಂದು ವರ್ಷದಿಂದೀಚೆಗೆ ಆಳುಗಳ ಹಸಿವೆ ಹೆಚ್ಚಾಗಿದೆ. ಅವಳು ಒಂದು ದಿನವಾದರೂ ಭಾಷಣ ಕೊಡದಿರಲಿಲ್ಲ. ಒಂದು ದಿನ ಮಹಿಳಾಸಭೆಯ ವಾರ್ಷಿಕೋತ್ಸವವಾದರೆ, ಇನ್ನೊಂದು ದಿನ ಗೇರುಬೀಜದ ಕಾರ್ಖಾನೆ ಕೆಲಸಗಾರರ ಸಂಘಸ್ಥಾಪನೆ; ಮತ್ತೊಂದು ದಿನ ವ್ಯಾಯಾಮಶಾಲೆಯ ಪ್ರಾರಂಭೋತ್ಸವ. ಹಲವು ಸಭಾ ಸಮಾರಂಭಗಳು ಭಾಮೆಯ ಆಗಮನವನ್ನೆ ನಿರೀಕ್ಷಿಸಿ ಇದುವರೆಗೆ ತಡೆದಿದ್ದಂತೆ ತೋರುತ್ತಿತ್ತು. ಅವಳು ಪ್ರತಿ ಸಂದರ್ಭದಲ್ಲಿಯೂ ಸಮತಾ ವಾದವನ್ನೆ ಪ್ರತಿಪಾದಿಸುತ್ತಿದ್ದಳು. ಕಣ್ಣಿನಿಂದ ಸಮತಾವಾದದ ಕಿಡಿಗಳು—

ಅಭಿನಯದಿಂದ ಸಮತಾವಾದದ ರಸ ಭಾಷಣದಿಂದ ಸಮತಾವಾದದ ಮಹಿಮೆ ಹೊರಹೊಮ್ಮುತ್ತಿದ್ದಿತು. ಆಕೆಯ ಪ್ರತಿಯೊಂದು ಭಾಷಣವೂ ಅನುಯಾಯಿಗಳನ್ನು ತರುತ್ತಿತ್ತು. ಅಲ್ಲಲ್ಲಿ ನಾಲ್ಕಾರು ಸಂಘಗಳಾದುವು. ಕೆಲಸಗಾರರು ಎಚ್ಚತ್ತರು. ಬೇರಾವ ವಿಚಾರವೇನಿದ್ದರೂ ಅಧಿಕ ವೇತನ ವನ್ನಪೇಕ್ಷಿಸುವುದು—ದೊರೆಯದಿದ್ದರೆ ದೊರಕಿಸಿಕೊಳ್ಳುವುದು ಮಾರ್ಕ್ಸ್ ತತ್ವದ ಪ್ರಥಮ ಸೋಪಾನವೆಂದು ಬಡ ಕೆಲಸಗಾರರಿಗೆ ತೋರಿತು.

ಸಂಗ್ರಾಮ ಮುದ್ರಣಾಲಯದಲ್ಲಿ ಕೆಲಸಮಾಡುವವರ ಸಂಖ್ಯೆ ಹೆಚ್ಚಿರಲಿಲ್ಲ. ಇರುವವರೆಲ್ಲ ವಿಶ್ವಾಸಪಾತ್ರ ಸೇವಕರು. ಸಂಬಳ ಸಾಲದು—ಕೆಲಸದ ಸಮಯ ಕಡಿಮೆಯಾಗಬೇಕು—ಭತ್ತೆ ದೊರೆಯಬೇಕು ಎಂದು ಗುಣುಗುಟ್ಟುತ್ತಿದ್ದವರ ಧ್ವನಿ ದೊಡ್ಡದಾಗಿ ಕೊನೆಗೆ ಮುಷ್ಕರದ ಸಂಭವವೂ ಬಂತು. ಪ್ರಭಾಕರ ತಬ್ಬಿಬ್ಬಾದ. ಸಂಗ್ರಾಮ ಪತ್ರಿಕಾಪ್ರಪಂಚದಲ್ಲಿ ಎಷ್ಟು ಕೀರ್ತಿಯನ್ನು ಸಂಪಾದಿಸಿದ್ದರಬಹುದಾದರೂ ಅದರ ದಶಾಂಶದಷ್ಟು ಹಣವನ್ನು ಬರಿಸುತ್ತಿರಲಿಲ್ಲ. ಕೊಡುವವರಿಗೆ ಕೊಟ್ಟು ಉಳಿವ ಆದಾಯ ದಿಂದ ಎರಡು ಹೊಟ್ಟೆಗಳನ್ನು ಪೊರೆಯಬಹುದಾಗಿತ್ತು; ಅಷ್ಟೆ! ಇಷ್ಟ ರಲ್ಲಿಯೇ ಅವರಿಗೆ ಧನಿಗಳು—ಭಂಡವಾಳಶಾಹಿಗಳು—ಎಂಬ ಹೆಸರೂ ಬಂತು. ಇಡಿ ವ್ಯವಹಾರದಿಂದ ಬರುತ್ತಿದ್ದ ಅಲ್ಪ ಲಾಭದಲ್ಲಿ ಯಾರಯಾರ ಶ್ರಮಕ್ಕೆ ಎಷ್ಟೆಷ್ಟು ಪ್ರತಿಫಲ ಸಲಬೇಕು? ಯಾರಶ್ರಮದ ಎಷ್ಟು ಅಂಶ ದಿಂದ ಪತ್ರಿಕೆ ಎಷ್ಟು ಪ್ರಮಾಣದ ಪ್ರಗತಿಹೊಂದಿರುತ್ತದೆ? ಎಂಬುದನ್ನಳೆ ಯುವ ಅಳತೆಕೋಲಿಲ್ಲದಾಗ, ಸಾಮಾನ್ಯ ಕಾರ್ಮಿಕರಿಗೆ ನಿಶ್ಚಿತ ವೇತನ ವನ್ನು ಕೊಟ್ಟು, ಉಳಿದ ಇನ್ನೂರು ಮುನ್ನೂರು ರುಪಾಯಿಗಳಿಂದ ತನ್ನ ಮತ್ತು ಕಾಮಾಕ್ಷಿಯ ಸಂಪಾದಕತ್ವದ ಗೌರವವನ್ನು ಕಾಪಾಡುತ್ತಿದ್ದ. ಕೆಲಸಗಾರರು ಮುಂಡು ಉಡುತ್ತಿದ್ದರೆ ಪ್ರಭಾಕರ ಕಚ್ಚೆಹಾಕುತ್ತಿದ್ದ. ಕೆಲಸಗಾರರು ವಾರಕ್ಕೊಮ್ಮೆ ಕ್ಷೌರ ಮಾಡಿಸುತ್ತಿದ್ದರೆ ಪ್ರಭಾಕರ ಎರಡು ದಿನಕ್ಕೊಮ್ಮೆ ಮಾಡಿಸುತ್ತಿದ್ದ. ಕೆಲಸಗಾರರು ಬೀಡಿ ಸೇದುತ್ತಿದ್ದರೆ ಈತ ಸಿಗರೇಟು ಸೇದುತ್ತಿದ್ದ. ಸ್ವಾಮಿ—ಸೇವಕರೊಳಗೆ ಇಷ್ಟು ಭೇದ ವಿರುವುದು ಅನ್ಯಾಯವೆಂದು ಅವನಿಗೆ ಇದುವರೆಗೆ ಗೊತ್ತಿರಲಿಲ, ಬಂದು

ದಿನ ಕೆಲಸಗಾರರು ಮುಷ್ಕರಹಿಡಿಯುವುದಾಗಿ ಭೀತಿ ಹುಟ್ಟಿಸಿದರು. ಪ್ರಭಾಕರನಿಗೆ ತನ್ನ ಭವಿಷ್ಯವೇ ಅಲುಗಾಡಿದಂತೆ ತೋರಿತು.

ಮುಷ್ಕರದ ಸೂಚನೆಯ ಅವಧಿ ಮುಗಿಯುವುದಕ್ಕೆ ಮುಂಚಿನ ದಿನ ನಾಗೇಶರಾಯ ಸಂಗ್ರಾಮ ಮುದ್ರಣಾಲಯವನ್ನು ಸಂದರ್ಶಿಸಿದ.

ಅಚ್ಚುಸಾಲೆ ಚಿಕ್ಕದೊಂದು ಮನೆಯಲ್ಲಿ ಅಡಕವಾಗಿತ್ತು. ಉದ್ದಕ್ಕೂ ಭೋಜನಶಾಲೆಯಂತೆ ಕಟ್ಟಿಸಿದ್ದ ದೊಡ್ಡ ಕೋಣೆಯೊಂದರಲ್ಲಿ ಕೆಲಸಗಾರರು ಕೆಲಸ ಮಾಡುತ್ತಿದ್ದರು. ಇದಿರಿನಲ್ಲಿ ಒಂದು ಚಿಕ್ಕ ಕೋಣೆ.... ಅದೇ ಸಂಪಾದಕರ ಕಚೇರಿ. ಇಲ್ಲಿ ಮೂರು ಕುರ್ಚಿಗಳು; ಮೂರು ಮೇಜುಗಳು. ಇವುಗಳನ್ನು ಪ್ರಭಾಕರ—ಕಾಮಾಕ್ಷಿ—ಶ್ಯಾಮಣ್ಣನವರು ಉಪಯೋಗಿಸುತ್ತಿದ್ದರು. ಬಂದವರ ಪ್ರಯೋಜನಾರ್ಥವಾಗಿ ಬೇರೆ ಎರಡು ಕುರ್ಚಿಗಳಿದ್ದುವು. ನಾಗೇಶರಾಯ ಬಂದೊಡನೆ ಅವನಿಗೆ ಸಂಭ್ರಮದ ಸ್ವಾಗತ ದೊರೆಯಿತು.

"ಅಕಾಲದಲ್ಲಿ ಏಕೆ ಬರೋಣಾಯಿತು?" ಎಂದು ಪ್ರಭಾಕರ ಪ್ರಶ್ನಿಸಿದ.

ನಾಗೇಶ: ಡಾಕ್ಟರರು ಬರುವುದಕ್ಕೂ ಹೋಗುವುದಕ್ಕೂ ಸಮಯವೆಂಬುದಿದೆಯೆ?

ಕಾಮಾಕ್ಷಿ: ಡಾಕ್ಟರರು ಪತ್ರಿಕೆಗಳಿಗೂ ಔಷಧ ಕೊಡುತ್ತಾರೆಯೆ?

ನಾಗೇಶ: ಏಕೆ ಕೊಡಬಾರದು? ತೆಗೆದುಕೊಳ್ಳುವವರಿಗೆ ವಿಶ್ವಾಸವಿದ್ದ....

ಕಾಮಾಕ್ಷಿ: ಶಾರೀರಿಕ ರೋಗನಿವಾರಣೆಯ ವಿಷಯದಲ್ಲಿ ಡಾಕ್ಟರರನ್ನು ನಂಬಬೇಕು.

ನಾಗೇಶ: ಮಾನಸಿಕ ರೋಗನಿವಾರಣೆಗೆ ಶ್ಯಾಮಣ್ಣನಂಥವರಲ್ಲವೇ ಸಮರ್ಥರು....ಅವನ ತಮಾಷೆಗಳನ್ನೂ ಹಾಸ್ಯಭರಿತ ಕಥೆಗಳನ್ನೂ ವ್ಯಂಗ್ಯ ಚಿತ್ರಗಳನ್ನೂ ಓದಿದರೆ ಎಂಥವನ ಮಂಕೂ ಗುಣಹೊಂದುವುದಲ್ಲವೆ?

ಶ್ಯಾಮಣ್ಣ: ಇರುವವರ ಮಂಕು ಬಿಟ್ಟುಹೋಗುವುದು; ಇಲ್ಲದವರಿಗೆ ಬರುವುದು; ಎಂದು ವಾಕ್ಯ ಪೂರ್ಣ ಮಾಡಿಬಿಡಿ....

ನಾಗೇಶ: ಸಂದೇಹವೇನು ಶ್ಯಾಮಣ್ಣ....ಮಿಸ್. ಭಾಮಾದೇವಿಗೆ ದೃಷ್ಟಿರೋಗವಿತ್ತು. ರಾಗ ಇರಲಿಲ್ಲ. ಆ ರಾಗದ ಮಂಕು ಹಿಡಿಸಿದಾತ ನೀನೇ ಅಲ್ಲವೆ?

ಶ್ಯಾಮಣ್ಣ: ಕ್ಷಮೆಬೇಡಿ ಆ ಮಂಕನ್ನು ಪರಿಹರಿಸಿದೆನಲ್ಲವೆ?

ನಾಗೇಶ: ಹಿಡಿಸುವುದೂ ಬಿಡಿಸುವುದೂ ನಿಮ್ಮ ಲೀಲಾಜಾಲ.... ಎಂದು ನಾಗೇಶ ನಕ್ಕ. ಅನಂತರ—ಅವಶ್ಯವಾದೊಂದು ವಿಷಯದಲ್ಲಿ ನಿಮ್ಮ ಅಭಿಪ್ರಾಯ ಕೇಳಲು ಬಂದಿದ್ದೇನೆ—ಎಂದು ಮುಂದಿನ ಸಂಭಾಷಣೆಯ ಅಡಿಗಟ್ಟನ್ನು ಹಾಕಿದ.

ಪ್ರಭಾಕರ: ದಯಮಾಡಿ ಆ ವಿಷಯವನ್ನು ತಿಳಿಸಿರಿ.

ನಾಗೇಶ: ಸಂಗ್ರಾಮದಂತಹ ಉತ್ಕೃಷ್ಟ ಪತ್ರಿಕೆಯೊಂದು ಮುಷ್ಕರದ ಗೊಂದಲದಲ್ಲಿ ಸಿಕ್ಕಿಬಿದ್ದು ಕಾಗೆ—ನಾಯಿಗಳ ಪಾಲಾಗಬೇಕೆಂಬುದು ಭಾಮಾದೇವಿಯ ಉದ್ದೇಶವಾಗಿಲ್ಲ.

ಪ್ರಭಾಕರ: ಮತ್ತೇನಾಗಬೇಕೆಂದು?

ನಾಗೇಶ: ನಮ್ಮ ಸದ್ಯದ ಜೀವನದಲ್ಲಿ ಯಾವುದು ಅವಶ್ಯವೋ ಅದನ್ನು ಪ್ರತಿಪಾದಿಸುತ್ತಾ ಪತ್ರಿಕಾಪ್ರಪಂಚದಲ್ಲಿ ಮೊದಲ ಮನ್ನಣೆ ಪಡೆಯಬೇಕೆಂದು.

ಪ್ರಭಾಕರ: ಸದ್ಯಕ್ಕೆ ಭಾಮಾದೇವಿ ಚುನಾವಣೆಯಲ್ಲಿ ಗೆಲ್ಲಬೇಕಾದುದು ಲೋಕೋದ್ಧಾರಕ್ಕೆ ಅವಶ್ಯವಲ್ಲವೆ?

ನಾಗೇಶ: ಶ್ಯಾಮಣ್ಣ ಬರೆಯುವ ಡೊಂಕನ್ನು ನೀವು ಬಾಯಿಯಿಂದ ಹೊರಡಿಸುತ್ತೀರಿ. ಭಾಮೆಯ ಆಂತರಂಗಿಕ ಜೀವನ ಹೇಗಿದ್ದರೇನು? ಅವಳ ಸಾರ್ವಜನಿಕ ರಂಗದಲ್ಲಿ ಏನು ದೋಷ ಕಂಡಿರಿ?

ಪ್ರಭಾಕರ: ಏನೂ ಕಾಣಲಿಲ್ಲ. ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಉಪ್ಪು ತಿಂದಿದ್ದಾಳೆ. ಸೆರೆಮನೆಗೆ ನಡೆದಿದ್ದಾಳೆ. ಹೊರಗೆಬಂದು ಎರಡೇ ವಾರಗಳಿದ್ದು ಗಂಡನನ್ನು ಕಾನೂನಿನ ವಿಧಿಯಿಂದ ಓಡಿಸಿ ಪುನಃ ಸೆರೆಮನೆಗೆ ಹೋಗಿದ್ದಾಳೆ. ಗಂಡನನ್ನು ಬಿಡುವುದಕ್ಕೆ ಬೇಕಾದಷ್ಟೆ ಅವಳಿಗೆ ಸೆರೆಮನೆಯ ಹೊರಗೆ ಅವಕಾಶ ಸಿಕ್ಕಿತೆಂಬುದನ್ನು ಬಲ್ಲೆ.

ಕಾಮಾಕ್ಷಿ: ಸಾರ್ವಜನಿಕ ಕಾರ್ಯಕರ್ತೃಗಳ ಜೀವನದೊಳಗೆ ಇಣಿಕಿ ನೋಡಬೇಕೆ?

ಪ್ರಭಾಕರ: ಏನು ಶ್ಯಾಮಣ್ಣ....ಸಾರ್ವಜನಿಕ ಕಾರ್ಯರಂಗವೆಂದರೆ ನಾಟಕರಂಗವಲ್ಲವೆ? ನಿನಗದರ ಅನುಭವ ತುಂಬ ಇದೆ....

ಶ್ಯಾಮಣ್ಣ: ನಾಟಕರಂಗದಲ್ಲಿಯೂ ಸ್ವಾಭಾವಿಕವಾದ ಪರಿಷ್ಕೃತವಾದ ನಟನೆ ಮಾಡಬಲ್ಲವರಿರುವರು....

ಪ್ರಭಾಕರ: ನಾಟಕರಂಗವಲ್ಲದಿದ್ದರೂ ನಟನೆ ಮಾಡುವವರಿಲ್ಲವೆ ಶ್ಯಾಮಣ್ಣ....

ಕಾಮಾಕ್ಷಿ: ಎಲ್ಲ ನಮೂನೆಯವರೂ ಇದ್ದಾರೆ ಎಂಬುದನ್ನು ಒಪ್ಪಿಕೊಳ್ಳೋಣ.

ಪ್ರಭಾಕರ: ಎಲ್ಲ ಬಗೆಯವರು ಇರುವುದು ಮಾತ್ರವಲ್ಲ; ಒಟ್ಟೊಟ್ಟಾಗಿ ಇರಬೇಕಾಗುತ್ತದೆ; ಇರುತ್ತಾರೆ....ಅದೇ ಸೋಜಿಗ....

ಈ ಧಾಟಿಯಲ್ಲಿ ಹೆಚ್ಚುಕಾಲ ಸಂಭಾಷಣೆ ನಡೆಯಬೇಕೆಂದು ಕಾಮಾಕ್ಷಿಗೆ ತೋರಲಿಲ್ಲ. "ಡಾ. ನಾಗೇಶ್! ನಿಮ್ಮ ಸಮಯದ ಬೆಲೆಯೆಷ್ಟೊ ಕಂಡವರಿಲ್ಲ. ಅವಶ್ಯವಾಗಿ ತಮ್ಮ ಬೋಧನೆ ಏನೆಂಬುದನ್ನು ತಿಳಿಸಬೇಕು." ಎಂದಳು

ನಾಗೇಶ: ಬೋಧನೆಯಲ್ಲ; ಸೂಚನೆ ಮಾತ್ರ. ಸರ್ವಜ್ಞರಲ್ಲಿ ಏನಾದರೂ ಹೇಳಿದರೆ ಅದಕ್ಕೆ ಬೋಧನೆಯೆಂಬ ಹೆಸರಲ್ಲ; ಮನವಿಯೆಂದು....ಆ ಮಾತು ಹಾಗಿರಲಿ; ನಾಳೆ ನಿಮ್ಮ ಮುದ್ರಣಾಲಯಕ್ಕೆ ಬೀಗ ಮುದ್ರೆ ಬೀಳಬಾರದೆಂದು ಭಾಮಾದೇವಿ ಸಂಕಲ್ಪಿಸಿದ್ದಾಳೆ....

ಪ್ರಭಾಕರ: ಪತ್ರಿಕೆಯನ್ನು ನಡೆಸಬೇಕೆಂದು ಹಗಲುರಾತ್ರಿ ನಿದ್ರೆಕೆಟ್ಟು ಕೆಲಸ ಮಾಡುತ್ತಿದ್ದೇವೆ. ಕೆಲಸಗಾರರು ಮುಷ್ಕರ ಹಿಡಿಯಲಿ; ನಮಗೂ ಸ್ವಲ್ಪಕಾಲ ರಜೆ ಸಿಕ್ಕಲಿ....

ನಾಗೇಶ: ಕನ್ನಡ ಪತ್ರಿಕೆಗಳ ಬಾಳು ಅಸ್ಥಿರ. ಒಮ್ಮೆ ನಿಂತುವೆಂದರೆ ಮತ್ತೆ ತಲೆಯೆತ್ತುವಹಾಗಿಲ್ಲ....

ಪ್ರಭಾಕರ: ನಿಮ್ಮ ಮಾತು ನಿಜ. ಪತ್ರಿಕೆ ನಡೆಯಬೇಕೆಂಬುದರಿಂದ, ಮುಖಕ್ಕೆ ಬೇರೆ ಬಣ್ಣ ಹಚ್ಚಿಕೊಳ್ಳಲಾರೆವು....

ನಾಗೇಶ: ಹೊಸ ಬಣ್ಣ ಹಚ್ಚಿಕೊಳ್ಳಬೇಕಾಗಿಲ್ಲ; ಇರುವುದನ್ನು ಕಂಡರಾಯಿತು; ಅಷ್ಟೆ. ಭಾಮಾದೇವಿ ಬಡಜನರ ಪಕ್ಷ ಹಿಡಿದಿದ್ದಾಳೆ; ಇದು ಅಪರಾಧವೇ?

ಪ್ರಭಾಕರ: ಅಪರಾಧವೇನೂ ಇಲ್ಲ.

ನಾಗೇಶ: ಗಾಂಧಿ ಟೋಪಿ, ನೆಹರು ಜುಬ್ಬ ಎಂದ ಹಾಗೆ ಸಾಮ್ಯವಾದವೆಂಬುದು ಹೊಸಕಾಲದ ಮೋಜಾಗಿದೆ. ಮನುಷ್ಯನೊಬ್ಬನು ಸಭ್ಯ ಸಾಮಾಜಿಕನೆನಿಸಬೇಕಾದರೆ, ಸಾಮ್ಯವಾದದ ಒಂದೆರಡು ಪಾರಿಭಾಷಿಕ ಶಬ್ದಗಳನ್ನಾದರೂ ಆಡಬೇಕಾಗುತ್ತದೆ. ಭಾಮೆ ಅಂಥವಳಲ್ಲ....ಶುದ್ಧ ಸಮತಾವಾದಿನಿ....

ಪ್ರಭಾಕರ: ಇರಬಹುದು.

ನಾಗೇಶ: ಸ್ತ್ರೀಪುರುಷ ಸಮಾನತೆಯನ್ನು ಪ್ರತಿಪಾದಿಸುತ್ತಾಳೆ....

ಕಾಮಾಕ್ಷಿ: ಸಂದೇಹವೇನು?

ನಾಗೇಶ: ಸ್ತ್ರೀಪುರುಷ ಸಮಾನತೆ—ಎಂದಾಗ ಗಂಡುಸರು ಹೇಗೆ ಬುದ್ಧಿಮಾಂದ್ಯದಿಂದ ಕುಳಿತುಬಿಡುತ್ತಾರೆ? ಹೆಂಗುಸರು ಹೇಗೆ ಉತ್ಸಾಹ ಭರಿತರಾಗುತ್ತಾರೆ....ಎಂಬುದು ನಮ್ಮ ತಂಗಿ ಕಾಮಿಯ ಮಾತಿನಿಂದಲೇ ತಿಳಿದುಬಂತಲ್ಲವೆ?

ಕಾಮಾಕ್ಷಿ: ಸಂದೇಹವೇನು? ಪುರುಷರಿಂದ ಸ್ತ್ರೀಯರಿಗೆ ಅಗಣಿತವಾದ ಅನ್ಯಾಯಗಳಾಗಿವೆ.

ಪ್ರಭಾಕರ: ಯಾವ ಅನ್ಯಾಯಗಳು?

ಕಾಮಾಕ್ಷಿ: ನಮ್ಮ ಧರ್ಮ—ಶಾಸ್ತ್ರ—ಪುರಾಣ—ಆಚಾರ—ವಿಚಾರ ಪ್ರತಿಯೊಂದರಲ್ಲಿಯೂ ಈ ದಬ್ಬಾಳಿಕೆ ಕಂಡುಬರುವುದಿಲ್ಲವೆ?

ಶ್ಯಾಮಣ್ಣ: ಒಬ್ಬನಿಂದ ಇನ್ನೊಬ್ಬನಿಗೆ ಅನ್ಯಾಯವಾಯಿತೆಂಬ ಸಿದ್ಧಾಂತವನ್ನು ಕಟ್ಟಿಕೊಂಡು ನಾವು ಕಾರ್ಯರಂಗಕ್ಕಿಳಿಯುವುದರಿಂದಲೆ ಇಷ್ಟೆಲ್ಲ ಗೊಂದಲ. ಆ ದೃಷ್ಟಿಯುಳ್ಳವನಿಗೆ, ತಾನಲ್ಲದ ಇನ್ನೊಬ್ಬ ಸಂದೇಹ ಪಾತ್ರನಾಗುತ್ತಾನೆ. ಆಗಬೇಕಾದುದು ಆಗಲಿಲ್ಲ; ಆಗಬಾರದುದು ಆಗಿದೆ—ಎಂಬ ತಿಳಿವಳಿಕೆಯಿಂದ ಸುಧಾರಕರು ತಮ್ಮ ಯಾತ್ರೆಯನ್ನಾರಂಭಿಸಬೇಕು....

ನಾಗೇಶ: ಭೇಷ್....ಆ ದಾರಿಯನ್ನೆ ಹಿಡಿಯೋಣ....ಇದುವರೆಗೆ ಸ್ತ್ರೀ ಸ್ವಾತಂತ್ರ್ಯಕ್ಕಾಗಿಯೆ ಮೀಸಲಾದ ಪತ್ರಿಕೆ ಇರಲಿಲ್ಲ; ಈಗ ಆಗ ಬೇಕಾಗಿದೆ; ಇದಕ್ಕೆ ನೀವೇನೆನ್ನುತ್ತೀರಿ....?

ಕಾಮಾಕ್ಷಿ: ಹೌದು—ಎನ್ನಬಹುದು.

ಪ್ರಭಾಕರ: ಎಂತಹ ಸ್ವಾತಂತ್ರ್ಯ ಎಂಬುದನ್ನು ಮೊತ್ತಮೊದಲು ವಿವೇಚಿಸಬೇಕು.

ನಾಗೇಶ: ಸ್ವಾತಂತ್ರ್ಯವು ಎಲ್ಲರಿಗೂ ಒಂದೇ....ಎಲ್ಲಬಗೆಯದೂ ಒಂದೆ....ಅದರ ಬಣ್ಣದಲ್ಲಿ ವ್ಯತ್ಯಾಸವಿಲ್ಲ. ಕೊಡುವ ಒಪ್ಪಿನಲ್ಲಿ ಇರ ಬಹುದು; ಭಾವೆ ಸಾಮ್ಯವಾದಿನಿ. ಸ್ತ್ರೀ ಪಕ್ಷಪಾತಿನಿ. ಬರುವ ಚುನಾ ವಣೆಯ ರಂಗಕ್ಕೆ ಇಳಿಯುತ್ತಾಳೆ. ನಿಮ್ಮ ಬೆಂಬಲಬೇಕಾಗಿದೆ.

ಪ್ರಭಾಕರ: ಬೆಂಬಲಬೇಕಾದರೆ ಮೊತ್ತಮೊದಲು ನಮ್ಮ ಸಂಸ್ಥೆ ಯನ್ನು ಒಡೆದುಹಾಕಲಿ!

ನಾಗೇಶ: ಈ ಮುಷ್ಕರದಲ್ಲಿ ಅವಳ ಕೈವಾಡವಿದೆಯೆಂದು ಭಾವಿಸಿ ದಿರಾ? ಎಂದೂ ಇಲ್ಲ. ಇಂತಹ ಉತ್ತಮ ಪತ್ರಿಕೆಗೆ ಅಲ್ಪಾಯುಷಿಯಾಗ ಬಾರದೆಂದು ಅವಳ ಅಭಿಪ್ರಾಯ.

ಪ್ರಭಾಕರ: ನನ್ನ ಶರೀರದಲ್ಲಿ ಪ್ರಾಣವಾಯು ಸಂಚರಿಸುವವರೆಗೆ..

ನಾಗೇಶ: ಒಬ್ಬನೇ ಒಬ್ಬನಿಂದ ಏನೂ ಆಗುವಂತಿಲ್ಲ ಪ್ರಭಾಕರ. ಅದನ್ನು ನೀನೇ ಬಲ್ಲೆ. ಶ್ಯಾಮಣ್ಣ ಆರು ತಿಂಗಳು ಕೆಲಸಕ್ಕೆ ಹಾಜರಾಗ ಲಿಲ್ಲ. ಪತ್ರಿಕೆ ಯಾವ ಸ್ಥಿತಿಗೆ ಇಳಿಯಿತೆಂಬುದು ನಿನಗೇ ಗೊತ್ತು....

ಪ್ರಭಾಕರ: ಶ್ಯಾಮಣ್ಣನ ಮಾತು ಹಾಗಿರಲಿ.

ನಾಗೇಶ: ಯಾಕೆ ಹಾಗಿರಬೇಕು? ಆತ ಮೊಳೆಜೋಡಿಸುತ್ತಾನೆ. ಪುಟ ಕಟ್ಟುತ್ತಾನೆ; ಬೇಕಾದರೆ ಮುದ್ರಣ ಮಾಡುತ್ತಾನೆ. ವಾರ್ತೆ ಬರೆಯುತ್ತಾನೆ; ಕಥೆಕಟ್ಟುತ್ತಾನೆ; ಕರಡು ತಿದ್ದುತ್ತಾನೆ; ಅಗ್ರಲೇಖವನ್ನೂ ಬರೆಯುತ್ತಾನೆ. ಪತ್ರವ್ಯವಹಾರದಲ್ಲಿ ನಿಪುಣನಾಗಿದ್ದಾನೆ. ಕಾಸಿಗೆ ಕಾಸಿನ ಲೆಕ್ಕವಿಡುವುದರಲ್ಲಿ ಗಟ್ಟಿಗನಾಗಿದ್ದಾನೆ....ಒಬ್ಬನೇ ಒಂದು ಸಂಸ್ಥೆ ಎಂದರೂ

ಸಲ್ಲುವುದು....ಆದುದರಿಂದ ಮನೆಯೊಳಗೆ ಅವನನ್ನು ಬಂಧಿಸಿದ್ದೀರಿ.... ಅಲ್ಲವೆ?

ಕಾಮಾಕ್ಷಿ: ನಾಗೇಶರಾಯರೆ.... ಭಾಮಾದೇವಿಯ ಮಾತನ್ನು ಬಿಟ್ಟು ಶ್ಯಾಮಣ್ಣನ ವರ್ಣನೆಗೆ ತೊಡಗಿರುವಿರಲ್ಲ....

ನಾಗೇಶ: ಸರಿ; ಇನ್ನು ಭಾಮಾದೇವಿಯ ಮಾತಿಗೆ ಬರೋಣ. ಅವಳಿಗೆ ಪ್ರೋತ್ಸಾಹಕೊಡುವ ಪತ್ರಿಕೆಯೊಂದು ಬೇಕಾಗಿದೆ....

ಕಾಮಾಕ್ಷಿ: ಕೊಡುತ್ತೇವೆ....ಎಂದು ಅಂದೇ ಹೇಳಿದ್ದೆವಲ್ಲ....

ನಾಗೇಶ: ನೀನು ಹೇಳಿದ್ದೆ ತಂಗಿ....ಆದರೆ....

ಕಾಮಾಕ್ಷಿ: ಆದರೇನು? ಈ ಕಚೇರಿಯಲ್ಲಿ ಒಂದೇ ಮಾತು; ಒಂದೇ ಹೊಣೆಗಾರಿಕೆ; ಒಂದೇ ಅಧಿಕಾರ....

ನಾಗೇಶ: ಎಲ್ಲ ನಮ್ಮ ತಂಗಿಯದೆಂದು ಭಾವಿಸೋಣವೆ?

ಕಾಮಾಕ್ಷಿ: ನನ್ನ ಮಾತು ಅವರ ಮಾತಿನ ಪ್ರತಿಧ್ವನಿ.

ನಾಗೇಶ: ಗಂಡು—ಹೆಣ್ಣು, ಹೆಣ್ಣು ಗಂಡೂ ಧ್ವನಿ ಪ್ರತಿಧ್ವನಿಯಂತಿರುವುದನ್ನು ನೋಡುವುದು ಚಂದವಲ್ಲವೆ? ಭಾಮೆ ಹೊಸ ಪತ್ರಿಕೆಯನ್ನು ನಿರ್ಮಿಸುವುದರಲ್ಲಿದ್ದಳು....ಮುದ್ರಣಯಂತ್ರವನ್ನು ನೋಡಿಟ್ಟುದೂ ಆಯಿತು. ನಿಮ್ಮ ಮುದ್ರಣಾಲಯದ ಕೆಲಸಗಾರರೇ ಅವರಲ್ಲಿಗೆ ಹೋಗಿ ಸೇರುವುದರಲ್ಲಿದ್ದರು. "ಧನುರ್ಧಾರಿ" ಎಂದು ಪತ್ರಿಕಾ ನಾಮಕರಣವಾಗಿತ್ತು. ಅಷ್ಟರಲ್ಲಿ ನನ್ನ ಪ್ರವೇಶವಾಯಿತು. ಹೊಸ ಪತ್ರಿಕೆ ಬೇಡವೆಂದೆ. ಸಂಗ್ರಾಮವನ್ನೆ ನಮ್ಮದನ್ನಾಗಿ ತಿರುಗಿಸಿಕೊಳ್ಳೋಣ; ಎಂದೆ....

ಕಾಮಾಕ್ಷಿ: ಭಾಮಾದೇವಿ ಏನೆಂದಳು....?

ನಾಗೇಶ: ಎಲ್ಲವನ್ನೂ ನನಗೆ ವಹಿಸಿಕೊಟ್ಟಳು. ನೀವು ಮಾಡಬೇಕಾದದು ಏನೂ ಇಲ್ಲ. ಅವಳಿಗೆ ಸಂಪೂರ್ಣ ಸಹಾಯವನ್ನು—ಈ ಪತ್ರಿಕಾ ಪುಟಗಳಲ್ಲಿ—ಕೊಟ್ಟರಾಯಿತು.

ಕಾಮಾಕ್ಷಿ: ಅದಕ್ಕೇನಾಗಬೇಕು?

ಪ್ರಭಾಕರ: ತತ್ವಕ್ಕೆ ವಿರೋಧವಾಗದಿದ್ದರೆ....

ನಾಗೇಶ: ತತ್ವ. ತತ್ವ....ಎಂದು ಪ್ರತಿ ನಿಮಿಷ ವಿಚಾರಿಸುವುದಕ್ಕೇನೂ ಇಲ್ಲ ಪ್ರಭಾಕರ....ನೋಡಿ ನಿಮ್ಮ ಮನೆಯೊಳಗೆ ಮೂರು ಮಂದಿ ಎಷ್ಟು ಚಂದವಾಗಿ ಒಡನಾಡಿಕೊಂಡಿರುವಿರಿ? ಇದೊಂದು ಸಮತೆಯ ಕ್ರಮ. ಪತ್ರಿಕೆಯಲ್ಲಿ ಈ ತಂಗಿ ದುಡಿಯುತ್ತಾಳೆ. ಗಂಡ ಹೆಂಡತಿ ಇಬ್ಬರೂ ಅಭೇದವಾಗಿ ಪತ್ರಿಕಾ ಶ್ರೇಯಸ್ಸನ್ನು ಪಡೆಯುತ್ತಿದ್ದೀರಿ; ಇದೊಂದು ಬಗೆಯ ಸಮತೆ....ಇಷ್ಟನ್ನೆ ನೀವು ಪ್ರತಿಪಾದಿಸಿದ್ದರಾಯಿತು. ಸಮತಾವಾದ ಎಂದರೆ ಇಷ್ಟೆ, ಇಲ್ಲಿ ವಿಚಾರಿಸಬೇಕಾದ ತತ್ವ ಏನೂ ಇಲ್ಲ. ನಮ್ಮ ತಂಗಿ ಕಾಮಾಕ್ಷಿಯಂತೆ....ಭಾಮೆಯೂ ಒಬ್ಬಳು ಸನ್ಮಾನ್ಯ ಮಹಿಳೆಯಾಗಿದ್ದಾಳೆ....

ಕಾಮಾಕ್ಷಿ: ನಾಗೇಶರಾಯರೆ....ನಮ್ಮಿಂದ ಏನಾಗಬೇಕು ಹೇಳಿ.

ನಾಗೇಶ: ಆಗಬೇಕಾದುದನ್ನೆಲ್ಲ ಹೇಳಿದೆ. ಇದಕ್ಕೆ ನೀವು ಹುಂ ಎಂದರೆ, ನಿಮ್ಮ ಕೆಲಸಗಾರರ ಪುಸ್ಕರ ಮೊಳಕೆಯಲ್ಲಿಯೇ ಮುರಿದು ಬೀಳುವುದು. ನಿಮ್ಮ ಪತ್ರಿಕೆಯ ಜೀವನವು ಅವ್ಯಾಹತವಾಗುವುದು.... ಇರಲಿ; ಶ್ಯಾಮಣ್ಣ ಏನೆನ್ನುತ್ತಾನೆ?

ಶ್ಯಾಮಣ್ಣ: ನಾನು ಹೇಳಬೇಕಾದುದೇನೂ ಇಲ್ಲ. ವ್ಯಕ್ತಿಗಳನ್ನೂ ಪಾತ್ರಗಳನ್ನೂ ನೋಡದೆ ಕೆಲಸ ಮಾಡುವುದೊಂದೇ ನನ್ನ ಇಷ್ಟು ವರ್ಷದ ಅಭ್ಯಾಸವಾಗಿದೆ. ಅದಕ್ಕಿಂತ ಹೆಚ್ಚು ನೋಡುತ್ತಾ ಹೋದರೆ, ಅಲ್ಲಿ ವ್ಯಸನ....ಇಲ್ಲಿ ನಿರಾಶೆ....ಕಣ್ಣು ಮುಚ್ಚಿ ಕರ್ಮ ಮಾಡು....ಎಂದು ಅಂತರಾತ್ಮವು ಸಾರಿ ಹೇಳುತ್ತದೆ.

ಪ್ರಭಾಕರ: ಕಣ್ಣು ತೆರೆದು ಕೆಲಸ ಮಾಡು....ಎಂದು ನನ್ನ ಈ ಚಿಕ್ಕ ಮನಸ್ಸಾಕ್ಷಿ ಹೇಳುತ್ತದೆಯಲ್ಲ....

ನಾಗೇಶ: ಕಣ್ಣು ಮುಚ್ಚುವವರು ಮುಚ್ಚಿರಲಿ; ತೆರೆದಿರುವವರು ತೆರೆದಿರಲಿ; ಒಟ್ಟೊಟ್ಟಿಗೆ ಸಾಗುವಷ್ಟು ಕಾಲ ಒಟ್ಟಾಗಿದ್ದು ಕೆಲಸಮಾಡಬಹುದಲ್ಲವೆ?

ಪ್ರಭಾಕರ: ಬಹುದು.

ನಾಗೇಶ: ಅದೇ ನಮಗೆ ಬೇಕಾದುದು; ಇಷ್ಟು ನಿರ್ಣಯವಾದ ಮೇಲೆ ಇನ್ನು ಮಾತಾಡಬೇಕಾದ ಅವಶ್ಯತೆಯಿಲ್ಲ. ಬರುತ್ತೇನೆ ಪ್ರಭಾಕರ...ಬರುತ್ತೇನೆ....ಕಾಮಾಕ್ಷಿ....ಬರುತ್ತೇನೆ....ಶ್ಯಾಮಣ್ಣಾ ಎಂದು ನಾಗೇಶ ಕುರ್ಚಿಯನ್ನು ಬಿಟ್ಟು ಹೊರಗೆ ಕಾಲಿಟ್ಟ. ಮತ್ತೆ ಮರೆತುದೇ ನ್ನನ್ನೊ ಸ್ಮರಿಸಿದವನಂತೆ,

"ನಿಮ್ಮ ಪತ್ರಿಕೆಯನ್ನೊಂದು ಪಾಲುಗಾರಿಕೆಯ ಸಂಸ್ಥೆಯಿಂದ ನಡೆಸುವುದಕ್ಕೆ ಸಮ್ಮತಿಸಬಹುದೆ? ಒಂದು ಲಕ್ಷ—ಕನಿಷ್ಟಪಕ್ಷಕ್ಕೆ ಐವತ್ತು ಸಾವಿರವಾದರೂ ಬೇಕಾದೀತು....ಈ ಕಾಲದಲ್ಲಿ ಇಷ್ಟು ಹಣ ಸಂಗ್ರಹಿಸಲು ಕಷ್ಟವೇನು? ನಾಲ್ಕು ಜನರ ಜೇಬಿಗೆ ಕೈಹಾಕಿ ತಂದು ಕೊಟ್ಟೇನು"— ಎಂದು ನಗುತ್ತಾ ನುಡಿದ....

ಪ್ರಭಾಕರ "ಆ ಕಾಲ ಬರುವಾಗ ಯೋಚಿಸೋಣ" ಎಂದ. ಆಗಲಿ....ಇದು ತತ್ವಕ್ಕೆ ಸಮ್ಮತವೇ ವಿರೋಧವೇ? ನೋಡಿ....ಮತ್ತೆ ಹೇಳಿ....ಎನ್ನುತ್ತಾ ನಾಗೇಶ ಉಳಿದವರ ಮಾತನ್ನು ಕೇಳುವಷ್ಟು ಕಾಲ ನಿಲ್ಲದೆ ಹೊರಟು ಹೋದ.

ಸದ್ಯಕ್ಕೆ ಮುಷ್ಕರದ ಸಂಭವವಿಲ್ಲವಷ್ಟೆ....ಎಂದು ಮೂವರಿಗೂ ಸಮಾಧಾನವಾಯಿತು.

೮

ಪ್ರಭಾಕರನೊಡನೆ ಕೂಡು ಬಳಗವಾಗಿ ಸೇರಿಕೊಂಡ, ಮನಸ್ಸಿಲ್ಲ ದಿದ್ದರೂ ಸೇರಬೇಕಾಗಿ ಬಂದ ಶ್ಯಾಮಣ್ಣನ ಬಾಳು ಅದೊಂದು ಬಗೆಯ ಸಮಾಧಾನವನ್ನು ಹೊಂದಿತೆಂದು ಹೇಳದಿರಲಾಗುವುದಿಲ್ಲ. ಇಳಿದುಹೋದ ಮೈ ತುಂಬಿತು. ಅಳಿದುಹೋದ ಉತ್ಸಾಹ ಉಕ್ಕಿತು. ಊರುದ್ದಕ್ಕೂ ಅಲೆದಾಡುತ್ತಿದ್ದಾಗ ಇಲ್ಲದ ತೂಕ ಈಗ ಬಂದಂತಾಯಿತು. ಪ್ರಭಾಕರ— ಕಾಮಾಕ್ಷಿಯರಿಬ್ಬರೂ ಅವನನ್ನು ಅಣ್ಣನೆಂದು ಸಂಬೋಧಿಸುತ್ತಾರೆ. ಶಾಂತಮ್ಮ ತಮ್ಮನೆಂದು ಕರೆಯುತ್ತಿದ್ದಳು. ಹೀಗೆ ಅಣ್ಣತಮ್ಮಂದಿರ ಅಕ್ಕತಂಗಿಯರ ನಡುವೆ ಬಾಳುವ ಭಾಗ್ಯ ಅವನಿಗೆ ಹೊಸದು.

ಅವನು ಬೇರುಬಿಟ್ಟುದು ಬಂಜರು ನೆಲದಲ್ಲಿ. ಪ್ರೇಮರಸದ ಬಿಂದು ಕೂಡ ಇಲ್ಲದೆ ಒಣಗಿ ಎಷ್ಟು ಕಂಗೆಟ್ಟಿದ್ದನೋ ಏನೋ. ಬಾಳಿನ್ಯಷ್ಟು ಯರ್ಗಗಳು ತಾತ್ಸಾರ ಸೂಚಕವಾದ ಮುಖಭಂಗಿಯನ್ನು ಕೊಟ್ಟಿದ್ದುವು. ' ಲೋಕವೆ! ನೀನು ನನ್ನ ಶತ್ರು. ಬಾ! ಸೆಣಸಾಡು. ಭುಜಹೊಡೆದು ಇದಿರಿಸುತ್ತೇನೆ " ಎಂಬಂತಹ ಉದ್ಧಟ ಧೈರ್ಯ ಪ್ರತಿಯೊಂದು ನಡೆಯಲ್ಲಿಯೂ ಕಂಡುಬರುತ್ತಿತ್ತು. ಅವನನ್ನು ಅಕ್ಕರೆಯಿಂದ ಮಾತಾಡಿಸಿದವರಿಲ್ಲ. ಸಹೃದಯತೆಯಿಂದ ಒಡನಾಡಿದವರಿಲ್ಲ. ಅವನೂ ಒಬ್ಬ ಮನುಷ್ಯನೆಂಬುದನ್ನು ಒಪ್ಪಿಕೊಂಡು, ಇತರ ಮನುಷ್ಯರಿಗೆ ಇರಬೇಕಾದ ಜೀವನ ಸೌಕರ್ಯಗಳು ಅವನಿಗೂ ಇರಬೇಕೆಂದು ಒಮ್ಮೆಯಾದರೂ ಒಂದು ಹನಿ ಕಣ್ಣೀರನ್ನು ವೆಚ್ಚಮಾಡಿದವರಿಲ್ಲ. ಎಂದ ಮೇಲೆ ಅವನ ಪ್ರಪಂಚವೆಂದರೆ ಮಧುರಭಾವದ ಮಾನವ ಪ್ರಪಂಚವಲ್ಲ. ಪಾಷಾಣ ಪ್ರಪಂಚ; ಕಂಟಕ ಪ್ರಪಂಚ; ಸರ್ಪ ಪ್ರಪಂಚ! ಈ ಪ್ರಪಂಚದಲ್ಲಿ ಇಂತಹ ವ್ಯಕ್ತಿಗಳಿಬ್ಬರು ಮುಖತೋರಿ ಕರೆಯುವುದೆಂದರೆ ಶ್ಯಾಮಣ್ಣನಿಗೆ ಹೆದರಿಕೆಯುಂಟಾಯಿತು.

ಎಲ್ಲರೂ ಕಾಲಿನಿಂದ ಒದೆದ ಒಡವೆ, ಇವರಿಗೇಕೆ ಬೇಕಾಯಿತು? ಇವರ ಪ್ರೀತಿ ವಿಶ್ವಾಸಗಳನ್ನು ಸದಾಕಾಲ ಇಟ್ಟುಕೊಳ್ಳುವ ಯೋಗ್ಯತೆಯನ್ನು ಬ್ರಹ್ಮ ತನ್ನ ಹಣೆಯುಲ್ಲಿ ಬರೆದಿರುವನೆ? ನಿರುಪಯೋಗಿ ವಸ್ತು; ತ್ಯಾಜ್ಯ ವಸ್ತು; ಹೀನ ವಸ್ತುವೆಂದು ಇತರರು ಕಡೆಗಣಿಸಿದುದನ್ನು ಇವರು ಹೆಕ್ಕಿಕೊಂಡಿದ್ದಾರಲ್ಲ? ಇಷ್ಟು ಜನರಿಗಿಂತ ಇವರು ಅಧಿಕ ಬುದ್ಧಿಶಾಲಿಗಳೆ? ಅಥವಾ ಕೊರಡಿನಂತೆ ಕುರುಡರೆ? ಇವರೇ ಬುದ್ಧಿಶಾಲಿಗಳಾಗಿದ್ದರೆ, ಉಳಿದ ಲೋಕಕ್ಕೆ ಯಾವ ಬೆಲೆ? ಇವರೇ ಮೂರ್ಖರಾಗಿದ್ದರೆ, ಮತ್ತೊಮ್ಮೆ ತನಗೆ ನಿರಾಶೆ....ಹೀಗೆಲ್ಲ ಆಲೋಚಿಸುತ್ತಾ ಕೆಲ ದಿನಗಳನ್ನು ಕಳೆದುದಾಯಿತು. ಈ ಮಧ್ಯೆ ಕಾಮಾಕ್ಷಿ—ಪ್ರಭಾಕರರಿಬ್ಬರ ನೈಜಗುಣಗಳನ್ನು ತಿಳಿವ ಅವಕಾಶ ಸಿಕ್ಕಿತು. ಇಬ್ಬರೂ ಸ್ವಚ್ಛ ಮನುಷ್ಯರು. ಸ್ವಭಾವವನ್ನೂ ಮಾಗಿಲ್ಲವಷ್ಟೆ. ಸಜ್ಜನಿಕೆಯ ಪ್ರಕೃತಿ. ಆದರೆ ಅನುಭವ ಸಾಲದೆ ಚಿಕ್ಕ ಚಿಕ್ಕ ಅವಿಚಾರಗಳು ಕೆಲವು ಸೇರಿಕೊಂಡಿದ್ದುದರಿಂದ, ಮಾನವೀಯ

ತೆಯ ಚಿತ್ರ ರೇಖೆಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಕಂಡುಕುಂದು ಕಾಣಿಸುತ್ತದೆ. ಎಲ್ಲದಕ್ಕಿಂತಲೂ ಹೆಚ್ಚಿನ ಗುಣವೆಂದರೆ ಬಿಚ್ಚಿದ ಮನಸ್ಸು. ಅದು ಯಾರಲ್ಲಿದೆಯೋ ಅಂಥವರೊಡನೆ ಬೇಕಾದರೆ ನರಕದ ವರೆಗೆ ಪಯಣ ಬೆಳೆಸಬಹುದು—ಎಂಬ ನಿರ್ಧಾರಕ್ಕೆ ಬಂದ.

ಒಂದು ಮನೆಯೊಳಗೆ ಅಮೂಲ್ಯವಾದ ಎಷ್ಟೋ ಒಡವೆಗಳಿರುತ್ತವೆ. ಆದರೆ ಒಂದು ಕೆಲಸಕ್ಕೆ—ಹಿಡಿಕುಂಟೆ (ಕಸಬರಿಗೆ—ಪೊರಕೆ)ಯೇ ಬೇಕಾಗುತ್ತದೆ. ಮನೆಯಲ್ಲಿ ಕಸತುಂಬಿದಾಗ, ರೂಪಾಯಿ ಗಂಟುಗಳೂ ಜರತಾರಿ ಸೀರೆ ಶಾಲುಗಳೂ ಪ್ರಯೋಜನಕ್ಕೆ ಬೀಳುವುದಿಲ್ಲ. ಸಮ್ಮಾರ್ಜನಿಯೇ ಆಗಬೇಕು. ಪ್ರಭಾಕರನ ಮನೆಯಲ್ಲಿ ತಾನೊಂದು ಸಮ್ಮಾರ್ಜನಿಯ ಹಾಗೆ— ಎಂದವನು ಭಾವಿಸಿಕೊಂಡು, ತನಗೆ ತಾನೆ ಹಾಕಿಕೊಂಡ ಗಡಿ ಮೇರೆಯನ್ನು ಮೀರದೆ ಜಾಗರೂಕತೆಯಲ್ಲಿದ್ದ. ಹೀಗೆ ಭಾವಿಸುವುದಕ್ಕೆ ಪ್ರಬಲ ಕಾರಣವಿತ್ತು. ಬಲೆ ಹೆಣೆದು ಬೀಸಿ ಹಿಡಿಯಬೇಕಾದ ಹಕ್ಕಿಗಳಿರಲಿಲ್ಲ; ಆಸೆಯೂ ಇರಲಿಲ್ಲ. ಮಹತ್ವಾಕಾಂಕ್ಷೆಯಿರಲಿಲ್ಲ. ಒಂದು ಜೀವ—ಒಂದೊಡಲು....ಪರೋಪಕಾರದಲ್ಲಿ ಸವೆದರೆ ಧನ್ಯ....ಗೊತ್ತುಗುರಿ ಇರುವ ಕಾರ್ಯವಲ್ಲ; ಏನಾದರೊಂದು ಕಾರ್ಯ ಹೇಗಾದರೂ ಕೈಗೂಡಿ, ತನ್ನ ಬಾಳಿನ ಪ್ರತಿ ನಿಮಿಷಗಳು ಸಫಲವಾಗಲಿ ಎಂದಿಷ್ಟೆ ಹಾರೈಕೆ. ಹುಟ್ಟಿದ ಸತ್ತ....ಎಂದಲ್ಲ....ಹುಟ್ಟಿದುದಕ್ಕೆ ಏನೋ ಅಲ್ಪ ಸಾಧನೆಯನ್ನಾದರೂ ಮಾಡಿ ಸತ್ತ....ಎಂದು ನಾಲ್ಕು ಜನ ಹೇಳಿದರೆ ಸಾಕು. ಹೀಗೆ ಮಾಡಿದುದು ನಾಟಕದ ವೇಷವಿರಬಹುದು; ಪತ್ರಿಕೆಯಲ್ಲಿ ಬರೆದ ಲೇಖನವಿರಬಹುದು; ಅಥವಾ ದಿವ್ಯವಾದ ನಳಪಾಕಗಳೂ ಇರಬಹುದು. ಹತ್ತು ಮಂದಿಯ ನೋಟವನ್ನಾಕರ್ಷಿಸುವುದಿದ್ದರೆ ತೃಪ್ತಿ; ಸಾಯುವ ಕಾಲಕ್ಕೆ ಸ್ಮಶಾನದ ವರೆಗೆ ಬಂದು ಒಂದೆರಡು ಕಣ್ಣೀರು ಸುರಿವವರನ್ನು ಸಂಪಾದಿಸಿಕೊಳ್ಳುವಷ್ಟು ಅರ್ಹನೆನಿಸಿದರೆ ಕೃತಾರ್ಥ! ಎಂದು ಪದೇಪದೇ ತನ್ನ ಮನಸಿನಲ್ಲಿಯೇ ಆಲೋಚನೆ ಮಾಡುತ್ತಿದ್ದನು. ಪ್ರಭಾಕರನ ಸಂಪರ್ಕದಿಂದ ಈ ತನ್ನ ಬಯಕೆಗೆ ವಿಘ್ನಬರಲಾರದೆಂದೂ ತೋರಿತು. ಅದುದರಿಂದಲೆ ಅವರ ಮನೆಯ ಮಂದಿಯಾಗಿ ಸೇರಿಕೊಂಡ. ಎದೆಯಲ್ಲಿ ಅಳುಕಿ

ಬಳುಕಿ ನಿರ್ಧರಿಸಿದ; ನಿರ್ಧರಿಸಿದ ಮೇಲೆ ಇತರ ಭಾವನೆಗಳನ್ನೆಲ್ಲ ಬಿಟ್ಟು— ಆ ಅಕ್ಕತಂಗಿ ತಮ್ಮಂದಿರೊಡನೆ ಹುರಿಗೊಂಡು ಏಕೀಭವಿಸಿ ಕಾಲವನ್ನು ಕಳೆಯುತ್ತಿದ್ದ. ಕೆಲ ತಿಂಗಳಲ್ಲಿ ತಾನು ಬೇರೆ—ಎಂಬ ಏಕಾಂತತೆ ಇಲ್ಲ. ಕಸಿ ಕಟ್ಟಿದ ಕುಡಿ ರೆಂಬೆ ಕಾಂಡದೊಡನೆ ಕೂಡಿಬರುವುದಕ್ಕೆ ಹೆಚ್ಚು ಕಾಲ ಬೇಕಾಗುವುದಿಲ್ಲ. ಕೂಡಿದ ಮೇಲೆ ಕತ್ತರಿಸದೆ ಬೇರಾಗುವುದಿಲ್ಲ.

ಪ್ರಭಾಕರ—ಕಾವಾಕ್ಷಿಯರು ಅಂದು ತಮ್ಮ ಕಚೇರಿಯೊಳಗೂ ಇಂದು ತಮ್ಮ ಮನೆಯೊಳಗೂ ಈ ತೃಣವನ್ನು ಬರಮಾಡಿಕೊಂಡುದು ಏಕೆ? ಎಂದವನು ಪ್ರಶ್ನಿಸಲೇ ಇಲ್ಲ. ಉದ್ದೇಶವೇನಿದ್ದರೇನು? ಸ್ವಾರ್ಥವೋ ಪರಪ್ರಯೋಜನ ಬುದ್ಧಿಯೋ ಏನಿದ್ದರೂ ಬಾಧಕವಿಲ್ಲ. ಅವನಲ್ಲಿ ಸ್ವಾರ್ಥ ಎಂಬುದು ಇಲ್ಲವಾದುದರಿಂದ ಘರ್ಷಣಗಳಿಗೆ ಎಡೆಯಿಲ್ಲ. ಒಂದು ಬೆಂಕಿಕಡ್ಡಿಯನ್ನು ಬೆಂಕಿಗೆ ಹಿಡಿಯಬೇಕು; ಇಲ್ಲವೆ ಅದರ ಪೆಟ್ಟಿಗೆಯ ಬದಿಯಲ್ಲಿರುವ ಮದ್ದಿನ ಲೇಪಕ್ಕೆ ಒರೆಯಬೇಕು. ಅನ್ಯಥಾ ಅದು ಉರಿಯುವ ಹಾಗಿಲ್ಲ. ಶ್ಯಾಮಣ್ಣನ ಎದೆಬದಿಯಲ್ಲಿ ಸ್ವಾರ್ಥದ ಲೇಪವಾಗಲಿ, ಆಸೆಯ ಕಾವಾಗಲಿ ಇಲ್ಲದುದರಿಂದ, ಆ ಇಬ್ಬರಿಗೂ ತನಗೂ ತಿಕ್ಕಾಟವಾಗುವ ಸಂಭವವಿಲ್ಲ. ತಿಕ್ಕಾಟವಾದರೂ ಬೆಂಕಿಯೇಳುವ ಭೀತಿಯಿಲ್ಲ. ಮತ್ತೇಕೆ ಚಿಂತೆ?

ಶ್ಯಾಮಣ್ಣನೀಗ ಮನೆಯೊಳಗೆ ಮನೆಯ ಜನವಾಗಿದ್ದಾನೆ. ಆ ಕೆಲಸ ಈ ಕೆಲಸವೆಂದಿಲ್ಲ; ಯಾವುದಕ್ಕೂ ಕೈಕೊಡುತ್ತಾನೆ. ಕಚೇರಿಯಲ್ಲಿ ಕಸಗುಡಿಸುವುದರಿಂದ ಮೊದಲುಗೊಂಡು ಸಂದರ್ಭವೊದಗಿದರೆ, ಅಗ್ರಲೇಖ ಬರೆಯುವ ವರೆಗೆ ಅವನಕ್ಕೆ!

ಒಮ್ಮೊಮ್ಮೆ ವಿನೋದಕ್ಕಾಗಿ ನಾಗೇಶರಾಯನು ಪ್ರಭಾಕರನಲ್ಲಿ "ನಿಮ್ಮ ಯಜಮಾನರು ಹೇಗಿದ್ದಾರೆ?" ಎಂದು ಕೇಳುವುದೂ ಇತ್ತು.

ಪ್ರಭಾಕರನು ಇದಕ್ಕೆ ವಿಶಲಾರ್ಥವನ್ನು ಕಲ್ಪಿಸದೆ "ಚೆನ್ನಾಗಿದ್ದಾನೆ"—ಎಂದು ಉತ್ತರಕೊಡುತ್ತಿದ್ದ.

೬

ಇತ್ತೀಚೆಗೆ ಮನಸ್ಸು ಹದಗೆಟ್ಟಿದ್ದ ನಾಗೇಶನಿಗೆ ಪ್ರಭಾಕರನ ಸ್ಥಿತಿಗತಿಗಳನ್ನು ಕಂಡು ಹೊಟ್ಟೆಗೆ ಕತ್ತಿಹಾಕಿದಂತಾಯಿತು. ಶ್ಯಾಮಣ್ಣನನ್ನು ಬಗಲಿಗೆ ಸೇರಿಸಿಕೊಳ್ಳಬೇಕೆಂದಿದ್ದ ಹಂಚಿಕೆ ವ್ಯರ್ಥ. ತನ್ನನ್ನು ಹೆಗ್ಗಣವೆಂದು ಕರೆದಾಕೆ ಇನ್ನೊಂದು ಹೆಗ್ಗಣವನ್ನು ಮನೆಯೊಳಗೆ ಸಾಕುತ್ತಿದ್ದಾಳೆ. ನಾಗೇಶನಿಗೆ ಎಂತಹ ಪರಾಭವ?

ಹಲಬಾರಿ ನಾಗೇಶ ಶ್ಯಾಮಣ್ಣನನ್ನು ಮಾತಿನಿಂದ ಮಿಡಿದು ಪರೀಕ್ಷಿಸಿದ್ದ. "ಶ್ಯಾಮಣ್ಣಾ! ನಿನ್ನ ಶಕ್ತಿ ಕರಡಚ್ಚುಗಳನ್ನು ತಿದ್ದುವುದರಲ್ಲಿಯೇ ವಿನಿಯೋಗ ಹೊಂದುತ್ತಿದೆಯಲ್ಲ. ನೀನೆ ಸ್ವತಂತ್ರ ಸಂಪಾದಕನಾಗಬಾರದೇಕೆ?" ಎಂದು ಕೇಳಿದ್ದ. ಇದಕ್ಕೆ ಶ್ಯಾಮಣ್ಣನ ಉತ್ತರ ಒಂದೇ:—ನನಗೇನು ಬೇಕು ನಾಗೇಶರಾಯರೆ? ಮನಸ್ಸಿನ ಪ್ರವೃತ್ತಿಗೆ ತಕ್ಕುದಾದ ಕೆಲಸವಿಲ್ಲದೆ ನಿರುದ್ಯೋಗದ ಜಾಡ್ಯಹಿಡಿಯಬಾರದು; ಅಷ್ಟೆ. ನನಗೆ ಆ ಭೀತಿಯಿಲ್ಲ. ನನ್ನ ತಮ್ಮ ತಂಗಿಯರು ನನ್ನನ್ನು ತಮ್ಮವನೆಂದು ಭಾವಿಸುವಷ್ಟು ಕಾಲ ಆಭಯವಿಲ್ಲ— ಎಂದು.

"ನಿನ್ನ ಪ್ರವೃತ್ತಿ ಅತಿ ವಿಶಾಲವಾದುದು ಶ್ಯಾಮು! ಬರೆಯುವುದೆಂದೇ ಏನು? ಯಾವುದಾದರೊಂದು ಸಂಸ್ಥೆಯ ಯಜಮಾನನಾಗಿ ಕೆಲಸ ಮಾಡಲಾರೆಯಾ? ಇದರಿಂದ ಲಾಭವೂ ಬರುವುದು. ಪರಾಧೀನತೆಯೂ ತಪ್ಪುವುದು"—ಎಂದು ತಮ್ಮದೇ ಆದ ಔಷಧಗಳ ಅಂಗಡಿಯೊಂದನ್ನು ತೆರೆವ ಯೋಚನೆಯನ್ನು ಅವನ ಮುಂದಿಟ್ಟ.

"ಮನುಷ್ಯ ಪರಾಧೀನನೂ ಹೌದು; ಸ್ವಾತಂತ್ರನೂ ಹೌದು. ಧರ್ಮ-ನೀತಿಗಳಿಗೆ ವ್ಯವಹಾರದಲ್ಲಿ ಎಡೆಯಿದ್ದರೆ, ಅವನು ಅವುಗಳಿಗೆ ಪರಾಧೀನನು. ಈ ಪಾರತಂತ್ರ್ಯದೊಳಗೆ, ಮಾಡುವ ಕೆಲಸವನ್ನು ಚೊಕ್ಕಟವಾಗಿಮಾಡುವ ಸ್ವಾತಂತ್ರ್ಯ ಇದ್ದೇ ಇದೆ"— ಎಂದು ಉತ್ತರಕೊಡುತ್ತಿದ್ದ

ಶ್ಯಾಮಣ್ಣನನ್ನು ಕದಲಿಸುವುದು ಅಸಾಧ್ಯವಾದ ಮೇಲೆ, ಬೇರೆ ದೆಸೆಯಿಂದ ದಾಳಿಹೂಡಬೇಕೆಂದು ನಾಗೇಶ ಪ್ರಯತ್ನಿಸಿದ. ಶಾಂತಮ್ಮನಿಗೆ

ಶರಣಾಗಹೋಗಬೇಕು. ಆಕೆ ನಿಕ್ಕಿಪ್ತ ಸ್ವಭಾವದವಳು. ಹೊಸತನ್ನು ಮೆಚ್ಚದ ಪ್ರಾಚೀನ ಪ್ರಾಣಿ. ಮಾತಿನ ಬಣ್ಣವನ್ನು ಕಂಡು ಮಂಚಿತಳಾಗುವವಳು. ಇಂತಹ ಸಾಂತಮ್ಮನ ಮೂಲಕ ಪ್ರಭಾಕರನ ಸಂಸಾರದೊಳಗೆ ಕಾಲಿಡಬಾರದೇಕೆ ?

ಇದಕ್ಕೆ ಅನುಕೂಲ ಸಂದರ್ಭ ದೊರೆಯಿತು. ಡಾ. ನಾಗೇಶರಾಯರ ತಮ್ಮನ ಮಗನಿಗೆ ಅನ್ನಪ್ರಾಶನ. ಚೊಚ್ಚಲ ಮಗು. ಸಡಗರದಿಂದ ಈ ಸಮಾರಂಭವನ್ನು ಏರ್ಪಡಿಸಬೇಕೆಂದು ನಾಗೇಶರಾಯ ಸಂಕಲ್ಪಿಸಿದ್ದ. ಅವನಿಗೆ ಹೊಟ್ಟೆಯಲ್ಲಿ ಹುಟ್ಟಿದ ಕೂಸಿಲ್ಲ. ತಮ್ಮನ ಮಗನನ್ನೆ ತನ್ನ ಮಗನೆಂದು ಭಾವಿಸಿದ್ದಾನೆ. ತಮ್ಮನಿಗೆ ನಗರದಿಂದ ನಾಲ್ಕು ಮೈಲು ದೂರವಿರುವ ಒಂದು ಹಳ್ಳಿಯಲ್ಲಿ ಚೊಕ್ಕಟವಾದ ಹೊಲಮನೆಗಳನ್ನು ಒದಗಿಸಿಕೊಟ್ಟಿದ್ದಾನೆ. ಅಲ್ಲಿ ಬಲು ಠೀವಿಯಿಂದ ಈ ಸಮಾರಂಭ ಜರಗುವುದು. ಪ್ರಭಾಕರ—ಕಾಮಾಕ್ಷಿಯರಿಗೆ ಆಮಂತ್ರಣಕೊಡಬೇಕು. ಸಾಂತಮ್ಮನನ್ನು ಅವಶ್ಯವಾಗಿ ಒಯ್ಯಬೇಕು.

ಮನೆಯಲ್ಲಿ ಇತರರಾರೂ ಇಲ್ಲದ ಕಾಲದಲ್ಲಿ ನಾಗೇಶರಾಯನು ಬಂದು, ಸಾಂತಮ್ಮ ಕೈಸಾಲೆಗೆ ಬರುವಷ್ಟು ಕಾಲ ಕಾದುನಿಂತಿದ್ದು— "ಚಿಕ್ಕಮ್ಮ, ನಾಡಿದು ಸೋಮವಾರ ನಮ್ಮ ತಮ್ಮ ರಾಮಕೃಷ್ಣನ ಮಗನಿಗೆ ಅನ್ನಪ್ರಾಶನ; ಒಂದುಗಳಿಗೆ ಬಿಡುವಾದಿ ಬರಬಹುದೆ?"—ಎಂದು ಕೇಳಿದನು.

ಅನ್ನಪ್ರಾಶನ....ಒಂದು ವರ್ಷವಾಗದ ಹಸುಗೂಸು; ಅದರಲ್ಲಿಯೂ ಗಂಡು! ಸಡಗರದ ಸಮಾರಂಭ....ತನ್ನ ಸೊಸೆ ಕಾಮಾಕ್ಷಿ ಒಂದು ಗಂಡು ಮಗುವನ್ನು ಪಡೆದಿದ್ದರೆ ಇಲ್ಲಿಯೇ ಆ ಪುಣ್ಯವನ್ನು ಕಣ್ಣಾರೆ ಕಾಣಬಹುದಾಗಿತ್ತು. ಈಗ ಇರುವುದು ಬರಿಯ ಕಣ್ಣುಗಳು ಮಾತ್ರ. ಕಾಣುವ ಪುಣ್ಯವಿಲ್ಲ. ಅಲ್ಲಿಗಾದರೂ ಹೋಗಿ ಆ ಮುದ್ದು ಮಗುವನ್ನೆತ್ತಿ ಬಾಯಿಗೆ ಪರಮಾನ್ನನಿಕ್ಕಿಸಿ ಒಂದುಗಳಿಗೆ ಪ್ರಪಂಚದ ಘೋರ ದುಃಖಗಳನ್ನು ಮರೆಯಬಹುದಲ್ಲವೆ? ತನಗೆ ಮಕ್ಕಳನ್ನು ಪಡೆವಭಾಗ್ಯ ಇರಲಿಲ್ಲ. ಕಾಮಾ

ಕ್ಷಿಯು ಹಣೆಯಲ್ಲಿ ವಿಧಿಲಿಖಿತ ಹೇಗಿದೆಯೊ?....ಬರುವ ಸಂದರ್ಭವನ್ನು ಬಿಡಬಾರದು.

"ಬಾ ಕುಳಿತುಕೋ ನಾಗೇಶ....ಒಂದು ಲೋಟ ಕಾಫಿಮಾಡಿ ಕೊಡಲೇ?" ಎಂದು ಶಾಂತಮ್ಮ ಕುರ್ಚಿಯೊಂದನ್ನು ತಂದು ಇಟ್ಟಳು.

"ಬಿಡುವಿಲ್ಲ ಚಿಕ್ಕಮ್ಮ....ಬಿಡುವಿಲ್ಲ....ಕಚೇರಿಯಲ್ಲಿ ಹೆಣಕಾದಂತೆ ರೋಗಿಗಳು ನನ್ನನ್ನು ಕಾಯುತ್ತಿರಬಹುದು.....ಕುರ್ಚಿಯನ್ನು ತಂದಿಟ್ಟಿ. ಕುಳಿತುಕೊಳ್ಳದೆ ಹೋದರೆ ಮಾಡಿದ ಉಪಚಾರವನ್ನು ಅಲಕ್ಷಿಸಿ ಹೋದನೆಂದು ನೀವು ಭಾವಿಸಬಹುದು. ಆದುದರಿಂದ ಕುಳಿತುಕೊಳ್ಳುತ್ತೇನೆ.... ಆದರೆ ಕುಳಿತ ಮೇಲೆ ಹೇಳುವುದೂ ಇಷ್ಟೆ—ನೀವು ನಾಳಿದ್ದು ಸೋಮವಾರ ಒಂದು ಗಳಿಗೆ ಸಾವಕಾಶಮಾಡಿ ಬರಲೇ ಬೇಕು....''

"ನಮ್ಮಂಥವರು ಬಂದರೇನು? ಬಾರದಿದ್ದರೇನು? ಹಣೆಯ ಬೊಟ್ಟು ಒರಸಿಹೋದ ಮೇಲೆ ನಮ್ಮಂಥವರು ಎಲ್ಲಿದ್ದು ಮಾಡುವುದೇನು?'' ಎಂದು ಗದ್ಗದ ಕಂಠಿಯಾಗಿ "ನಿಲ್ಲು ನಾಗು....ಹೋಗಬೇಡ....ಅಪರೂಪವಾಗಿ ಬಂದಾತ ಒಂದು ಲೋಟ ಪಾನಕವನ್ನಾದರೂ ಸ್ವೀಕರಿಸದೆ ಹೋಗಬಾರದು....ಬಂದೆ....ಬಂದೆ....ನಿಲ್ಲು" ಎನ್ನುತ್ತ ಒಳಗೆ ನಡೆದಳು.

ಲಕ್ಷಣವು ಶುಭಕರವಾಗಿ ತೋರಿತು ನಾಗೇಶನಿಗೆ....ಈ ಮುದುಕಿಯನ್ನು ಮಂಕಾಡಿಸುವುದು ಏತರ ಮಾತು? ಎಂದು ತೋರಿತು.

ಶಾಂತಮ್ಮ ಪಾನಕ ತಂದುಕೊಟ್ಟಳು. ನಾಗೇಶ ಅತ್ತಿತ್ತ ನೋಡದೆ ಕುಡಿದ. ಸೋಮವಾರ ಎಂಟು ಗಂಟೆಯ ಸಮಯಕ್ಕೆ ನನ್ನ ಕಾರು ಬರುವುದು. ಅದನ್ನು ಏರಿ ಬಂದುಬಿಡು ಚಿಕ್ಕಮ್ಮ....ಎಂದ.

ಶಾಂತಮ್ಮ: ಕಾರೇ? ನನ್ನ ಕಾಲುಗಳಿಗೇನಾಗಿದೆ? ಪಕ್ಷವಾತ ಹಿಡಿದಿದೆಯೇ? ದೊಡ್ಡವರಿಗಾಯಿತು ಕಾರು. ಹೊತ್ತು ಮೂಡಿ ದಾರಿ ಬೆಳಕಾಗುವಾಗ ಹೊರಟರೆ ಕಾಫಿ ಕುಡಿಯುವ ಹೊತ್ತಿಗೆ ನಡೆದು ಅಲ್ಲಿಗೆ ತಲಪಲಾರೆನೆ? ಬೇಕಾದರೆ, ಕೆಲಸದ ಹೆಣ್ಣು ನಾಗಮ್ಮನನ್ನು ಕರೆದು ಕೊಳ್ಳುತ್ತೇನೆ....ಆದರೆ ಈ ಮನೆಯಿಂದ ಬರುವವರು ನಾನೊಬ್ಬಳೇ?

ನಾಗೇಶ: ಅಲ್ಲ; ಪ್ರಭಾಕರನಿಗೆ ಹೇಳಿದ್ದೇನೆ. ಬರುವೆನೆಂದು ಮಾತು ಕೊಟ್ಟಿದ್ದಾನೆ. ಕಾಮಾಕ್ಷಿಯನ್ನು ಆಮಂತ್ರಿಸಿದ್ದೇನೆ. ಅವಳ ಚಿತ್ತ ಹೇಗಿದೆಯೊ ತಿಳಿಯದು....

ಸಾಂತಮ್ಮ: ಶ್ಯಾಮಣ್ಣ............

ನಾಗೇಶ: ಶ್ಯಾಮಣ್ಣನೊ....ಹೌದು; ಕಟ್ಟುಕಟ್ಟಳೆ ಹೇಳಿಕೆಮಾಡಿದ್ದೇನೆ....

ಸಾಂತಮ್ಮ: ಅದೇನು ಕಟ್ಟುಕಟ್ಟಳೆ....

ನಾಗೇಶ: ತಿಳಿಯುವುದಿಲ್ಲವೇ ಸಾಂತಮ್ಮ....ಅವನು ನನಗೇನಾಗಬೇಕು? ಅಣ್ಣನೆ, ತಮ್ಮನೆ, ಭಾವನೆ, ಮಾವನೆ? ನಿಮ್ಮ ಮನೆಯಲ್ಲಿ ಸೇರಿಕೊಂಡಿದ್ದಾನೆ ಎಂಬ ಕಾರಣದಿಂದ ಅವನಿಗೂ ಆಮಂತ್ರಣಮಾಡಿದ್ದೇನೆ....

ಸಾಂತಮ್ಮ: ಸಾಧು ಮನುಷ್ಯ....ಚಿನ್ನತೂಕದವ....

ನಾಗೇಶ: ನೀನು ಹೇಳುವುದೆಲ್ಲ ನಿಜ. ಆದರೆ ಇಂತಹ ಸಂದರ್ಭಗಳಲ್ಲಿ ಅವರು ಇವರು ಎಂದು ನೂರಾರು ಬಂಧುಗಳು ಸೇರಿರುತ್ತಾರೆ. ಅವರ ಮಧ್ಯದಲ್ಲಿ "ಇವನಾರು?" ಎಂಬ ಪ್ರಶ್ನೆ ಬಂದರೆ ಏನುತ್ತರ ಕೊಡಬೇಕು? ನೀನೇ ಹೇಳು.

ಸಾಂತಮ್ಮ: ಹಾಗೆಂದರೇನು ನಾಗು....ಒಬ್ಬನಿಗೆ ಒಂದು ಹಿಡಿ ಅನ್ನ ಕೊಟ್ಟರೆ ನಿನಗೆ ಭಾರೀ ನಷ್ಟವಾಗುವುದೇ?

ನಾಗೇಶ: ನಷ್ಟದ ಮಾತಲ್ಲ ಚಿಕ್ಕಮ್ಮ. ಕಷ್ಟದ ಮಾತು. ಇವನು ಶ್ಯಾಮಣ್ಣ—ಎಂದರೆ ಯಾವ ಶ್ಯಾಮಣ್ಣ ಎಂಬ ಪ್ರಶ್ನೆಬರುತ್ತದೆ. ಯಾವ ಶ್ಯಾಮಣ್ಣ ಎಂದರೆ, ಪ್ರಭಾಕರನ ಶ್ಯಾಮಣ್ಣ....ಎಂದು ಹೇಳಬೇಕೆ? ಕಾಮಾಕ್ಷಿಯ ಶ್ಯಾಮಣ್ಣ ಎನ್ನಬೇಕೇ? ನೀನೇ ಉತ್ತರಕೊಡು....

ಹೀಗೆಂದು ಹೇಳಿ ಒಂದು ನಿಮಿಷತಡೆದು ಸಾಂತಮ್ಮನ ಮುಖದಲ್ಲಿ ಯಾವ ವಿಕಾರವಾಗುತ್ತದೋ ಎಂದು ನಿರೀಕ್ಷಿಸಿಕೊಂಡಿದ್ದ. ಸಾಂತಮ್ಮನ ಮುಖ ಕೆಂಪೇರಿತು. ಕಣ್ಣಿನಲ್ಲಿ ನೀರು ತುಳುಕಿತ್ತು. ಮುಖಕ್ಕೆ

ಕೈಮುಚ್ಚಿಕೊಂಡು “ಅಯ್ಯೋ ನಾಗು ! ತಲೆಗೆ ದೊಣ್ಣೆಯಲ್ಲಿ ಹೊಡೆದಂತೆ ಮಾತನಾಡಿದೆಯಲ್ಲ!” ಎಂದು ಅಳುವುದಕ್ಕೆ ತೊಡಗಿದಳು.

ನಾಗೇಶ: ನಾನೇನೂ ಕೆಟ್ಟ ಮಾತನ್ನು ಹೇಳಿಲ್ಲವಮ್ಮ; ಕೆಟ್ಟ ಭಾವನೆಯೂ ಇಲ್ಲ. ಹತ್ತು ಜನ ಸಂಭಾವಿತರ ಮುಂದೆ ಕುಳಿತಿರುವಾಗ ಶ್ಯಾಮಣ್ಣನ ಪರಿಚಯಮಾಡಿಕೊಡುವುದು ಕಷ್ಟವಾದೀತು ಎಂದು ತಿಳಿಸಿದೆನಷ್ಟೆ. ಈತ ಜಮೀನ್ದಾರ ಸುಬ್ಬಯ್ಯನವರ ಅಡಿಗೆಮನೆಯಲ್ಲಿ ಸೌಟು ತಿರುಗಿಸುತ್ತಿದ್ದುದನ್ನು ಕಂಡವರಿದ್ದಾರೆ. ಸಾವುಕಾರ ಸಾಂತಯ್ಯನವರ ಅಂಗಡಿಯಲ್ಲಿ ಹಿಂಡಿ ತೂಗಿಕೊಡುತ್ತಿದ್ದುದನ್ನು ಕಂಡವರಿದ್ದಾರೆ. ಬಪ್ಪನಾಡಿನ ಮೇಳದಲ್ಲಿ ಹಾಸ್ಯಗಾರನಾಗಿದ್ದುದನ್ನು ನೋಡಿದವರಿದ್ದಾರೆ. ಈಗ ಇವನು ಥಕ್ಕನೆ ದೊಡ್ಡ ಮನುಷ್ಯನಾಗಿ ಹತ್ತು ಜನ ಸಂಭಾವಿತರ ಸಭೆಯಲ್ಲಿ ಕಾಲಮೇಲೆ ಕಾಲುಹಾಕಿ ಮೀಸೆಯ ಮೇಲೆ ಕೈತಿರುಗಿಸುತ್ತಾ ಕುಳಿತದ್ದನ್ನು ಕಂಡರೆ, ಯಾರು ಏನೆಂದಾರು? ವಿಚಾರಿಸಿಕೊಳ್ಳಬೇಡವೆ?

ಸಾಂತಮ್ಮ: ಹಾಗಾದರೇನು, ಅವನು ಅಂತಹ ಮನುಷ್ಯನೆ?

ನಾಗೇಶ: ‘ಅಂತಹ’ ಎಂದರೇನು? ಬೇರೆ ಯಾವ ವಿಷಯದಲ್ಲಿಯೂ ಕುಂದಿಲ್ಲ. ಅಂತೂ ನನಗರಿಯದು. ಮಾವ ಕೇಶವಯ್ಯನವರು ಬರಬಹುದು; ಅತ್ತೆ ಸುಶೀಲಮ್ಮನವರೂ ಬರಬಹುದು. ಇವರೆಲ್ಲ ಇರುವಂತೆ ಈ ಶ್ಯಾಮಣ್ಣ ನಿಮ್ಮ ಅಳಿಯನ ಮಗಳಿನ ಬಂಧು ಎಂದು ಹೇಳುವುದಕ್ಕೆ ಸ್ವಲ್ಪ ಸಂಕೋಚವಾಗದೆ ಚಿಕ್ಕಮ್ಮ ನನ್ನಂಥವರಿಗೆ?

ಸಾಂತಮ್ಮ ಸ್ವಲ್ಪಕಾಲ ಮೌನವಾಗಿದ್ದಳು. ಮತ್ತೆ “ಹೌದು ಮಗು.... ನೀನು ಹೇಳಿದ ಮಾತು ಸತ್ಯ.... ನಮ್ಮ ನಡತೆ ಹೇಗಿದೆಯೆಂದು ಯಾರು ನೋಡುತ್ತಾರೆ? ಅದು ಯಾರಿಗೆ ಬೇಕು.... ಜನರ ನಾಲಗೆಯ ಮೇಲಿರುವುದು ಕುಚೇಷ್ಟೆಯಲ್ಲವೇ ?.... ಹೌದು.... ಹೌದು.... ನಿನ್ನ ಮಾತು ಖರೆ.... ಅವನನ್ನು ಈ ಮನೆಯೊಳಗೆ ಕಾಲಿಡಲು ಬಿಡಬಾರದಿತ್ತು.... ಮನುಷ್ಯನೇನೋ ಅಪರಂಜಿ.... ಹೇಗಿದ್ದರೂ ಅವನು ಪ್ರಭಾಕರನಿಗೆ ಏನಾಗಬೇಕು? ಕಾಮಾಕ್ಷಿಗೆ ಏನಾಗಬೇಕು? ತಪ್ಪಾಯಿತು; ತಪ್ಪಾಯಿತು.

ನನ್ನ ಬುದ್ಧಿಯೂ ಕುರುಡಾಗಿತ್ತು....ಎದೆಗೆ ಕೈಹಾಕಿ ತೆಗೆದು ನೋಡಲಾಗು ವುದೇ....ನಾಗೇಶ....ಎಚ್ಚರಕೊಡಬೇಕೆಂದು ನಿನಗಾದರೂ ದೇವರು ಬುದ್ಧಿ ಕೊಟ್ಟನಲ್ಲ....ಏನಾದರೊಂದು ಕಾರಣದಿಂದ ಅವನನ್ನು ಹೊರಗೆಹಾಕುವ ಯತ್ನಮಾಡುತ್ತೇನೆ....” ಎಂದಳು.

ಅಂದು—ಕೆಲವೇ ತಿಂಗಳ ಹಿಂದೆ ಸೂರ್ಯದೇವರಂತೆ ತೋರು ತ್ತಿದ್ದ ರಾಜಾಮನುಷ್ಯನು ಇಂದು ಸಂದೇಹಪಾತ್ರನಾಗಿದ್ದ. ಹೆಂಗುಸರು ಹೋದ ದೆಸೆಯನ್ನು ಕಣ್ತೆಗೆಯದೆ ನೋಡುತ್ತಿದ್ದ ನಾಗೇಶ ನಾಗುವನ್ನು ಒಪ್ಪಿಸಿ ಸಮೀಪವಾದ ಸಾಂತಮ್ಮನಿಗೆ. ಇನ್ನು ಹೆಚ್ಚು ಮಾತಾಡುವುದು ಉಚಿತವಲ್ಲ. ಸಂದೇಹವನ್ನು ಸಾಂತಮ್ಮನನ್ನೂ ಹಾಗೆಯೇ ಬಿಟ್ಟು ಬಿಡೋಣ. ಒಂದು ದಿನ ಆ ಸಂದೇಹವು ಸಾಂತಮ್ಮನನ್ನೇ ನುಂಗಿಬಿಡು ವುದು....ಎಂದು ನಿರ್ಧರಿಸಿಕೊಂಡು ನಾಗೇಶ ಹೋಗುವುದಕ್ಕೆ ಸಿದ್ಧನಾಗಿ ಎದ್ದುನಿಂತ. ನಿಂತಲ್ಲಿಂದಲೇ ಸಾಂತಮ್ಮನ ಪಾದಕ್ಕೆ ಅಡ್ಡಬಿದ್ದು— ತಾಯಿ—ಈ ಮಾತು ನಮ್ಮಿಬ್ಬರ ಕಿವಿಯಲ್ಲಿಯೇ ಸುಳಿದಾಡುತ್ತಿರಬೇಕು. ನನಗೂ ಕೇಶವಯ್ಯನವರಿಗೂ ಇರುವ ಸಂಬಂಧವೇನೆಂದು ನಿಮಗೆ ಗೊತ್ತಿದೆ; ಅಪರಾಧ ಹೇಳಿದೇನೆಂದು ಭಾವಿಸಬೇಡಿ. ನಾನೇನೂ ಹೇಳ ಲಿಲ್ಲ; ಜನರ ಆಡಿಕೆಯ ಮಾತಿನಿಂದ ಅರ್ಥಮಾಡಿಕೊಂಡೆನಷ್ಟೆ— ಎಂದು ಬೇಡಿಕೊಂಡ.

ಇಂತಹ ವಿಷಯಗಳಲ್ಲಿ ತನ್ನನ್ನು ನಂಬಿದ ನಾಗೇಶ ಎಂಥಾ ಒಳ್ಳೆಯ ಜನವಾಗಿರಬೇಕು? ಎಂದು ಸಾಂತಮ್ಮ ಮನಸ್ಸಿನಲ್ಲಿಯೇ ಯೋಚಿಸಿ ಕೊಂಡಳು.

“ಬರುತ್ತೇನೆ ಮಗು....ಒಂದು ಗಳಿಗೆಗಾದರೂ ಬರುತ್ತೇನೆ.... ನಮ್ಮಂಥವರನ್ನು ಬಾ ಎಂದು ಕರೆಯುವ ಬಂಧುಗಳು ಯಾರಿದ್ದಾರೆ? ನಿನಗಾದರೂ ದೇವರು ಅಂತಹ ಬುದ್ಧಿಯನ್ನು ಕರುಣಿಸಿದನಲ್ಲಾ!” ಎಂದು ಸಾಂತಮ್ಮ ಕಣ್ಣುಜ್ಜಿ ಒಳಗೆ ಹೋದಳು. ನಾಗೇಶ ಹೊರನಡೆದ. ✓

೧೨

ನಾಗೇಶನ ದೌಲತ್ತಿಗೆ ತಕ್ಕಂತೆ ಅನ್ನಪ್ರಾಶನ ಸಮಾರಂಭವು ಯಥೋಚಿತವಾದ ಆಡಂಬರಗಳಿಂದ ನಡೆದು ಹೋಯಿತು. ಬಂದ ಅತಿಥಿಗಳಲ್ಲಿ ಗಣನೀಯರೆಂದರೆ ಕೇಶವಯ್ಯನವರ ಹೆಂಡತಿ ಸುಶೀಲಮ್ಮ. ನಾಲ್ಕು ದಿನ ಬಿಡು ಮಾಡಿಕೊಂಡೇ ಅಣ್ಣನ ಮಗನ ಪ್ರಥಮ ಪುತ್ರನ ಒಸಗೆಯಲ್ಲಿ ಭಾಗ ವಹಿಸುವುದಕ್ಕೆ ಸಿದ್ಧಳಾಗಿ ಬಂದಿದ್ದಳು. ಕೇಶವಯ್ಯನವರಿಗೆ ಏನೋ ಜರೂರಿನ ಕಾರ್ಯಗಳಿದ್ದುವು. ಬರಲಾಗುವುದಿಲ್ಲ. ತಿಳಿಸಿಬಿಡಿ ನಾಗೇಶನಿಗೆ. ಅನ್ಯಥ ಭಾವಿಸದಿರಲಿ—ಎಂದು ಕ್ಷಮಾಯಾಚನೆಯೊಡನೆ ಸುಶೀಲಮ್ಮನವರನ್ನು ಅವರು ಕಳುಹಿಸಿಕೊಟ್ಟಿದ್ದರು. ಮಂಗಳೂರಿನ ಬಂಧುಗಳಲ್ಲಿ ಪ್ರಭಾಕರನೊಬ್ಬ ತಕ್ಕ ಸಮಯಕ್ಕೆ ಹಾಜರಾಗಿದ್ದ. ಸಾಂತಮ್ಮ ಹೋಗಿದ್ದಳು. ನಗರದ ಆಪ್ತರಲ್ಲಿ ಕೆಲವರು ಬಂದಿದ್ದರು. ಹತ್ತಿರದ ದೂರದ ಸಂಬಂಧಿಕರಲ್ಲಿ ನೂರಾರು ಮಂದಿ ನೆರೆದಿದ್ದರು. ನಾಗೇಶನಿಗೆ ಮಾತ್ರ ಇಡೀದಿನ ಮನೆಯಲ್ಲಿ ನಿಲ್ಲುವಷ್ಟು ಅವಕಾಶವಿರಲಿಲ್ಲ. ಅನ್ನಪ್ರಾಶನದ ಮುಹೂರ್ತವನ್ನೆ ಹುಡುಕಿ ರೋಗಿಗಳೂ ರೋಗಗಳೂ ಒಂದಾಗಿ ಬಂದು ಒತ್ತಾಯಿಸಿ ನಾಗೇಶನಿಗೆ ಒಂದೆರಡು ಗಳಿಗೆಯಷ್ಟು ಸಮಯಾವಕಾಶವನ್ನು ಕೊಟ್ಟರಲಿಲ್ಲ. ಮಂಗಲೋತ್ಸವದಲ್ಲಿ ಪ್ರಕೃತಿಯೂ ಮತ್ಸರಿಸುತ್ತಿತ್ತು. ಕಾಮಾಕ್ಷಿ ಹೋಗಿರಲಿಲ್ಲ. ಅವಳದು ಹತ್ತು ಜನರ ಕಣ್ಣಿಗೆ ಕಾಣಿಸುವ ಅಭಾವ. "ಕಾಮಿ ಏಕೆ ಬರಲಿಲ್ಲ?" ಎಂದು ಸುಶೀಲಮ್ಮ ದರ್ಪದಿಂದ ಪ್ರಭಾಕರನಲ್ಲಿ ಕೇಳಿದ್ದಳು. "ನಾನು ಬರಬೇಕೆಂದು ನಿಶ್ಚಯ ಮಾಡಿದ್ದೆ; ಕಚೇರಿಯಲ್ಲಿ ಯಾರಾದರೊಬ್ಬರು ಇರಬೇಡವೇ? ಕಷ್ಟಕಾಲವಿದು. ನಾವು ಕಣ್ಣುಬಿಟ್ಟು ನೋಡುತ್ತಿರುವಂತೆಯೇ ಮೋಸಗಳು ಆಗಿ ಹೋಗುತ್ತವೆ" ಎಂದು ಪ್ರಭಾಕರ ಉತ್ತರಕೊಟ್ಟ.

ಯಾವ ಅವಶ್ಯಕಾರ್ಯವಿದ್ದರೂ ಒಂದು ನಿಮಿಷ ಬಿಡುಮಾಡಿ ಬಂದು ತಲೆ ತೋರಿಸಿ ಹೋಗಬಾರದಿತ್ತೆ? ಏನಂತೆ ಹೆಂಗಸರಿಗೆ ಅಷ್ಟು ಕೆಲಸ? ಇಡೀ ದಿನ ಕಚೇರಿ—ಗುಮಾಸ್ತಿಕೆ—ಹರಟೆ—ಚಕ್ಕರದ...

ಬಂಧುಗಳ ಮುಖ ನೋಡ ಬೇಕೆಂದಿಲ್ಲ....ಏನು ಸೊಕ್ಕು ಈಗಿನ ಹುಡುಗಿ ಯರಿಗೆ? ಎಂದು ಸುಶೀಲಮ್ಮ ಪ್ರಬಲವಾಗಿ ಆಕ್ಷೇಪಿಸಿದಳು.

ಕಾಮಾಕ್ಷಿ ಇಂದಿನ ಹುಡಿಗಿ ಎನಿಸಿಕೊಂಡುದು ಇಂದೇ ಅಲ್ಲ. ಕೇಶವಯ್ಯನವರು ಚಿಕ್ಕ ಕೂಸಾಗಿದ್ದ ಕಾಮಾಕ್ಷಿಯನ್ನು ಮಂಗಳೂರಲ್ಲಿರಿಸಿ ಬಿ. ಎ. ವರೆಗೆ ಓದಿಸಿದ್ದರು. ತನ್ನ ಸಂಸಾರದಿಂದ ಬೇರಾಗಿ, ಆಧುನಿಕ ನಾಗರಿಕ ಜೀವನ ಬೆಡಗುಗಾರಿಕೆಗೆ ಒಲಿದು ಬೆಳೆದ ಹುಡುಗಿ, ಹಳ್ಳಿಯ ಸಂಸ್ಕಾರಗಳಿಲ್ಲದ ಅತ್ಯಾಧುನಿಕಳಾಗಿಯೇ ಪ್ರಾಯ ಭರಿತಳಾಗಿದ್ದಳು. ಸುಶೀಲಮ್ಮನ ಅಣ್ಣನ ಮಗನನ್ನು—ಎಂದರೆ ನಾಗೇಶನನ್ನು—ವಿವಾಹ ವಾಗುವ ಪ್ರಶ್ನೆ ಬಂದು, ಕಾಮಾಕ್ಷಿ ನಕಾರದ ಉತ್ತರ ಕೊಟ್ಟಂದಿನಿಂದ ಆಕೆ ಸುಶೀಲಮ್ಮನ ದೃಷ್ಟಿಯಲ್ಲಿ ಪೈಗುಳ್ಳಿ; ಮೋಜುಗಾರ್ತಿ; ಗಂಡು ಬೀರಿ; ಸೀರೆಯನ್ನುಟ್ಟ ಗಂಡು—ಅಥವಾ ಗಡ್ಡ ಮೀಸೆ ಬರಬೇಕಾಗಿದ್ದ ಹೆಣ್ಣು ತನ್ನ ಅಧಿಕಾರಕ್ಕೆ ಅಡ್ಡಿಬಂದಳು; ತಂದೆಯ ಬೋಧನೆಯನ್ನು ಮೀರಿದಳು. ಯಾರೋ ಒಬ್ಬ ಬಿಕನಾಶಿಯನ್ನು ಮದುವೆಯಾದಳು. ಹೊಟ್ಟೆಗಾಗಿ ದುಡಿದು ಬೆವರಿಳಿಸಿಕೊಳ್ಳುತ್ತಾಳೆ. ಹೆಂಗಸೆನಿಸುವವಳು ಮನೆಯ ಗರ್ಭಗುಡಿಯೊಳಗೆ ಭಾಗ್ಯಲಕ್ಷ್ಮಿಯಾಗಿ ಸುಳಿದಾಡುತ್ತಿರ ಬೇಕಲ್ಲದೆ ಯಾವ ಕಾರಣದಿಂದಲೇ ಆಗಲಿ, ಹೊಸ್ತಿಲಾಚೆಗೆ ಕಾಲಿಡ ಬಾರದು. ಕಾಮಾಕ್ಷಿ ಬರಹ ಗಾರ್ತಿಯಂತೆ; ಮಾತುಗಾರ್ತಿಯಂತೆ: ಮುದ್ರಣಾಲಯದ ಆಡಳಿತೆ ನೋಡುವವಳಂತೆ; ಸಂಪಾದಕಿಯಂತೆ. ಸಂಪಾದಿಸುವುದೇನನ್ನು? ಅಪಕೀರ್ತಿಯನ್ನು!

ತನ್ನ ಮನೆಗೆ, ತನ್ನ ಗಂಡನ ಹೆಸರಿಗೆ, ಆ ಮೂಲಕ ತನಗೆ, ತನ್ನ ಮಕ್ಕಳಿಗೆ, ಬಂಧುಬಳಗದವರಿಗೆ, ಸತ್ತ ಏಳು ತಲೆಯವರಿಗೆ—ಮುಂದೆ ಹುಟ್ಟ ಬಹುದಾದ ಏಳು ಸಂತತಿಗೆ—ಸಹಿಸಲಾರದ ಕೆಟ್ಟ ಹೆಸರನ್ನು ತರು ವವಳನ್ನೊಮ್ಮೆ ಕಾಣಬೇಕು. ಒಮ್ಮೆ ಚೆನ್ನಾಗಿ ಮೈಯನ್ನು ಜಾರಿಸಬೇಕು ಎಂಬ ಉತ್ಸಾಹದಿಂದಲೇ ಸುಶೀಲಮ್ಮ ಅನ್ನಪ್ರಾಶನಕ್ಕೆ ಬಂದಿದ್ದಳು. ಅಳಿಯನ ಮನೆಯಲ್ಲಿ ನಾಲ್ಕು ದಿನ ನಿಂತು, ಮಗಳ ಮನೆಗೆ ದಾಳಿಯಿಟ್ಟು

ಶತ್ರುಗಳನ್ನು ಓಡಿಸಿ ಬಿಡಬೇಕೆಂಬುದು ಸಂಕಲ್ಪವಾದುದರಿಂದ, ಈ ಯುದ್ಧ ದಲ್ಲಿ ಪ್ರಥಮಾಭಿಯೋಗಕ್ಕೆ ಅವಕಾಶ ಸಿಕ್ಕಿದಾಗ ಸುಶೀಲಮ್ಮ ಬಿಡಲಿಲ್ಲ.

"ಅಷ್ಟೇನು ಜರೂರು....ನಾಲ್ಕು ಜನಬಂಧುಗಳು ಬಂದಿದ್ದಾರೆ. ಒಂದು ನಿಮಿಷ ಬಂದು ಮುಖತೋರಿಸಿ ನಾಲ್ಕು ಸವಿಮಾತುಗಳನ್ನಾಡಿ ಹೋಗಬೇಕಾದವಳು ಬಾರದಿರುವುದಕ್ಕೇನು ಅಷ್ಟು ಕೆಲಸದ ಒತ್ತಾಯ? ಈಗಿನ ಕಾಲದ ಹುಡುಗಿಯರ ಸುಟ್ಟ ಮೋರೆಯಲ್ಲಿ ಹೆಣ್ಣುತನದ ಚಿಹ್ನೆಯೇ ಇಲ್ಲ"—ಎಂದು ಸುಶೀಲಮ್ಮ ತನ್ನ ಟೀಕೆಗಳನ್ನು ಕೊಟ್ಟಳು. ಪ್ರಭಾಕರ ನಿಗೆ ಈ ಮಾತು ಹೇಗೆ ರುಚಿಸೀತು? "ಪ್ರತಿಯೊಬ್ಬರಿಗೂ ಸ್ವಾತಂತ್ರ್ಯ ಇಲ್ಲವೇ? ಅವಳು ಬರುವುದಿಲ್ಲ ಎಂದಳು. ನಾನೇಕೆ ನಿರ್ಬಂಧಿಸಬೇಕು? ಎಂದು ಪ್ರಭಾಕರನ ಪ್ರಶ್ನೆ ಅವಳ ನಾಲಗೆಗೆ ಮತ್ತೂ ಶಕ್ತಿಕೊಟ್ಟಿತು. "ಸ್ವಾತಂತ್ರ್ಯ! ಸ್ವಾತಂತ್ರ್ಯ! ಸ್ವಾತಂತ್ರ್ಯವೆಂದು ಹೆಂಗಸರು ಬೀದಿ ಗಳಿಯುವುದೇ?" ಸುಶೀಲಮ್ಮನದು ನಾಲಗೆಯಲ್ಲ; ಚೇಳಿನಕೊಂಡಿ!

ಪ್ರಭಾಕರ ಸುಶೀಲಮ್ಮನ ಬಾಯಿಯಿಂದ ಹೇಗೊ ತಪ್ಪಿಸಿಕೊಂಡು, ಹೇಳಬೇಕಾದವರಲ್ಲಿ ಹೇಳಿ, ಸುಶೀಲೆಗೆ ತಮ್ಮ ಮನೆಗೆ ಬರಬೇಕೆಂಬ ಆಮಂತ್ರಣ ಕೊಟ್ಟು ಸಾಯಂಕಾಲ ಮೂರು ಘಂಟೆಯ ಸಮಯಕ್ಕೆ ಹೊರಟ. ಸುಶೀಲಮ್ಮನ ಬಿರುಮಾತುಗಳನ್ನು ಕಾಮಾಕ್ಷಿಗೆ ತಿಳಿಸಲೂ ಇಲ್ಲ; ಅವಳ ಹೆಟ್ಟಿನ ಸಮಾಚಾರವನ್ನು ಕಾಮಾಕ್ಷಿ ಕೇಳಲೂ ಇಲ್ಲ.

ನಾಲ್ಕು ಘಂಟೆಗೆ ಲಂಗರು ಕೀಳಬೇಕೆಂದು ಸಾಂತಮ್ಮ ಭಾವಿಸಿದಳು ಸುಶೀಲಮ್ಮ ಬಿಡಲಿಲ್ಲ. ನೀವು ಹೋಗದಿದ್ದರೇನು? ಮನೆ ನೆಲಕ್ಕುರುಳು ವುದೇ? ಕೈಯಡಿಗೆ ಮಾಡಿ ತಿನ್ನುತ್ತಾರೆ. ನಾಲ್ಕು ದಿನ ಕಾಮಾಕ್ಷಿಯ ಬೊಜ್ಜು ಕರಗುತ್ತದೆ. ಆ ಅಡಿಗೆ ಭಟ್ಟನು ಇದ್ದಾನಲ್ಲವೆ? ಎಂದು ಸುಶೀ ಲಮ್ಮ ಜರ್ಬಿನಿಂದ ಆಡಿದಳು. ಸಾಂತಮ್ಮನ ಹೊರಟಕಾಲು ಹಿಂದೆಳೆಯಿತು.

ನಾಲ್ಕು ದಿನ ಸಾಂತಮ್ಮ ಅಲ್ಲಿಯೇ ಇದ್ದಳು. ಈ ಅವಧಿಯಲ್ಲಿ ಸುಶೀಲಮ್ಮ ಅವಳ ಮನಸ್ಸನ್ನು ಸಂಪೂರ್ಣವಾಗಿ ಪಳಗಿಸಿಬಿಟ್ಟಳು. "ಸಾಂತಮ್ಮ....ಕುಲಶೀಲ....ಆಚಾರ....ನಡೆವಳಿಯನ್ನೆಲ್ಲ ತಿಳಿದ ನಿಮ್ಮಂಥ ವರು ಇದನ್ನು ನೋಡಿ ಸಹಿಸುವುದೇ ಸಾಂತಮ್ಮ?" ಎಂದು ಪ್ರಶ್ನಿಸಿದಳು.

ತನಗೆ ಕೊಟ್ಟ ಹೊಗಳಿಕೆ ಸಹಜವಾದುದೆಂದು ಸಾಂತಮ್ಮನಿಗೆ ತೋರಿದರೂ "ಇದನ್ನು ನೋಡಿ ಸಹಿಸುವುದು"—ಎಂಬುದಕ್ಕೆ ಸಂಪೂರ್ಣವಾಗಿ ಅರ್ಥವಾಗಲಿಲ್ಲ.

"ಬೆಕ್ಕು ಕಣ್ಣುಮುಚ್ಚಿ ಹಾಲು ಕುಡಿದರೆ, ಇತರರು ಅದನ್ನು ನೋಡುವುದಿಲ್ಲವೇ?" ಎಂದಳು ಸುಶೀಲಮ್ಮ.

"ಏನು ಮಗು! ಆತ ಶುದ್ಧಪುತ್ತಳಿ ಚಿನ್ನದ ಹಾಗಿದ್ದಾನೆ. ಮನೆಯಲ್ಲಿರುವಷ್ಟು ಕಾಲ ಒಂದು ನಿಮಿಷ ಸುಮ್ಮನೆ ಕುಳಿತಿರುವುದುಂಟೇ? ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ತಮ್ಮ ತಾಯಂದಿರಿಗೆ ಅವನು ಮಾಡಿದ ಚಾಕರಿ ಮಾಡುವಹಾಗಿಲ್ಲ."

"ಅದೆಲ್ಲ ನಿಜ. ಕುಹುಕಿಗಳು ಸಜ್ಜನಿಕೆಯ ಸೋಗು ಹಾಕದಿದ್ದರೆ ಆಟ ಹೂಡುವುದಕ್ಕಾಗುವುದೇ?"

ಸಾಂತಮ್ಮನಿಗೆ ಇದು ಸತ್ಯ ಎಂದು ತೋರಿತು!

ಸುಶೀಲಮ್ಮ: ಆ ಪೋರಿಗೆ ಇಷ್ಟೆಲ್ಲ ಒದ್ದಾಟ ಏಕೆ ಬೇಕಿತ್ತು? ತಂದೆಯ ಮಾತನ್ನು ಕೇಳಿದ್ದರೆ; ಇಂದು ಮೋಟಾರ್‌ಕಾರಿನಲ್ಲಿ ಓಡಾಡುವ ಭಾಗ್ಯ ದೊರೆಯುತ್ತಿತ್ತು. ಅದನ್ನವಳು ಮೆಚ್ಚಿದಳೇ? ದುರ್ಬುದ್ಧಿ ಬಿಡಲಿಲ್ಲ. ಆಬಿಕಾರಿಯನ್ನು ಮದುವೆಯಾದಳು. ಬಣ್ಣ ಸ್ವಲ್ಪ ಬಿಳಿ, ಪ್ರಭಾಕರನಿಗೂ, ನಮ್ಮ ನಾಗಣ್ಣನಿಗೂ, ಮತ್ತೇನು ವ್ಯತ್ಯಾಸ? ಆ ಬಿಳಿ ಬಣ್ಣ ಹೊಟ್ಟೆಗೆ ಅನ್ನ ಕೊಡುವುದೇ? ಈಗ ಹೊಟ್ಟೆ ತುಂಬಿಸುವುದಕ್ಕಾಗಿ ದುಡಿಯಬೇಕಾಗಿ ಬಂದಿದೆ. ಅದೂ ಅವಶ್ಯವಲ್ಲ. ಸ್ತ್ರೀಯಾಗಿ ಹುಟ್ಟಿ ಸ್ತ್ರೀಯೆನ್ನಿಸಿಕೊಳ್ಳಬೇಕಾದರೆ ಇನ್ನು ಕಷ್ಟವಿಲ್ಲ. ಪ್ರಭಾಕರ ಬಿ. ಎ. ಕಲಿತಿದ್ದಾನೆ. ದಮ್ಮಯ್ಯ ಕೊಡಿರಿ....ಎಂದು ಯಾರ ಕಾಲಿಗಾದರೂ ಅಡ್ಡಬಿದ್ದರೆ ನೂರು ರೂಪಾಯಿಯ ಕೆಲಸ ಕೊಟ್ಟಾರು. ನಮ್ಮ ನಾಗೇಶನೂ ಕೊಟ್ಟಾನು. ಗಂಡ ಹೆಂಡತಿ ಇಬ್ಬರೂ ಸೇರಿ ಹೊಟ್ಟೆಗಾಗಿ ದುಡಿಯಬೇಕಾದುದಿಲ್ಲ. ಯಾರೋ ದಾರಿಹೋಕರನ್ನು ಕಟ್ಟಿಕೊಂಡು ಮಾನಮರ್ಯಾದೆಯನ್ನು ಸುಟ್ಟುಕೊಂಡು ತೇಗಬೇಕಾಗಿಲ್ಲ....

ಯಾವುದಕ್ಕೂ ಮನಸಿಲ್ಲ. ಮನಸಿಲ್ಲ....ವಿದ್ಯೆಯ ಸೊಕ್ಕು ತಲೆಗೇರಿದೆ. ಒಮ್ಮೆ ನೆತ್ತಿಗೆ ಚೆನ್ನಾಗಿ ಒದೆಯದಿದ್ದರೆ ಬುದ್ಧಿ ಬರುವ ಹಾಗಿಲ್ಲ."

ಸಾಂತಮ್ಮ: ಯಾವುದಕ್ಕೂ ಪುಣ್ಯಬೇಕು ಸುಶೀಲೆ....ಗಂಡುಹೆಣ್ಣು ಗಳನ್ನು ಹೆರುವ ಕೆಲಸ ಮನುಷ್ಯರದು. ಇಂತಹ ಗಂಡಿಗೆ ಇಂತಹ ಹೆಣ್ಣು ಎಂದು ಲೆಕ್ಕದಲ್ಲಿ ಬರೆದಿಡುವವನು ಆ ಬ್ರಹ್ಮನಲ್ಲವೆ? ಯಾರೇನು ಮಾಡ ಲಾಗುತ್ತದೆ....ನಾನು ಎದೆ ಬಿಚ್ಚಿ ಹೇಳುತ್ತೇನೆ ಸುಶೀಲಮ್ಮ....ಒಂದು ಕಾಲದಲ್ಲಿ ನಾನು ಕೂಡಾ ನಾಗೇಶ ಒಂದು ನಮೂನೆಯ ಜನ....ಎಂದೆಣಿ ಸಿದ್ದೆ....ಮೊನ್ನೆ ನೋಡು....ಹೇಳಿಕೆ ಹೇಳುವುದಕ್ಕೆ ಬಂದಾಗ ಕಾಲಿನ ಮೇಲೆ ಅಡ್ಡಬಿದ್ದ. ತನ್ನನ್ನು ಒಂಬತ್ತು ತಿಂಗಳು ಹೊಟ್ಟೆಯಲ್ಲಿ ಹೊತ್ತು ಹೆತ್ತು ಸಾಕಿ ಸಲಹಿದ ತಾಯಿಗೆ ತನ್ನ ಮಗ ಇಂತಹ ಭಕ್ತಿ ತೋರಿಸು ವುದುಂಟೆ ಸುಶೀಲಮ್ಮ....ನಿನ್ನ ಮುಖದ ಮುಂದೆ ಆಡುತ್ತೇನೆಂದು ಭಾವಿಸಬೇಡ....ನಾಗಣ್ಣನಂತಹ ಮಾನಸ್ಥರನ್ನು ನಾನು ಕಂಡಿಲ್ಲ."

ಸುಶೀಲಮ್ಮ ಗೆದ್ದಳು. ಸಾಂತಮ್ಮನಿಗೂ ಜ್ಞಾನೋದಯವಾಯಿತು.

ಯಾರ ಅಜ್ಞಾನದ ಕಾರಣದಿಂದಲೋ ಊರಮಾರಿಯನ್ನು ಮನೆಗೆ ಬರಿಸಿ ಕೊಂಡುದಾಯಿತು. ಇನ್ನದರ ಉಚ್ಚಾಟನೆಯಾಗದೆ ನಿರ್ವಾಹ ವಿಲ್ಲ. ನಿಜ ಸ್ಥಿತಿ ಹೇಗಿದ್ದರೇನು? ಜನರು ಕೆಟ್ಟ ಮಾತನ್ನು ಆಡುತ್ತಾರೆ. ಅವರ ಬಾಯಿಯನ್ನು ಕಟ್ಟಲಾಗುವುದೇ? ಒಂದು ವೇಳೆ ಅದು ಸಾಧ್ಯವಾ ದರೂ ಅನವಶ್ಯವಾದ ಅಪವಾದಕ್ಕೆ ಎಡೆಕೊಡಬೇಕೇಕೆ? ಮಂಗಳೂರಿನ ಬೀದಿಬೀದಿಗಳಲ್ಲಿಯೂ ಅಶನಭವನಗಳು ಲೆಕ್ಕವಿಲ್ಲದಷ್ಟಿವೆ. ಒಂದರಲ್ಲಿ ತಿನ್ನುತ್ತಾನೆ; ಕಚೇರಿಯಲ್ಲಿ ಬೀಳುತ್ತಾನೆ. ಮನೆಯೊಳಗೇಕೆ ಶ್ಯಾಮಣ್ಣನ ಕಾರಭಾರ? ಸಾಂತಮ್ಮನಿಗೆ ಇಂತಹ ಮಾತಿನಲ್ಲಿ ಸತ್ಯವಿದೆ ಎಂದು ತೋರಿತು. ಆತನನ್ನು ಮನೆಯೊಳಗೆ ಪ್ರವೇಶಗೊಳಿಸುವುದಕ್ಕೆ ಪ್ರಭಾಕರ ಕಾಮಾಕ್ಷಿಯರು ಎಷ್ಟು ಕಾರಣವೋ ತಾನೂ ಅಷ್ಟೇ ಕಾರಣವೆಂಬುದರ ಅರಿವುಂಟಾದಾಗ ತನ್ನೆರಡೂ ಕೈಗಳಿಂದ ತಲೆಗೆ ಹೊಡೆದುಕೊಂಡಳು. ಐವತ್ತೈದು ವರ್ಷಗಳ ವರೆಗೆ ಈ ಸಂಸಾರ ಸಮುದ್ರದಲ್ಲಿ ಈಜಾಡಿ ಮೈಗೆ

ಕೆಸರು ಹಚ್ಚಿಕೊಳ್ಳದವಳು ಇಂದು ಈ ಬಗೆಯ ಅಪವಾದಕ್ಕೆ ಸಹಾಯ ಮಾಡಿದೆನಲ್ಲ....ಎಂದಾಕೆಯ ಪಶ್ಚಾತ್ತಾಪ.

"ನೀವು ಮನಸ್ಸು ಮಾಡಿದರೆ ಎಲ್ಲ ಸಾಧ್ಯ!" ಎಂದಳು ಸುಶೀಲಮ್ಮ.

"ಮನಸ್ಸೋ....ಅದು ಅಡಿಗೆಯ ಸೌಟಿನ ತುದಿಯಲ್ಲಿದೆ; ಹಿಡಿ ಕುಂಟೆಯ ತುದಿಯಲ್ಲಿದೆ;" ಎಂದು ಸಾಂತಮ್ಮ ಹುಳಿ ನಗುವನ್ನು ಬೀರಿದಳು.

ಸುಶೀಲಮ್ಮನೂ ಸಾಂತಮ್ಮನೂ ಒಟ್ಟಾಗಿ ಪ್ರಭಾಕರನ ಮನೆಗೆ ದರ್ಶನಕೊಟ್ಟರು.

## ೧೧

ಚುನಾವಣೆಯ ಕಾಲ ಸಮೀಪಿಸಿದ್ದುದರಿಂದ ನಾಗೇಶ—ಭಾಮೆಯರ ಓಡಾಟ ಹೆಚ್ಚಾಗಿದ್ದಿತು. ಸುಶೀಲಮ್ಮ ಪ್ರಭಾಕರನ ಮನೆಯಲ್ಲಿ ನಾಲ್ಕು ದಿನ ಇರುತ್ತಾಳೆ—ಎಂಬ ಕಾರಣದಿಂದಲೋ ಅಥವಾ ಇತರ ಕಾರಣದಿಂದಲೋ, ಶ್ಯಾಮಣ್ಣನನ್ನು ಹೊರಗೆ ಓಡಾಡಿಸಬೇಕೆಂದು ನಾಗೇಶ ಭಾವಿಸಿದ್ದ. ತನ್ನ ಪ್ರಾಣವನ್ನುಳಿಸಿದಾತನ ಮಾತನ್ನು ಅಲ್ಲಗಳೆಯುವುದು ಶ್ಯಾಮುನಿಗೆ ಅಸಾಧ್ಯವಾಯಿತು. ಭಾಮೆಯ ಸಹವಾಸದಿಂದ ಶ್ಯಾಮಣ್ಣ ಅಚ್ಚುಸಾಮ್ಯವಾದಿಯಾಗಬಹುದು; ಹೀಗಾಗದಿದ್ದರೂ ಪ್ರಭಾಕರನ ಸಾಹಚರ್ಯದಿಂದ ದೂರಸಾಗಬಹುದು ಎಂದು ನಾಗೇಶ ಎಣಿಸಿದ್ದ. ಆದುದರಿಂದಲೇ ಶ್ಯಾಮಣ್ಣನ ವಕ್ತೃತ್ವವು ಅತ್ಯದ್ಭುತವೆಂದೂ, ಅವನು ಭಾಷಣಕೊಟ್ಟ ಕಡೆಯಲ್ಲಿ ಶತ್ರುಗಳೆಲ್ಲ ಮಿತ್ರರಾಗುತ್ತಾರೆಂದೂ ನಾಗೇಶನಿಗೆ ತಿಳಿದುಬಂತು. "ಪ್ರಭಾಕರರಾಯರೇ! ನಿಮ್ಮ ಮತ್ತು ನಿಮ್ಮ ಉಪಸಂಪಾದಕರ ಸಂಪರ್ಕಕ್ಕೆ ಸ್ವಲ್ಪ ಭಂಗತರಬೇಕೆಂದು ನಿರ್ಣಯಿಸಿದ್ದೇನೆ. ಚುನಾವಣೆಯಲ್ಲಿ ಗೆಲ್ಲುವುದಕ್ಕೆ ಮತ್ತೇನೂ ಬೇಡ; ಅವರ ನಾಲಗೆಯ ಬಲವಿದ್ದರೆ ಸಾಕು. ನಾಲ್ಕು ದಿನ ನನ್ನ ಜೊತೆಯಲ್ಲಿ ಬಿಡಬಹುದೇ? ವಿರಹವೇದನೆಯನ್ನು ಸಹಿಸಬಹುದೇ? ಎಂದು ನಾಗೇಶರಾಯರು ಕೇಳಿದಾಗ

"ಆಗದು" ಎನ್ನುವುದಕ್ಕೆ ಪ್ರಭಾಕರನ ನಾಲಿಗೆಬಾರದು. "ಒಲ್ಲೆನು" ಎನ್ನುವುದು ಶ್ಯಾಮನಿಗೂ ದುಷ್ಕರವಾಯಿತು. ಯಾರಾದರೇನು? ಎಲ್ಲಾದರೇನು? ನನ್ನ ಇಂದ್ರಿಯಶಕ್ತಿಗಳು ಸತ್ಕಾರ್ಯದಲ್ಲಿ ಪ್ರಯೋಗಹೊಂದಿದರೆ ಸಾಕು. ಫಲ ಯಾರಿಗಾದರೇನು? ಎಂದು ಶ್ಯಾಮಣ್ಣನೂ ಭಾವಿಸಿರಬೇಕು. ತಾನು ಕಸಬರಿಗೆಯಾಗಿಯೇ ಇರಬೇಕೆಂದಲ್ಲವೇ ಅವನ ಸಿದ್ಧಾಂತ?

ಸುಶೀಲಮ್ಮನಿಗೆ ತನ್ನ ಮಗಳ ಮನೆಯಲ್ಲಿ ಬೇಕಾದಷ್ಟು ಏಕಾಂತತೆಯೂ ದೊರೆಯಿತು. ಸಾಂತಮ್ಮ ಸ್ವಾಧೀನವಾದ ಮೇಲೆ ನಿರಂಕುಶ ಪ್ರಭುತ್ವವೂ ಸಿಕ್ಕಿತು. "ಮನೆ ನಿಮ್ಮದೆಂದೇ ಭಾವಿಸಿಕೊಳ್ಳಿ ಅತ್ತೆ! ನಮಗೆ ನಿಮಿಷ ಬಿಡುವಿಲ್ಲ. ಅಲಕ್ಷ್ಯವಾದದೇವೆಂದು ಭಾವಿಸಬೇಡಿ" ಎಂದು ಪ್ರಭಾಕರ ಉಪಚಾರವಾಡಿದ. ಕಾಮಾಕ್ಷಿ ಹತ್ತಕ್ಕೆ ಹತ್ತು ಎಂಬಂತಿದ್ದಳು. ತನ್ನ ನಡೆನುಡಿಗಳಿಂದ ತನ್ನ ಚಿಕ್ಕಮ್ಮನಿಗೆ ಯಾವ ಬಗೆಯ ವೇದನೆಯನ್ನೂ ಮಾಡಿರಲಿಲ್ಲ. ಅದೇ ವೇಳೆಯಲ್ಲಿ "ತನ್ನ ವಳೀಕೆ" ಎನ್ನುವಷ್ಟು ಸಾಮೀಪ್ಯವನ್ನೂ ಬರಿಸಿಕೊಂಡಿರಲಿಲ್ಲ.

ಒಂದು ಸಂಜೆ ಪ್ರಭಾಕರನೊಬ್ಬನೇ ಮನೆಯಲ್ಲಿದ್ದ. ಕಾರ್ಯಾವಸರದಿಂದ ಕಾಮಾಕ್ಷಿ ಕಚೇರಿಯಲ್ಲಿದ್ದಳು. ಸುಶೀಲಮ್ಮ ಹೀಗೆ ಪ್ರಸ್ತಾಪಿಸಿದಳು.

ಸುಶೀಲಮ್ಮ: ಪ್ರಭಾಕರ....ನಿಮ್ಮ ಮನೆ ಚಿಕ್ಕದು; ಒಂದು ಕುಟುಂಬಕ್ಕೆ ತಕ್ಕುದು. ಪರಕೀಯರಿದ್ದರೆ ಏನು ಮಾಡುತ್ತೀರಿ?

ಪ್ರಭಾಕರ: ಪರಕೀಯರೆಂಬವರು ಯಾರಿದ್ದಾರೆ ಇಲ್ಲಿ? ಅಪರೂಪವಾಗಿ ನೆಂಟರು ಕೂಡ ಬರುವುದಿಲ್ಲ.

ಸುಶೀಲಮ್ಮ: ನಿಮ್ಮ ಮನೆಯಲ್ಲಿ ಹೊಸತೊಂದು ಆಸಾಮಿಯಿದೆಯಂತೆ....

ಪ್ರಭಾಕರ: ಹೊಸಬನೊ....ನಿಮಗೆ ಹೊಸಬನಾದರೂ ನಮಗೆ ಹಳಬನಾಗಿದ್ದಾನೆ....ನನಗೊಬ್ಬ ಅಣ್ಣನಿರುತ್ತಿದ್ದರೆ, ಹೇಗೋ ಹಾಗೆ....

ಸುಶೀಲಮ್ಮ: ಯಾವ ಕುಲವೋ ಯಾವ ಗೋತ್ರವೊ....ಅವನು ನಿನ್ನ ಅಣ್ಣ ಹೇಗಾಗಬಹುದು ?

ಪ್ರಭಾಕರ: ಎಲ್ಲಕ್ಕೂ ಕಾರಣ ಮನಸ್ಸಲ್ಲವೆ ?

ಸುಶೀಲಮ್ಮ: ಮನಸ್ಸು ಕಣ್ಣಿಗೆ ಕಾಣಿಸುತ್ತದೆಯೆ ಪ್ರಭಾಕರ?

ಪ್ರಭಾಕರ: ಎಲ್ಲರ ಕಣ್ಣಿಗೂ ಕಾಣಿಸುವುದಿಲ್ಲ; ನೋಡಬೇಕೆಂದಿರುವವರಿಗೆ ಕಾಣಿಸುತ್ತದೆ.

ಸುಶೀಲಮ್ಮ: ಚಂದವಲ್ಲ ಪ್ರಭಾಕರ! ಇಂತಹ ಮಾತುಗಳನ್ನಾಡಿ ಪರಕೀಯರನ್ನು ಮನೆಯೊಳಗೆ ಮೇಯಬಿಡುವುದು ಚಂದವಲ್ಲ.

ಪ್ರಭಾಕರ: ಮೇಯುವುದು ?

ಸುಶೀಲಮ್ಮ: ಹೌದು —ಮೇಯುವುದು! ನಾಯಿಯೆಷ್ಟು ಪಳಗಿದರೂ ನೈವೇದ್ಯವನ್ನು ಮುಟ್ಟಬಾರದೆಂದು ಅದಕ್ಕೆ ತಿಳಿದೀತೆ ?

ಪ್ರಭಾಕರ: ಅಂತಹ ನೈವೇದ್ಯವೇ ಇಲ್ಲ ಇಲ್ಲಿ.

ಸುಶೀಲಮ್ಮ: ಹಾಗೆ ಭಾವಿಸುವುದೇ ತಪ್ಪು....ಈಗಿನ ಓದಿದ ಹುಡುಗರ ಬುದ್ಧಿ ವಿಪರೀತ ಎನ್ನುವುದಕ್ಕೆ ಇಂತಹ ಮಾತುಗಳೇ ಸಾಕ್ಷಿ....

ಪ್ರಭಾಕರ: ಯಾವುದನ್ನು ಕುರಿತು ಹೇಳುತ್ತೀರಿ ಅತ್ತೆ ?

ಸುಶೀಲಮ್ಮ: ನಾನು ಯಾವುದನ್ನೂ ಹೇಳುವುದಿಲ್ಲ. ಅವರು ಗೊಣಗುತ್ತಿದ್ದರು. ಹೀಗಾಯಿತಲ್ಲ—ಎಂದು ನಿನ್ನ ಮಾವಯ್ಯ ಕಣ್ಣೀರು ಸುರಿಸುತ್ತಿದ್ದರು....ನಮ್ಮ ದೃಷ್ಟಿಗೆ ಯಾವ ದೋಷವೂ ಕಾಣದಿರಬಹುದು. ಲೋಕದ ಕಣ್ಣು ಕುರುಡೆ? ಕಾರಣ—ಇರಲಿ, ಇಲ್ಲದಿರಲಿ, ಹತ್ತುಜನ ನಡೆವಂತೆ ನಾವೂ ನಡೆಯಬೇಕೆಂಬುದು ಲೋಕದ ರಿವಾಜಿ. ನಾವು ಮಾಡುವ ಕೆಲಸ ಸ್ವರ್ಗಕ್ಕೆ ಏಣಿಕಟ್ಟುವಷ್ಟು ದೊಡ್ಡದೆ ಇರಬಹುದು. ಸುತ್ತಮುತ್ತಲೂ ನೋಡಬೇಕು. ಉಳಿದ ಜನ ಏಣಿಕಟ್ಟುವುದಿಲ್ಲವಾದರೆ, ನಾವೂ ಕಟ್ಟಿದ ಏಣಿಯನ್ನು ಬಿಚ್ಚಿಬಿಡಬೇಕು. ಅದೇ ಶಿಷ್ಟಚಾರ ಎಂದರೆ, ಗಂಡಹೆಂಡತಿ ನೀವಿಬ್ಬರೂ, ಹಗಲಿರುಳು ಒಟ್ಟಾಗಿದ್ದು ಕೂಲಿಕೆಲಸ ಮಾಡಿದರೂ ತಪ್ಪೆಂದು ಹೇಳುವಹಾಗಿಲ್ಲ....ಹೊರಗಿನವನೊಬ್ಬನನ್ನು ಕಟ್ಟಿಕೊಂಡಿದ್ದೀರಲ್ಲ ?

ಪ್ರಭಾಕರನ ಕಣ್ಣುಗಳು ಊದಿದಂತಾದುವು. ಕೆನ್ನೆ ಕೆಂಪೇರಿತು. "ಪಾಪ! ಎಲ್ಲಿಯೋ ಬಿದ್ದಿದ್ದ ಜೀವ ಉಳಿಸಿದೆವು. ಉಳಿಸಿದ ಜೀವವೆಂದರೆ ಚಿಂತಾಮಣಿಯೆಂದು ತಿಳಿಯಿತು. ನಮ್ಮ ಸಹೋದರನಾಗಿ ನಮ್ಮೊಡನೇ ಜೀವಿಸುತ್ತಾನೆ."

ಸುಶೀಲಮ್ಮ: ನಿನ್ನ ತಾಯಿ ಜೀವಂತಳಾಗಿರುತ್ತಿದ್ದರೆ, ಇಂದು ಐವತ್ತು ವಯಸ್ಸಾಗುತ್ತಿದ್ದಿತೋ ಏನೋ....ಇಷ್ಟು ದೊಡ್ಡವನಾದ ಮಗ ನನ್ನು ಎಂದು ಪಡೆದಳೋ ಯಾರಿಗೆ ಗೊತ್ತು....ಸುಶೀಲಮ್ಮನ ಸಿಟ್ಟು ಔಚಿತ್ಯವರಿಯದ ದಾಟಿಯಲ್ಲಿ ಪ್ರಕಟವಾಗುತ್ತಿತ್ತು.

ಪ್ರಭಾಕರ: ಶ್ಯಾಮಣ್ಣ ಈ ಮನೆಯಲ್ಲಿ ನೆಲಸಿರುವುದೇ ಈ ಆಕ್ಷೇಪಕ್ಕೆ ಕಾರಣವಲ್ಲವೆ?

ಸುಶೀಲಮ್ಮ: ನಮ್ಮದೇನು ಆಕ್ಷೇಪ ಪ್ರಭಾಕರ. ಮನೆ ನಿಮ್ಮದು; ಒಡೆತನ ನಿಮ್ಮದು; ನೀವು ಕಿವಿಗೆ ಹಾಕಿಕೊಳ್ಳುವುದಿದ್ದರೆ ಮಾತ್ರ ಹೇಳುವವರು ನಾವು....

ಪ್ರಭಾಕರ: ಹೇಳುವವರು ಹೇಳಬೇಕು; ಕೇಳುವವರು ಕೇಳಬೇಕು.

ಸುಶೀಲಮ್ಮ: ಹಾಗಾದರೆ ಹೇಳಿಬಿಡುತ್ತೇನೆ. ನನ್ನ ಮಗಳ ವಿಷಯದಲ್ಲಿ ನಮಗೇನೂ ದುರಭಿಪ್ರಾಯವಿಲ್ಲ. ಆದರೆ ಲೋಕಾಪವಾದಕ್ಕೆ ಹೆದರಬೇಡವೆ?

ಪ್ರಭಾಕರ: ನಿಮ್ಮಂಥವರು 'ಮಗಳ' ವಿಷಯದಲ್ಲಿ ತಪ್ಪಾಗಿ ತಿಳಿಯದಿದ್ದರೆ ಸಾಕು. ಮತ್ತೆ ಲೋಕವೇನು ಮಾಡೀತು?

ಸುಶೀಲಮ್ಮ: ಹಗಲನ್ನೆ ರಾತ್ರಿಯೆಂದು ಹತ್ತು ಜನ ಒತ್ತೊತ್ತಿ ಹೇಳಿದರೆ ಅದು ರಾತ್ರಿಯಾಗಿ ಬಿಡುತ್ತದೆ....

ಪ್ರಭಾಕರ: ಜನ ಹಾಗೆ ಹೇಳುತ್ತಾರೆಂದು ಹಗಲಲ್ಲಿ ಕತ್ತಲು ಮುಸುಕುವುದಿಲ್ಲವಷ್ಟೆ.

ಸುಶೀಲಮ್ಮ: ಓದಿದ ಹುಡುಗನಲ್ಲಿ ವಾದವಾಡಿ ಗೆಲ್ಲುತ್ತೇನೆಂದು ನನಗೇನೂ ಧೈರ್ಯವಿಲ್ಲ ಪ್ರಭಾಕರ....ನಿನ್ನಲ್ಲಿ ಒಂದೇ ಪ್ರಶ್ನೆ ಹಾಕುತ್ತೇನೆ.

ಆ ಶ್ಯಾಮಣ್ಣನಂತೆ....ಶ್ಯಾಮಣ್ಣ....ಯಾರ ಅಣ್ಣನೋ ಯಾವ ಶ್ಯಾಮನೋ ನನಗರಿಯದು....ಅವನು ಈ ಮನೆಯೊಳಗೆ ಕಾಲಿಡುವ ಮುಂಚೆ ನಿಮ್ಮ ಸೌಭಾಗ್ಯಕ್ಕೆ ಏನು ಕಡಿಮೆಯಾಗಿತ್ತು ? ಅನ್ನಬೇಯುತ್ತಿರಲಿಲ್ಲವೆ ? ಗಾಳಿ ಬೀಸುತ್ತಿರಲಿಲ್ಲವೆ? ಈ ಮನೆಗೆ ಸೂರ್ಯನ ಪ್ರಕಾಶ ಸೂಸುತ್ತಿರಲಿಲ್ಲವೆ?

ಪ್ರಭಾಕರ: ಅಂತಹ ಅಡಚಣೆಯೇನೂ ಇರಲಿಲ್ಲ.

ಸುಶೀಲಮ್ಮ: ಮತ್ತೇಕೆ ಬೀದಿಯ ಜನವನ್ನು ಒಳಗೆ ಒಲಿಸಿಕೊಂಡಿರಿ!

ಪ್ರಭಾಕರ: ಹೃದಯ ಸಂಬಂಧವೂ ರಕ್ತಸಂಬಂಧವೂ ಒಮ್ಮೊಮ್ಮೆ ತಾಳಮೇಳ ಕೂಡದಿರುವುದು ಇದೆಯಲ್ಲವೆ?

ಸುಶೀಲಮ್ಮ: ಒಂದೇ ಮಾತಿನಲ್ಲಿ ಹೇಳುತ್ತೇನೆ....ಶ್ಯಾಮಣ್ಣನು ಇಲ್ಲಿ ಮನೆಜನದ ಹಾಗಿರುವುದು ನಿನ್ನ ಮಾವಯ್ಯನಿಗೆ ಇಷ್ಟವಿಲ್ಲ; ನನಗೆ ಚಂದವಾಗಿ ತೋರುವುದಿಲ್ಲ. ಕಾಮಿ....ಇನ್ನೂ ಚಿಕ್ಕ ಹುಡುಗಿ. ಸಂಪ್ರದಾಯದ ಹೆಣ್ಣು ಮಕ್ಕಳು ಹೇಗೆ ನಡೆಯಬೇಕೆಂಬುದು ಅವಳಿಗರಿಯದು. ನೀನೆ ಇದನ್ನೆಲ್ಲ ತಿಳಿಯಬೇಕಾದವನು. ಜಾಗ್ರತೆ ವಹಿಸಬೇಕಾದವನು. ಅವನನ್ನು ಮನೆಯೊಳಗಿನಿಂದ ಹೊರಹಾಕಿ ಬಿಡಿ. ನಿನ್ನ ಮಾವಯ್ಯನವರ ಮುಪ್ಪಿನಲ್ಲಿರುವ ಒಂದೇಒಂದು ಚಿಂತೆಯನ್ನು ಓಡಿಸಿಬಿಡಿ. ಈಗ ಜನ ಹೇಳುವ ಮಾತಿನಲ್ಲಿ ಏನೂ ಇಲ್ಲ. ನಮ್ಮ ಕುಲದಲ್ಲಿ ಲಜ್ಜೆಗೇಡಿಗಳು ಹುಟ್ಟಲಿಲ್ಲ. ಆದರೆ....ಬರಿಯ ಸುಳ್ಳುಮಾತನ್ನು ನಿರಾಧಾರವಾದ ಅಪವಾದವನ್ನಾದರೂ ಕೇಳಬೇಕಾದ ಕಿವಿಗಳು ನಮ್ಮವೇ ಅಲ್ಲವೇ....ಈಗ ಯಾರೇನೆಂದರೂ ಸಾಂತಮ್ಮ ಇಲ್ಲಿಯೇ ಮನೆ ಕಾಯುವ ನಾಯಿಯಂತಿರುವುದರಿಂದ, ವಿಚಾರಿಗಳು ಇದೇನೋ ನಿಷ್ಕಾರಣವಾದ ಅಪವಾದವೆಂದು ಭಾವಿಸಿಕೊಳ್ಳುವುದಕ್ಕೆ ಎಡೆಯುಂಟು. ಅವಳಿಗೆ ಈ ಪ್ರಪಂಚದ ನೀರು ಯಾವಾಗ ಮುಗಿಯುವುದೋ ಯಾರು ಬಲ್ಲರು? ಈಗಲೇ ಜಾಗ್ರತೆಯಿರಲಿ; ಹೇಳುತ್ತೇನೆ; ಸೆರಗಿನಲ್ಲಿ ಗಂಟಿಕ್ಕಿಕೊ....

ಹೀಗೆನ್ನುವಾಗ ಒಳಕೋಣೆಯಲ್ಲಿದ್ದ ಸಾಂತವ್ವ ಮುಖಕಾಣಿಸಿಕೊಂಡು "ನಿನ್ನ ಅತ್ತೆ ಸುಮ್ಮನೆ ಹೇಳುತ್ತಾಳೆಯೇ ಮಗು! ಜನನಿಷ್ಕಾರಣವಾಗಿ ಆಡುತ್ತಿದ್ದಾರೆ; ಸಹಜ. ಅವರು ನಿಷ್ಕಾರಣವಾಗಿಯಾದರೂ ಆಡಬಾರದು. ಹೆಣ್ಣು ಹೆಂಗುಸಿನ ಲಜ್ಜೆಯೆಂದರೆ ಎಳೆಯ ಮುಗುಳಲ್ಲವೆ ಮಗು? ಅದು ಫಕ್ಕನೆ ಬಾಡಿಹೋಗುತ್ತದೆ"—ಎಂದು ಸುಶೀಲಮ್ಮ ಇದು ವರೆಗೆ ಕೊಟ್ಟಿದ್ದ ಭಾಷಣಕ್ಕೆ ಚುಳುಕಾದ ಭಾವಾರ್ಥ ಕೊಟ್ಟಳು.

ಅಷ್ಟರಲ್ಲಿ ಕಾಮಾಕ್ಷಿಯೂ ಬಂದಳು. "ಶ್ಯಾಮಣ್ಣ ಪತ್ರಬರೆದಿದ್ದಾನೆ. ಇನ್ನೆರಡು ದಿನ ಬರುವಂತಿಲ್ಲ. ಪತ್ರಿಕೆಯ ಕೆಲಸವೆಲ್ಲ ನಮ್ಮ ಮೇಲೆಯೇ ಬಿದ್ದಿತು" ಎಂದು ಆಡುತ್ತಾ ಸರಸರನೆ ಮಾಳಿಗೆಯನ್ನೇರಿದಳು....

"ತಮ್ಮ ಹಣೆಬರಹ ಓದಲಾರದವರು ಪತ್ರಿಕೆಯನ್ನು ನಡೆಸುತ್ತಾರೆ!" ಎಂದು ಸುಶೀಲಮ್ಮ ಮನಸ್ಸಿನಲ್ಲಿಯೆ ಆಡಿಕೊಂಡು ಬಿಡುಕಳ್ಳಿದಳು....

"ಅನುಗಾಲವು ಚಿಂತೆ ಜೀವಕ್ಕೆ. ಎನ್ನಮನವು ಶ್ರೀ ರಂಗನೊಳ್ ನಿಲ್ಲುವ ತನಕ...." ಎಂದು ಹರಿದಾಸರ ಪದವನ್ನು ಆದಾಟಿಯಲ್ಲಿಯೇ ಅಣಕಿಸುತ್ತಾ ಸಾಂತಮ್ಮ ಒಳಮನೆ ಸೇರಿದಳು.

## ೧೨

ಚುನಾವಣೆಯ ಉದ್ವೇಗ ಹಿಡಿತವನ್ನು ಮೀರುತ್ತಿದ್ದಿತು. ರಾಷ್ಟ್ರಸಭಾ ಪಕ್ಷದಿಂದ ಪ್ರತಿಷ್ಠಿತ ವ್ಯಕ್ತಿಗಳೊಬ್ಬರು ರಂಗಪ್ರವೇಶ ಮಾಡಿದ ಕಾರಣ ಭಾಮಾದೇವಿಯ ಯಶಸ್ಸು ಸಂದೇಹಗ್ರಸ್ತ ಎನ್ನುವ ಸ್ಥಿತಿಗೆ ಮುಟ್ಟಿದೆ. ಕಳೆದ ಐವತ್ತು ವರ್ಷಗಳಿಂದ ಅಖಂಡ ಸೇವಾದೀಕ್ಷೆಯಲ್ಲಿ ಪ್ರಾಣಸಮರ್ಪಣ ಮಾಡಿದ ಹಿರಿಯ ಸಂಸ್ಥೆ; ಗಾಂಧಿ ನೆಹರುಗಳ ನಾಯಕತ್ವದಲ್ಲಿ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣವಾಗಿ ಬಂದ ಸಂಸ್ಥೆ. ಅದರ ಪಕ್ಷದಿಂದ ನಿಂತವರು ಮನುಷ್ಯರೆ? ಜಂತುಗಳೇ ನೋಡಬೇಕಾಗಿಲ್ಲ.

ಅದರ ಹುರಿಯಾಳುಗಳನ್ನು ಕಳುಹಿಸಿಕೊಟ್ಟರೆ ಸಾಮ್ರಾಜ್ಯಶಾಹಿ ನಿರ್ನಾಮವಾಗುತ್ತದೆ. ಬ್ರಿಟಿಷರ ಆಡಳಿತದ ಶಕಟವು ಕೀಲುಕಳಚಿ ಮುರಿದು ಬೀಳುತ್ತದೆ. ಕಳೆದ ನೂರೈವತ್ತು ವರ್ಷಗಳಲ್ಲಿ ಹಿಂದೀಯರು ಕಾಣದ ಕೇಳದ ಅನುಭವಿಸದ ಸ್ವಾತಂತ್ರ್ಯ ಸಂಪಾದನೆಗೆ ಒಂದೇ ಒಂದು ದಿವ್ಯೋಪಾಯವೆಂದರೆ, ಗುಣದೋಷಗಳನ್ನು ಪರಿಕಿಸದೆ ರಾಷ್ಟ್ರಪಕ್ಷದ ಹುರಿಯಾಳಿಗೆ ಮತಕೊಡುವುದು. ವಿರೋಧಮತದಾನಕೊಡುವವರು ದೇಶದ್ರೋಹಿಗಳು; ಅನುಕೂಲವಾದವರು ದೇಶೋದ್ಧಾರಕರು. ದೇಶೋದ್ಧಾರದ ಸಂದರ್ಭವು ಬಾಗಿಲಬಳಿಯಲ್ಲಿಯೆ ನಿಂತು ನಿರೀಕ್ಷಿಸುತ್ತಿರುವಾಗ ಯಾರು ತಾನೆ ಹಿಂದೆಮುಂದೆ ನೋಡುತ್ತಾರೆ? ಒಂದು ಪಕ್ಷದ ಪ್ರಚಾರಕ್ರಮವು ಈ ರೂಪದಲ್ಲಿ ನಡೆಯಿತು.

ಭಾಮೆ ಇನ್ನೊಂದು ದಿಕ್ಕಿನಲ್ಲಿ ದಂಡಯಾತ್ರೆ ಹೂಡಿದಳು. ರಾಷ್ಟ್ರ ಪವಿತ್ರಸಂಸ್ಥೆ ಎಂಬುದನ್ನು ಒಪ್ಪಿಕೊಳ್ಳಬೇಕು. ಆದರೆ, ನಮ್ಮೂರಲ್ಲಿ ರಾಷ್ಟ್ರೀಯತೆಯ ಸೋಗುಹಾಕಿದವರು ಸ್ವಾರ್ಥಸಾದಕರು; ಜಂಬುಕರು; ಬಕಪಕ್ಷಿಗಳು. ಅದರ ಹುರಿಯಾಳು ಒಮ್ಮೆಯೋ ಸೆರೆಮನೆಗೆ ಕಾಲಿಟ್ಟವನಲ್ಲ. ಚಳವಳದಲ್ಲಿ ದುಮುಕಬೇಕಾಗಿದ್ದ ಪ್ರತಿಸಂದರ್ಭದಲ್ಲಿಯೂ ಡಾಕ್ಟರರಿಂದ ಅನಾರೋಗ್ಯ ಪ್ರಮಾಣಪತ್ರವನ್ನು ಬರೆಯಿಸಿ ಆಸ್ಪತ್ರೆಯಲ್ಲಿ ಮಲಗಿದಾತ. ಕಕ್ಷಿಗಾರರ ಜೀವಹಿಂಡುವ ವಕೀಲ; ಭಂಡವಾಳಿಗರ ಕೈಕೂಸು; ಬ್ರಿಟಿಷ ಸಾಮ್ರಾಜ್ಯವಾದಿಗಳ ಉಪಾಸಕ. ಭಾಮೆ ನಿರುಪಮ ಸ್ವಾರ್ಥತ್ಯಾಗ ಶಕ್ತಿಯನ್ನು ಪಡೆದಿದ್ದಾಳೆ. ಇಷ್ಟು ವರ್ಷಗಳಲ್ಲಿ ನಮ್ಮ ಜಿಲ್ಲೆಯಿಂದ ಒಬ್ಬಳೇ ಒಬ್ಬಳು ಸ್ತ್ರೀಯನ್ನು ಆರಿಸಿಕಳುಹಿಸಲಿಲ್ಲ. ಈ ಲೋಪದಿಂದಲೇ, ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಲೋಪವಾಗಿದೆ. ಶಿಶುಮರಣಗಳು ಹೆಚ್ಚಿವೆ. ಗರ್ಭಿಣಿಯರು ಅಕಾಲದಲ್ಲಿ ಪ್ರಸವಿಸುತ್ತಾರೆ. ನೂರು ವರ್ಷ ಬಾಳಬೇಕಾದ ಭಾರತೀಯರು ಐವತ್ತರೊಳಗೇ ಪರಂಧಾಮವನ್ನು ಹೊಂದುತ್ತಾರೆ. ಸ್ತ್ರೀಪುರುಷ ಸಮಾನತೆಯನ್ನು ಎತ್ತಿ ಹಿಡಿವ ರಾಷ್ಟ್ರಸಂಸ್ಥೆ ಭಾಮೆಯನ್ನೇಕೆ ಆರಿಸಬಾರದಿತ್ತು? ಮಾತಿನಿಂದಲ್ಲ; ಕೃತಿಯಿಂದ ಆಕೆ ತನ್ನನಿಸ್ಸೀಮ ರಾಷ್ಟ್ರಭಕ್ತಿಯನ್ನು ಪ್ರದರ್ಶಿಸಿರುತ್ತಾ

ಗೊಡ್ಡು ಗಂಡೊಬ್ಬನನ್ನು ಆರಿಸುವುದಕ್ಕೆ ಕಾರಣೀಭೂತವಾದವರು ಮಹಿಳಾ ವರ್ಗಕ್ಕೆ ಅನ್ಯಾಯಮಾಡಿದಂತಾಗಲಿಲ್ಲವೇ? ತಮ್ಮ ತಾಯಂದಿರ ಮುಖಕ್ಕೆ ಮಸಿಬಳಿಯಲಿಲ್ಲವೆ? ಅಕ್ಕತಂಗಿಯರ ಮೂಗನ್ನು ಕತ್ತರಿಸಿದಂತಾಗಲಿಲ್ಲವೆ? ಸ್ತ್ರೀಯರಿಗಾದ ಅನ್ಯಾಯವನ್ನು ಸಹಿಸಬಾರದು. ಭಾಮೆ ರಾಷ್ಟ್ರಸಭಾ ಪಕ್ಷದಿಂದಲೇ ನಿಲ್ಲುತ್ತಿದ್ದಳು. ಆದರೆ ಒಳಗಿನ ಶಕುನಿ ಮಹಾರಾಜರ ಮಾಟ ಹೆಚ್ಚಾಯಿತು. ಸೇಕಡಾ ನೂರರಷ್ಟು ರಾಷ್ಟ್ರಭಕ್ತಿಯುಳ್ಳ ಎರಡುಬಾರಿ ಸಬರಮತಿ ಆಶ್ರಮದಲ್ಲಿ ವಾಸಮಾಡಿದ್ದ, ಮೂರುಬಾರಿ ಸೆರೆ ಮನೆಯಲ್ಲಿ ರಾಗಿಮುದ್ದೆ ತಿಂದಿದ್ದವಳನ್ನು ಕೇವಲ ಹೆಣ್ಣೆಂಬ ಕಾರಣ ದಿಂದ ಅಲಕ್ಷಿಸಿದರು. ರಾಷ್ಟ್ರಸಭೆಯ ಅಧಿಕೃತ ಪ್ರತಿನಿಧಿಯನ್ನು ಅಡಿ ತಪ್ಪಿಸಿ ಭಾಮೆಗೇ ಮತಕೊಡುವವರು ರಾಷ್ಟ್ರಸಭೆಯ ಉನ್ನತ ತತ್ವಗಳನ್ನೂ ಸ್ತ್ರೀಸ್ವಾತಂತ್ರ್ಯವನ್ನೂ ಪುರಸ್ಕರಿಸಿದಂತಾಗುವುದು. ಆ ಹುರಿಯಾಳನ್ನು ಕಳುಹಿಸುವುದರಿಂದ ಒಂದು ಪುಣ್ಯದೊರೆಯುವುದಾದರೆ ಭಾಮೆಯ ಆರಿಕೆ ಯಿಂದ ಹತ್ತು ಪುಣ್ಯಗಳು....ಪುರುಷಾರ್ಥಗಳು.

ಪ್ರಕಟನೆಗಳ ಮೂಲಕ, ಭಾಷಣಗಳ ಮೂಲಕ, ಚಳವಳವು ರಭಸ ದಿಂದ ಸಾಗಿತು. ಕೊನೆಗೆ ಅಪವಾದಗಳ ಬಾಣಗಳು ಹಾರಿದವು. ಭಾಮೆ ಸ್ತ್ರೀವರ್ಗದ ಪ್ರತಿನಿಧಿಯಂತೆ. ಕಾನೂನಿನ ಮದುವೆ—ವಿವಾಹವಿಚ್ಛೇದ... ಇದು ಯಾವ ನೀತಿ? ಹಿಂದೂ ಧರ್ಮವು ಏನೆನ್ನುತ್ತದೆ ಇದಕ್ಕೆ? ಎಂದು ಧಾರ್ಮಿಕ ಮನೋವೃತ್ತಿಯುಳ್ಳವರು ಪ್ರಶ್ನಿಸತೊಡಗಿದರು. "ನಾನು ಒಂದುಬಾರಿಯಲ್ಲ; ಹತ್ತುಬಾರಿ ಮದುವೆಯಾಗುತ್ತೇನೆ; ಹತ್ತುಬಾರಿ ವಿಚ್ಛೇದಮಾಡಿಸಿಕೊಳ್ಳುತ್ತೇನೆ; ಇದರಿಂದ ಯಾರಿಗೇನು ನಷ್ಟ? ಅದಕ್ಕೂ ಸಾರ್ವಜನಿಕ ಸೇವೆಗೂ ಸಂಬಂಧವೇನು? ಕಾನೂನಿನ ಮದುವೆಯಾಗಿ ಬಿಡುಗಡೆ ಮಾಡಿಕೊಂಡ ಹೆಣ್ಣಿಗಿಂತ—ಮದುವೆಯೇ ಆಗದ ನಾಯಿ ಯೆಂದು, ಮದುವೆಯಾಗಲಿಲ್ಲವೆಂಬ ಕಾರಣದಿಂದ, ಹೆಚ್ಚಿನ ಯೋಗ್ಯತೆ ಯುಳ್ಳುದೆಂದು ಹೇಳಿಸಿಕೊಳ್ಳಬಲ್ಲುದೆ? ಆ ನಾಯಿಗೆ ಪ್ರಬುದ್ಧ ಜನ ಮತವು ಬೆಂಬಲಕೊಡುವುದೇ?" ಈ ಸರಣಿಯಲ್ಲಿ ಚರ್ಚಾಪ್ರಸಂಗಗಳು ನಡೆದ ಮೇಲೆ ಉದ್ವೇಗವು ಯಾವ ಮಟ್ಟಕ್ಕೇರಬೇಕಾದುದನ್ನು ಬೇರೆ

ಹೇಳಬೇಕಾಗಿಲ್ಲ. ರಾಷ್ಟ್ರಸಭೆಯ ಅಚ್ಚಭಕ್ತರು ಕೂಡ ಭಾಮೆಯ ಧೈರ್ಯ ಸಾಹಸಗಳನ್ನು ಕಂಡು ಬೆರಗಾದರು. ಉಳಿದವರಲ್ಲಿ ಭೀತಿ ಹುಟ್ಟಿತು. ಚುನಾವಣೆಯಲ್ಲಿ ಗೆಲ್ಲುವುದೆಂದರೆ ಪ್ರಾಣಾಪತ್ತಾಗಿ ಪರಿಣಮಿಸಿತು. ಒಂದೆರಡು ಕಲ್ಲಿನಮಳೆ ಸುರಿಯಿತು. ಕೋಳಿಮೊಟ್ಟೆಗಳು ಆಕಾಶದಿಂದ ಹಾರಿಬಂದು, ಅಹಿಂಸೆಯ ಗುಂಡುಗಳು ಈ ರೀತಿ ಉರುಳುವುದನ್ನು ಕಂಡು ಅಧಿಕಾರಿಗಳುತ್ರಸ್ತರಾದರು. ಅಧಿಕಾರಿಗಳ ಅಪ್ಪಣೆ ಪಡೆಯದೆ ಸಭೆಗಳನ್ನು ಕೂಡಿಸಬಾರದೆಂಬ ಆಜ್ಞೆ ಹೊರಟಿತು.

ಈ ಅವಸರದಲ್ಲಿ ನಾಗೇಶರಾಯನು ಒಮ್ಮೆರಾತ್ರಿ ಪ್ರಭಾಕರನ ಮನೆಗೆ ಓಡಿಬಂದ. ಅವನೂ, ಮನೆಯಲ್ಲಿದ್ದ ತ್ರಿಮೂರ್ತಿಗಳೂ ಉಪ್ಪರಿಗೆಯನ್ನೇರಿ ಮಂತ್ರಾಲೋಚನೆ ಜರಗಿಸಿದರು.

ಭಾಮೆಯ ಜಯವು ಸಂದೇಹದಲ್ಲಿ ತೂಗಾಡುತ್ತಿದೆ; ಸಂಗ್ರಾಮ ಪತ್ರಿಕೆಯು ಆಕೆಯ—ಎಂದರೆ ಸ್ತ್ರೀ ಸ್ವಾತಂತ್ರ್ಯದ ಪಕ್ಷವಹಿಸಿ ಅನಲ್ಪ ಸಹಾಯ ಮಾಡಿದೆ. ಈಗ ಪ್ರಚಾರಕರು ಬೇಕಾಗಿದ್ದಾರೆ; ಭಾಷಣಕರ್ತರು ಬೇಕಾಗಿದ್ದಾರೆ. ಮತದಾರರ ಮನೆಮನೆಗೆ ನುಗ್ಗಿ ಮತವನ್ನು ಕದ್ದು ಬರುವ ಚಾಣಾಕ್ಷರ ತಂಡವೇ ಸಿದ್ಧವಾಗಬೇಕಾಗಿದೆ. ಸಂಗ್ರಾಮ ಪತ್ರಿಕೆಯ ಕುಟುಂಬದವರಿಂದ ಇಂತಹ ಸಹಾಯ ದೊರಕಬಹುದೇ? ಪ್ರಭಾಕರನ ಅಭಿಪ್ರಾಯವೇನು? ಕಾಮಾಕ್ಷಿ ಏನೆನ್ನುತ್ತಾಳೆ? ಶ್ಯಾಮಣ್ಣನ ಮಟ್ಟಿಗೆ ಸಂದೇಶವೇ ಇಲ್ಲ.

ಈ ಮಾತನ್ನು ಕೇಳುತ್ತಲೇ ಕಾಮಾಕ್ಷಿ—ಊಟ ಮಾಡುವ ಮುಂಚೆಯೇ ಜಾತಿ ಕೇಳಬೇಕಲ್ಲವೆ? ಭಾಮೆಯ ಪಕ್ಷವನ್ನು ಪತ್ರಿಕೆಯಲ್ಲಿ ಎತ್ತಿ ಹಿಡಿದುದಾಯಿತು. ಚುನಾವಣೆಯ ಕಳಕ್ಕಿಳಿದು ಏಕೆ ಎತ್ತಬಾರದು?—ಎಂದು ಪ್ರಶ್ನಿಸಿದಳು.

ಒಂದು ತಪ್ಪಿನಿಂದ ಇನ್ನೊಂದಕ್ಕೆ ಪ್ರಾಯಶ್ಚಿತ್ತವೇ? ಎಂದು ಪ್ರಭಾಕರನು ಪ್ರಶ್ನೆ ಮಾಡಬೇಕಾಗಿ ಬಂತು.

ನಾಗೇಶನು ಆಶ್ಚರ್ಯದಿಂದ "ಸ್ತ್ರೀ ಸ್ವಾತಂತ್ರ್ಯಕ್ಕಾಗಿ, ಸ್ತ್ರೀಯರಿಂದಲೇ ಸಂಪಾದಿಸಲ್ಪಟ್ಟ, ಪತ್ರಿಕೆ ಸ್ತ್ರೀ ಪಕ್ಷವನ್ನು ಸಮರ್ಥಿಸಿದುದು

ತಪ್ಪೆನ್ನುವಾಗ, ನಾವು ಹೊಸತೊಂದು ಯುಗಕ್ಕೆ ಇಳಿದ ಹಾಗಾಯಿತು" ಎಂದನು.

ಪ್ರಭಾಕರ: ಯುಗ ಅಂದಿನದೇ ಇಂದಿಗೂ; ಧ್ಯೇಯವೂ ಅದೆ; ನಾವು ಗಡಿಮೀರಿ ನಡೆದು ದುಡುಕುವ ಹಾಗಿಲ್ಲ. ಈಭಾರಿ ಸ್ತ್ರೀಯರೀಗೇ ಸ್ಥಾನ ದೊರೆಯಬೇಕೆಂದು ಪತ್ರಿಕೆಯಲ್ಲಿ ಚಳವಳ ಹೂಡಿದ್ದಾಯಿತು. ರಾ. ಸಭೆಯವರು ತಮ್ಮ ಹುರಿಯಾಳನ್ನು ನೇಮಕ ಮಾಡಿದರೆಂದ ಮೇಲೆ —ವಿರೋಧಿಸುವುದು ತಪ್ಪು.

ನಾಗೇಶ: ಮನಸಾಕ್ಷಿ ಎಲ್ಲಿಗೆ ಹೋಯಿತು ಪ್ರಭಾಕರ? ರಾ. ಸಭೆಯ ನಿರ್ಧಾರವಾದಾಗ ಅದಕ್ಕೆ ಮರಣ ಬಂತೆ?

ಪ್ರಭಾಕರ: ಅಂತಹ ಅವಗಡವೇನೂ ಆಗಿಲ್ಲ. ವ್ಯಕ್ತಿಗುಣದೋಷಗಳನ್ನು ನೋಡದೆ....

ನಾಗೇಶ: ಭಾಮೆಯಲ್ಲಿ ಇಲ್ಲದ ಗುಣವೇನು? ಇರುವದೋಷವೇನು?

ಪ್ರಭಾಕರ: ಆಕೆಯನ್ನು ಮಹಿಳಾವರ್ಗದ ಉತ್ತಮ ಪ್ರತಿನಿಧಿಯೆಂದು ಹೇಳಿದರೆ....

ನಾಗೇಶ: ಆಕಾಶ ಹರಿದು ಬೀಳುವುದೇ?

ಪ್ರಭಾಕರ: ಅಂತಹವರನ್ನು ಆದರ್ಶಸ್ಥಾನಕ್ಕೇರಿಸಿ ನಾವು ಸಮಾಜನೀತಿಯನ್ನು ಹಾಳುಮಾಡುತ್ತೇವೆ.

ನಾಗೇಶ: ಸಮಾಜವೆಂದರೇನು ಪ್ರಭಾಕರ!

ಪ್ರಭಾಕರ: ನಮ್ಮನಿಮ್ಮಂತಹ ಮನುಷ್ಯ ಪ್ರಾಣಿಗಳ ಸಮೂಹ.

ನಾಗೇಶ: ಹೌದು; ಸಮೂಹ. ಒಂದೇ ಒಂದು ವ್ಯಕ್ತಿಯಿಂದ ಸಮಾಜವಾಗುವುದಿಲ್ಲ. ಹಲವರು ಇದ್ದೇ ಸಮಾಜವಾಗುವುದೆಂದಾದರೆ ಹಲವ್ಯಕ್ತಿಗಳ ಹಲವು ಗುಣಸ್ವಭಾವಗಳನ್ನು ಪರೀಕ್ಷಿಸಬೇಕು. ಬ್ರಹ್ಮನಲ್ಲಿ ವ್ಯಕ್ತಿತ್ವದ ಒಂದೇ ಅಚ್ಚಿರುವುದಲ್ಲ. ನೂರಾರು ಅಚ್ಚುಗಳಿರುತ್ತವಲ್ಲ....ಎಲ್ಲದೂ ಒಂದೇ ಹೆವಣಿನದೂ ಅಲ್ಲ. ಹೊರಗಿನಿಂದ ತೋರುವ ಹಾವ ಮುದ್ರೆಯ ಆವರಣದೊಳಗೆ, ಹೃದಯ ಮಧ್ಯದ ಪೀಠ

ದಲ್ಲಿ ಕಿರಿಯದೊಂದು ಭಾವವ್ಯಕ್ತಿ ಎದ್ದು ಕುಳಿತು ತನ್ನ ಕಲ್ಪನಾ ರಾಜ್ಯದೊಳಗೇ ಓಡಾಡುತ್ತಿರುವುದು. ಅದರ ಗತಿಗಮ್ಯಗಳೇನೆಂದು ಯಾರು ಬಲ್ಲರು ಪ್ರಭಾಕರ? ನೀತಿ ನಿಯಮಗಳು ಅದನ್ನು ಮುಟ್ಟು ವುವೆ? ಸ್ಪಷ್ಟವಾದ ಉದಾಹರಣೆ ಕೊಟ್ಟು ಹೇಳುವುದಿದ್ದರೆ ಹೀಗೆ ಭಾವಿ ಸೋಣ. ನಾನು, ನೀನು, ನಮ್ಮಕ್ಕ ಕಾಮಾಕ್ಷಿ, ಶ್ಯಾಮಣ್ಣ ಈ ನಾಲ್ವರೂ ಬಾಹ್ಯದೃಷ್ಟಿಯಲ್ಲಿ ಸಭ್ಯರೆ, ಸಂಭಾವಿತರೆ, ನೀತಿವಂತರೇ. ನಮ್ಮ ಹೃದಯದ ಒಳಗೆ ಕುಳಿತ ವ್ಯಕ್ತಿಗಳು, ಕತ್ತಲೆಯ ಮರೆಯಲ್ಲಿರುವ ಆ ಚಿಕ್ಕ ಪ್ರಭಾಕರ, ಚಿಕ್ಕ ನಾಗೇಶ, ಚಿಕ್ಕ ಶ್ಯಾಮಣ್ಣ, ಚಿಕ್ಕ ಕಾಮಾಕ್ಷಿ,— ಏನೆಲ್ಲ ಚೇಷ್ಟೆ ಮಾಡುತ್ತಿರುವರೆಂದು ಇತರರಿಗೆ ಗೊತ್ತೆ? ಹೀಗೆ ಲೆಕ್ಕಮಾಡುತ್ತಾ ಹೋದರೆ ಒಂದು ವ್ಯಕ್ತಿಯೊಳಗೆ ಎರಡಿದೆ; ಮೂರಿದೆ, ಒಮ್ಮೊಮ್ಮೆ ಬೇರೆ ಬೇರೆ ಸ್ವರೂಪದಲ್ಲಿ ಒಂದೊಂದು ನೂರಾರು ಹನದಲ್ಲಿ ಕಾಣಿಸುವುದು. ಇನ್ನೊಬ್ಬರಿಗೆ ತಿಳಿಯುವುದಿಲ್ಲ ಎಂಬ ಸೂತ್ರದಿಂದ ವ್ಯಕ್ತಿಯಿರುವುದು ಒಂದೇ ಎಂದೆಣಿಸುತ್ತೇವೆ. ಇದೊಂದು ಭ್ರಾಂತಿ. ಇಷ್ಟನ್ನು ನಾವು ಒಪ್ಪಿಕೊಂಡ ಮೇಲೆ, ವಿವೇಕಿಗಳು ಆ ಭೇದವನ್ನು ಹುಡುಕದೆ ಒಂದರಲ್ಲಿ ಒಂದೇ ಇರುವುದು ಎಂದು ಭಾವಿಸಬೇಕು. ಎಂದರೆ, ಶ್ರೀಮತಿ ಭಾಮೆ ಎಂಬವಳ ಒಳಗಿನ ವ್ಯಕ್ತಿತ್ವವೇನೆಂದು ಹುಡುಕುತ್ತಾ ಹೋಗುವುದರಲ್ಲಿ ಅರ್ಥವಿಲ್ಲ. ಅವಳು ಲೋಕದೃಷ್ಟಿಗೆ ತೋರುವಂತೆ ಒಬ್ಬಳು ಧುರೀಣೆ. ದೇಶಕ್ಕಾಗಿ ದುಡಿದಿದ್ದಾಳೆ; ದುಡಿಯುತ್ತಾಳೆ; ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಲೋಕದ ಅರ್ಧಾಂಶ ಜನಕ್ಕಾಗಿ ದೇಹವನ್ನು ಸವೆಯಿಸುತ್ತಾಳೆ–ಎಂದು ಮಾತ್ರ ಗ್ರಹಿಸಿ ಅವಳನ್ನು ಹೊರಕಾಣುವ ಸ್ವರೂಪದಲ್ಲಿಯೇ ಒಪ್ಪುವುದು– ಅಥವಾ ಒಪ್ಪದಿರುವುದು- ಇದೊಂದೇ ನಮ್ಮ ಕರ್ತವ್ಯವೆಂದಾಯಿತಲ್ಲವೇ?

ಕಾಮಾಕ್ಷಿ: ಸಂದೇಹವೇನು?

ಶ್ಯಾಮಣ್ಣ: ಕೆಲಸವೊಂದನ್ನೆ ಲಕ್ಷಿಸುವವರಿಗೆ ಅದರ ಒಳಗಿನ ಕಾರಣವನ್ನು ತಿಳಿಯಬೇಕಾದ ಅವಶ್ಯತೆಯಿಲ್ಲ.

ನಾಗೇಶ: ನಿಮ್ಮಿಬ್ಬರ ಮತ ದೊರೆತ ಮೇಲೆ, ಪ್ರಭಾಕರನ ಅಭಿಮತವೇನೆಂದು ಕೇಳಬೇಕಾಗಿಯೆ ಇಲ್ಲ. ಒಮ್ಮತದಿಂದ ಆಗದ ನಿರ್ಣಯ

ಬಹುಮತದಿಂದಾಗುತ್ತದೆ. ಹೀಗಲ್ಲವೆ ನಮ್ಮ ಪ್ರಜಾ ಪ್ರಭುತ್ವ ತತ್ವವು ಸಾರಿಹೇಳುವುದು?

ಪ್ರಭಾಕರ: ನಿಮ್ಮಷ್ಟು ಹೆಜ್ಜೆ ಮುಂದಿಡಬೇಕೆಂದು ನನ್ನ ಮನಃ ಪ್ರವೃತ್ತಿಯಿಲ್ಲ.

ನಾಗೇಶ: ಎಂದರೆ, ನೀವು ಲೇಖನಗಳ ಸಹಾಯವನ್ನು ಮಾತ್ರ ಕೊಡುವುದು. ಮಾತನ್ನು ಮಾತ್ರ ಕೊಡುವುದು; ಕೃತಿಯನ್ನಲ್ಲ ಎಂದು ತಿಳಿದ ಹಾಗಾಯಿತು. ಇದೂ ಅಲ್ಪಲಾಭವಲ್ಲ. ನಮ್ಮ ಕಾಮಾಕ್ಷಿ ಶ್ಯಾಮಣ್ಣನವರ ಅಭಿಪ್ರಾಯವೇನಂತೆ?

ಕಾಮಾಕ್ಷಿ: ಹಿಡಿದ ಕೆಲಸವನ್ನು ಕೊನೆಹೊಂದಿಸಲೇ ಬೇಕಾಗಿದೆ.

ನಾಗೇಶ: ನಾನು ಹೇಳುವುದೂ ಅದನ್ನೆ!

ಶ್ಯಾಮಣ್ಣ: ಇದು ಕರ್ಮ ಪ್ರಪಂಚ....ನಾವು ಶ್ರಮ ಪಡುತ್ತಿರಲೇ ಬೇಕು; ಸ್ವಾರ್ಥವಿಲ್ಲದೆ—

ನಾಗೇಶ: ಸಂದೇಹವೇನು ಶ್ಯಾಮಣ್ಣ? ನಿನ್ನ ನಿಃಸ್ವಾರ್ಥದ ಬುದ್ಧಿಯನ್ನು ಲೋಕಕ್ಕೆ ಪ್ರದರ್ಶಿಸಿರುವೆ. ಯಾರ ಹಿತಕ್ಕಾಗಿ ನೀನು ಹತ್ತೆಂಟು ಸಭೆಗಳಲ್ಲಿ ಗರ್ಜಿಸಿದುದು? ಯಾರ ಪ್ರಯೋಜನಕ್ಕಾಗಿ ಮೂಟೆಗಳ ಮಳೆಯನ್ನು ತಲೆಯ ಮೇಲೆ ಹೊತ್ತುದು? ನನಗರಿಯದೆ? ಹೀಗೆನ್ನುತ್ತಾ ನಾಗೇಶ ಕೈಗಡಿಯಾರವನ್ನು ನೋಡಿದ. ಘಂಟೆ ಹತ್ತಾಗುವವೆಯಾಗಿತ್ತು. "ಬಹಳ ವಿಳಂಬವಾಯಿತು ಪ್ರಭಾಕರ....ಇನ್ನು ಹೋಗಲೇ ಬೇಕು....ನಾಳೆ....ಗುರುಪುರದಲ್ಲಿ ಸ್ತ್ರೀಸಭೆ ಕೂಡುವುದು. ಪ್ರಚಂಡ ಸಭೆ ....ಕಾಮಾಕ್ಷಿ ಭಾಷಣ ಕೊಡುವಳೆಂದು ಜಾಹೀರು ಮಾಡಿದ್ದೇವೆ....ಇನ್ನು ತಮಗೆ ವೇದ್ಯವಾದಂತೆ" ಎಂದ.

ಕಾಮಾಕ್ಷಿ: "ಆಗಲಿ"—ಎಂದಳು. ನಾಗೇಶ ಹೊರಟುಹೋದ. ಆ ರಾತ್ರಿ ಪ್ರಭಾಕರನಿಗೆ ಸುಖನಿದ್ರೆಯು ಬರಲಿಲ್ಲ. ಗೊತ್ತು ಗುರಿಯಿಲ್ಲದೆ ಎಲ್ಲಿಗೊ ಯಾತ್ರೆ ಹೂಡಿದ್ದೇವೆ; ಇದರ ಪರಿಣಾಮವೇನು? ಎಂದು ಮನಸ್ಸಿನೊಳಗೇ ಯೋಚಿಸುತ್ತಾ ಬೆಳಗಾಯಿತು.

ಗಂಡಿಗಿರುವಷ್ಟೆ ಸ್ವಾತಂತ್ರ್ಯ ಹೆಣ್ಣಿಗಿದೆ; ಇಬ್ಬರೂ ತಂತಮ್ಮ ನೆಲೆಯನ್ನರಿತು ವ್ಯವಹರಿಸಬೇಕು. ಹೀಗೇಕೆ ಮಾಡಿದೆ? ಎಂದು ಕೇಳುವ ಅಧಿಕಾರ ಯಾರಿಗೂ ಇಲ್ಲ—ಎಂಬ ಸಿದ್ಧಾಂತದ ಮೇಲೆಯೆ ಗಂಡಹೆಂಡಿರಾದ ತಮ್ಮ ಜೀವನವು ಸ್ಥಿರವಾಗಿ ನಿಂತಿದೆ. ಇದರಿಂದ ಇದುವರೆಗೆ ಪಶ್ಚಾತ್ತಾಪಕ್ಕೆ ಕಾರಣವಾಗಲಿಲ್ಲ. ಇನ್ನೂ ಆಗದೆಂದು ಹಾರಯಿಸಬಾರದೇಕೆ?

ಪ್ರಭಾಕರ ಹಾಗೆಯೆ ಹಾರೈಸಿದ; ಆದರೂ ತನ್ನ ಅಭಿಪ್ರಾಯಗಳನ್ನು ನಿರ್ದಯವಾಗಿ ಒತ್ತರಿಸಿ ಬಿಟ್ಟಳಲ್ಲ....ಎಂದು ಎದೆಹುಳಿಯಾಗದೆ ಇರಲೂ ಇಲ್ಲ.

೧೩

ಸಾಯಂಕಾಲ ಆರು ಗಂಟೆಯ ಕಾಲಕ್ಕೆ ಗುರುಪುರದಲ್ಲಿ ಸೇರಬೇಕಾಗಿದ್ದ ಸಭೆಗೆ ಎಷ್ಟು ಮಹಿಳಾ ಮಣಿಯರು ಬರಬಹುದು? ಬಂದಿದ್ದರು? ಎಂಬುದು ಮುಖ್ಯವಿಷಯವಲ್ಲ. ಚುನಾವಣೆಯ ಸಭೆಗಳೆಲ್ಲ ಪ್ರಚಂಡ ಸಭೆಗಳೆ; ನೂರಾರು ಸಭೆಗಳು ಪ್ರತಿದಿನ ನಡೆದು ಭಾಮೆಯನ್ನು ಪ್ರತಿನಿಧಿಯಾಗಿ ಕಳುಹಿಸದಿದ್ದರೆ ಲೋಕಕ್ಕೆ ಭೀಕರ ಪ್ರಳಯ ಬರುವುದೆಂದು ಪತ್ರಿಕೆಗಳಲ್ಲಿ ಸಾರುವುದೇ ಮುಖ್ಯೋದ್ದೇಶ. ಅದು ನೆರವೇರುತ್ತಲೂ ಇತ್ತು.

ಆ ದಿನ ಐದು ಘಂಟೆಗೆ ಮಂಗಳೂರಿನಿಂದ ಕಾರಿನಲ್ಲಿ ಹೊರಟು ಐದುವರೆ ಗಂಟೆಗೆ ತಲುಪಿ, ಆರರಿಂದ ಎಂಟರ ವರೆಗೆ ಭಾಷಣದಲ್ಲಿ ಭೋರ್ಗರೆದು, ಎಂಟುವರೆಯ ಒಳಗೆ ಹಿಂದೆ ಬರಬಹುದೆಂದು ನಾಗೇಶ ತಿಳಿಸಿದ್ದ. ಭಾಮೆ--ಶ್ಯಾಮಣ್ಣ ನಾಗೇಶ—ಕಾಮಾಕ್ಷಿ— ಸಾಧ್ಯವಾದಲ್ಲಿ ಪ್ರಭಾಕರ--ಇಷ್ಟು ಮಂದಿ ಒಟ್ಟಾಗಿ ಒಂದೇ ಕಾರಿನಲ್ಲಿ ಹೋಗಬಹುದೆಂದು ಗೊತ್ತಾಗಿತ್ತು. ಪ್ರಭಾಕರನಿಗೆ ಮನಃಪ್ರವೃತ್ತಿಯಿರಲಿಲ್ಲ; ಎಂದ ಮೇಲೆ ಪ್ರವೃತ್ತಿಯಿದ್ದು ಹೋಗತಕ್ಕವರು ನಾಲ್ಕೆ ಜನ--ಒಂದೇ ಒಂದು ಧ್ಯೇಯಕ್ಕಾಗಿ ಹೋರಾಡುವ ಆ ನಾಲ್ಕು ಪವಿತ್ರ ಜೀವಿಗಳು!"

ಕಾರು ನಾಗೇಶನದೇ ಆದುದರಿಂದ, ಅವನ ಚಿಕಿತ್ಸಾ ಭವನದಿಂದಲೇ ದಂಡಯಾತ್ರೆ ಸಾಗುವುದೆಂದು ನಿಷ್ಕರ್ಷೆಯಾಗಿತ್ತು. ಕಾಲಕ್ಕೆ ಸರಿಯಾಗಿ ಎಲ್ಲರೂ ಹಾಜರಾದರು.

ಆ ಮಧ್ಯದಲ್ಲಿ ಒಂದು ಗಡಿಬಿಡಿ. ವಿರೋಧ ಪಕ್ಷದವರು ತಮ್ಮ ಕ್ಷೇತ್ರಗಳನ್ನು ಹಿಡಿಯುತ್ತಿದ್ದಾರೆ. ಬಂಟ್ವಾಳದಲ್ಲಿ ಹಿರಿಯ ನಾಯಕ ರೊಬ್ಬರು ಭಾಮೆಗೆ ಐನೂರು ಮತಗಳನ್ನು ಕೊಡಿಸುವುದಾಗಿ ವಾಗ್ದಾನ ಮಾಡಿದ್ದರು. ಈಗ ತಾನೇ ವಿರೋಧಿಗಳು ಆತನನ್ನು ಬಗಲಿಗೆ ಸೇರಿಸಿ ಕೊಳ್ಳುವುದರಲ್ಲಿದ್ದಾರೆ; ಎಂಬ ಜರೂರಿನ ವಾರ್ತೆ ಬಂತು. ಭಾಮೆಯೇ ಅಲ್ಲಿಗೆ ಹೋಗಬೇಕಾಯಿತು. ಬೇರೊಂದು ಬಾಡಿಗೆಯ ಕಾರನ್ನು ಪಡೆದು ಭಾಮೆಯೂ ಶ್ಯಾಮಣ್ಣನೂ ಆರಣರಂಗದತ್ತ ಅಭಿಮುಖರಾದರು.

ಗುರುಪುರಕ್ಕೆ ಹೊರಡಬೇಕು; ಹೊರಡುತ್ತೇನೆ; ಎನ್ನುವಷ್ಟರಲ್ಲಿ ನಾಗೇಶನ ಡ್ರೈವರ್ ನಾಗಪ್ಪನಿಗೆ ಕಠಿಣ ಶೀತ ಜ್ವರ; ಅವನು ಹೊರಡು ವುದು ಅಸಾಧ್ಯ. ನಾಗೇಶರಾಯರು ಸ್ವತಃ ಕಾರನ್ನು ನಡೆಸಿ ಗುರುಪುರ ಸನಾರಂಭದ ನಾಯಿಕೆಯಾದ ಕಾಮಾಕ್ಷಿಯನ್ನು ಅಲ್ಲಿಗೆ ಒಯ್ದು ಪುನಃ ಕರೆದುಕೊಂಡು ಬರಬೇಕಾಯಿತು.

ಹೊರಡುವಾಗ ಐದುವರೆ ಗಂಟೆ, ಇಷ್ಟರಲ್ಲಿಯೇ ಕತ್ತಲೆಯ ನೆರಳು ಇಳಿಯತೊಡಗಿತು. ಒಂಬತ್ತು ಮೈಲುಗಳನ್ನು ಹದಿನೈದೇ ನಿಮಿ ಷಗಳಲ್ಲಿ ದಾಟುವುದು ಸಾಧ್ಯವಾದುದರಿಂದ ತಡವಾಗಿ ತಲಪುವ ಹೆದರಿಕೆ ಇರಲಿಲ್ಲ. ಅಲ್ಲದೆ ಮುಂಗಾಮಲಿನ ವೀರರನ್ನು ಮೊದಲೇ ಕಳುಹಿಸಿದುದ ರಿಂದ ಭಾಷಣಕರ್ತೃಯರು ಬರುವಾಗ ಒಂದು ವೇಳೆ ತಡವಾದರೂ, ಸಭಿ ಕರನ್ನು ಸಂತುಷ್ಟರಾಗಿರಿಸುವುದಕ್ಕೆ ಬೇಕಾದ ಏರ್ಪಾಡುಗಳಾಗಿದ್ದವು.

ಹೊರಡುವಾಗ ನಾಗೇಶ "ಕಾಮಾಕ್ಷಿ! ಕ್ಷಮಿಸು....ನಾನೇ ಕಾರ್ ನಡೆಸಬೇಕಾಗಿದೆ. ಅಷ್ಟೇನೂ ಅನುಭವವಿಲ್ಲ. ಆದರೂ ಪ್ರಾಣಸಮೇತ ನಿನ್ನನ್ನು ಅಲ್ಲಿಗೆ ಸಾಗಿಸುವೆನೆಂಬ ಭರವಸೆ ಕೊಡುತ್ತೇನೆ" ಎಂದು ನಕ್ಕ.

ಕಾಮಾಕ್ಷಿಗೆ ಕ್ಷಮಿಸುವಷ್ಟು ವ್ಯವಧಾನವಿರಲಿಲ್ಲ. ತಾನು ಹೇಗೆ ಮಾತಾಡಬೇಕು? ನುಡಿಗಟ್ಟುಗಳು ಹೇಗಿರಬೇಕು? ಯಾವ ವಿಷಯಗಳನ್ನು ಮಂಡಿಸಬೇಕು? ಎಂಬ ಯೋಚನೆಯಲ್ಲಿಯೆ ಹುಬ್ಬುಗಂಟಾಗಿತ್ತು. ನಾಗೇಶನ ಪ್ರಶ್ನೆಯೇನೆಂಬುದೇ ಅವಳಿಗೆ ತಿಳಿದಿರಲಿಲ್ಲ. ಕಿವಿಗೇನೋ ಕೇಳಿದಂತಾಯಿತು. ಏನೋ ಉತ್ತರಕೊಡಬೇಕೆಂದು ತೋರಿತು. "ನೀವಿರುವಾಗ ಭೀತಿಯೇನು?" ಎಂದಳು....

ಶಂಖವೂದುತ್ತ ಕಾರು ಹೊರಟಿತು. ಏರುತಗ್ಗಿನ ರಸ್ತೆಯಲ್ಲಿ ಕುಣಿದು ಕುಣಿದು ಹಾರಿ ಓಡುತ್ತಿದ್ದ ಕಾರು ಹತ್ತೇ ನಿಮಿಷಗಳಲ್ಲಿ ಗುರಿಯನ್ನು ಸೇರಬಹುದೇನೋ ಎಂದು ಕಾಮಾಕ್ಷಿಗೆ ತೋರಿತು. ನಾಗೇಶರಾಯನ ಹಸ್ತಕೌಶಲಕ್ಕೆ ಆಹುತಿಯಾದ ಆ ಬಡ ಯಂತ್ರ ವಿಶಾಲವಾದ ಬಯಲುನೆಲವನ್ನು ಸೇರಿ ಪ್ರಚಂಡ ವೇಗದಿಂದ ಧಾವಿಸಿ ಅಕಸ್ಮಾತ್ ದಾರಿ ತಪ್ಪುವ ಲಕ್ಷಣ ಕಂಡುಬಂತು--ಕಾಮಾಕ್ಷಿಗಲ್ಲ--ನಾಗೇಶರಾಯರಿಗೆ....

"ರಾಮಾರಾಮಾ! ನಾವು ಬದುಕಿದೆವು" ಎನ್ನುತ್ತಾ ರಸ್ತೆಬಿಟ್ಟು ಹತ್ತು ಮಾರು ದೂರಕ್ಕೆ ಸಾಗಿದ್ದ ಕಾರಿನಿಂದ ನಾಗೇಶರಾಯ ಕೆಳಗಿಳಿದು "ಕಾಮಾಕ್ಷಿ! ಶರೀರಕ್ಕೇನೂ ಆಗಲಿಲ್ಲವಷ್ಟೆ?" ಎಂದು ಪ್ರಶ್ನಿಸಿದ.

ಕಾಮಾಕ್ಷಿ ತನ್ನ ಆಲೋಚನಾ ನಿದ್ರೆಯಿಂದ ಎಚ್ಚತ್ತು, "ಏನಾಗಬೇಕಿತ್ತು? ನೀವು ಏನನ್ನು ನಿರೀಕ್ಷಿಸಿದಿರಿ?"—ಎಂದಳು.

"ಏನೂ ಇಲ್ಲ. ಕಾರು ದಶಾವತಾರದ ನರ್ತನಮಾಡಿ ಪಕ್ಕನೆ ನಿಂತುಬಿಟ್ಟಿತು. ತಲೆ ಜಜ್ಜಿಹೋಯಿತೇನೊ"

"ಅದರ ದಶಾವತಾರವನ್ನು ನಾನು ನೋಡಲೇ ಇಲ್ಲವಷ್ಟೆ!"

"ನನ್ನ ಚಾತುರ್ಯದಿಂದ ಅವಗಡವಾಗಲಿಲ್ಲ...."

"ಸರಿ; ಬಹಳ ಚತುರರು ನೀವು....ಇದೇ ಚಾತುರ್ಯದಿಂದ ಗುರುಪುರಕ್ಕೆ ತಲಪಿಸಿ ಬಿಡಿ."

"ನನ್ನಿಂದ ಸಾಧ್ಯವಾದರೆ!" ಎಂದು ಆಗಲೇ ನಸುಗತ್ತಲೆಯಾಗಿದ್ದುದರಿಂದ ಸ್ವಲ್ಪಕಾಲ ಕೈಯಲ್ಲಿದ್ದ ವಿದ್ಯುದ್ದೀಪವನ್ನು ಉರಿಸಿ, ಯಂತ್ರದ

ಮುಖಾವರಣವನ್ನು ಕಳಚಿ ಶೋಧಿಸಿದಂತೆ ನಟಿಸಿ "ಸಾಧ್ಯವಿಲ್ಲ! ಯಂತ್ರವು ಮುಷ್ಕರ ಹಿಡಿದಿದೆ"—ಎಂದು ಅಲ್ಲೇ ನಿಂತುಬಿಟ್ಟ.

ಕಾಮಾಕ್ಷಿ: "ಪೇಚಾಟವಾಯಿತಲ್ಲ!" ಎಂದು ಉದ್ಗರಿಸಿದಳು.

ನಾಗೇಶ: ಪೇಚಾಟಕ್ಕೇನು ಕಾರಣ ಕಾಮಿ....ಸಭೆ....ಅದರ ಹಣೆ ಬರಹ ಅಷ್ಟೆ ಎಂದು ಭಾವಿಸೋಣ. ನಿನ್ನ ಮಧುರ ಧ್ವನಿಯನ್ನು ಕೇಳುವ ಭಾಗ್ಯ ಅದಕ್ಕಿಲ್ಲ.

ಕಾಮಾಕ್ಷಿ: ವಿಹಾರಕ್ಕಾಗಿ ಇಲ್ಲಿಗೆ ಬಂದಿರುವೆನೆಂದು ಭಾವಿಸಿದ್ದೀರಾ?

'ನೀನು ಇಲ್ಲದಿರುತ್ತಿದ್ದರೆ ಹೀಗೆ ಭಾವಿಸುವುದಕ್ಕೆ ಕಾರಣವಿರುತ್ತಿರಲಿಲ್ಲ' ಎಂದು ತನ್ನ ಮುಖದಲ್ಲಿ ವಿಕಟಹಾಸವನ್ನು ಕುಣಿಸುತ್ತಾ ಕಾರಿನ ಮುಂದೆ ನಿಂತಿದ್ದ ನಾಗೇಶ ಕಾಮಾಕ್ಷಿಯ ಆಸನದ ಬಳಿಗೆ ಸೇರಿದ. ಅವನ ಭಾವವೇನೆಂದು ಕೇಳಬೇಕಾಗಿರಲಿಲ್ಲ; ಕಣ್ಣು ಹೇಳುತ್ತಿತ್ತು.

ಕಾಮಾಕ್ಷಿ: ಮಿಸ್ಟರ್ ನಾಗೇಶರಾಯರೇ! ಈಗ ನನ್ನ ಮುಂದೆ ನಿಂತಿರುವುದು ನಾಗೇಶರಾಯರ ಹೊರಗಿನ ವ್ಯಕ್ತಿತ್ವವೆ? ಒಳಗಿನದೆ?

ನಾಗೇಶ: ಹಾಗೆಂದರೇನು ಕಾಮಿ? ಆತನ ಒಳಗನ್ನು ಕಂಡಿರಲಿಲ್ಲವೇ?....ಒಮ್ಮೆ ನಿನ್ನನ್ನು ಕಾಮಿಯೆಂದೇ ಕರೆಯುತ್ತಿದ್ದೆನಲ್ಲ....ಕಾಮಿ ಎಂಬವಳನ್ನು ಕಾಮಾಕ್ಷಿಯಾಗಿ ಮಾರ್ಪಡಿಸಿ ಕರೆಯಬೇಕಾದಾಗ ವ್ಯಕ್ತಿತ್ವವೂ ಬೇರ್ಪಟ್ಟಿತು.

ಕಾಮಾಕ್ಷಿಗೆ ರೋಷಾವೇಶವುಂಟಾಯಿತು. "ನಾಗೇಶರಾಯರೆ! ನಿಮ್ಮ ದೌರ್ಜನ್ಯವು ಈ ಮಟ್ಟಿನದೆಂದು ಇದು ವರೆಗೆ ತಿಳಿದಿರಲಿಲ್ಲ. ಅತ್ತನಡೆಯಿರಿ; ದಯಮಾಡಿ ಅಡ್ಡನಿಲ್ಲಬೇಡಿರಿ"—ಎನ್ನುತ್ತಾ ಕಾರಿನ ಬಾಗಿಲನ್ನು ತೆಗೆದು ಕೆಳಗೆ ಹಾರಿದಳು. ನಾಗೇಶ ದಿಗ್ಭ್ರಾಂತನಾದ. ಮಾತಿನಲ್ಲಿ ಒಂದಿಷ್ಟು ರಸಬೆರಸಿ ಆಡಿದುದು ತಪ್ಪಾಯಿತೆಂದೂ, ಈಗ, ತನ್ನನ್ನು ಹೆಗ್ಗಣವೆಂದು ತಾತ್ಸಾರಮಾಡಿದ ಆ ಹಿಂದಿನ ಸಿಡುಕು ಗಾರ್ತಿಯೇ ತನ್ನ ಮುಂದೆ ನಿಂತಿರುವಳೆಂದೂ ಭಾವಿಸಿ "ಕಾಮಾಕ್ಷಿ! ಇಷ್ಟೆಲ್ಲ ಓದಿತಿಳಿದವಳಿಗೆ ಮಾತಿನ ಅರ್ಥವಾಗುವುದಿಲ್ಲ....ಎಂಬುದನ್ನೆಣಿಸಿ ಬಹಳ ವ್ಯಸನವಾಗುತ್ತದೆ" ಎಂದು ಮುಖ ಸಪ್ಪೆಮಾಡಿ ದೂರನಿಂತ. ಶರತ್ಕಾಲದ ಶುಭ್ರಮೇಘ

ದಂತಿದ್ದ ಆಕೆಯ ಶರೀರವು ಕೋಪದ ಮಿಂಚನ್ನು ಕಾರುತ್ತಿದ್ದಂತೆ ಭಾಸವಾಗಿ ನಾಗೇಶನ ಹೃದಯವು ಕಂಪಿಸಿತು.

ನಾಗೇಶ: "ನಾವು ಅಪರಿಚಿತರಲ್ಲ;....ಒಂದು ನೋರೆಯನ್ನು ನೋಡಿದರೆ ಸಮೀಪದ ಸಂಬಂಧಿಕರು. ಸಲಿಗೆಯಿಂದ ಆಡಿದಮಾತು ಇಷ್ಟು ಅನಾಹುತಕ್ಕೆ ಕಾರಣವಾಗುವುದೆಂದು ತಿಳಿದಿದ್ದರೆ..........."

"ಸಲಿಗೆಗೂ ಕಾಲದೇಶಗಳಿವೆಯಲ್ಲ?" ಎನ್ನುತ್ತಾ ಕಾಮಾಕ್ಷಿ ರಸ್ತೆಯ ಕಡೆಗೆ ಬಂದು ಅತ್ತಿತ್ತ ಓಡಾಡುವ ಬಸ್ಸುಗಳೇನಾದರೂ ಬರುವುವೇ? ಎಂದು ನಿರೀಕ್ಷಿಸುತ್ತಿದ್ದಳು. ಸಿನಿಮಾಕ್ಕೆ ಹಿಂದೆ ಒಂದರ ನಾದ ಕೇಳಿತ್ತು. ನಿರೀಕ್ಷಿಸಿ ಬಹುಕಾಲ ನಿಲ್ಲುವುದೂ ಆಕೆಗೆ ಹಿತಕರವಾಗಿ ತೋರಲಿಲ್ಲ. ಓಡುವುದೇ? ಅರ್ಥವಿಲ್ಲ. ಕರ್ತವ್ಯವೇನೆಂದು ವಿಚಾರಿಸುತ್ತಿರುವಾಗ ಡಾ. ನಾಗೇಶರಾಯರು ಕಾರಿನ ಹಿಂದೆ ಮುಂದೆ ಸುತ್ತುತ್ತಾ ಅಲ್ಲಲ್ಲಿ ಇಣಿಕಿ ನೋಡಿ "ಕಾಮಾಕ್ಷಿ....ಕಾರು ಸರಿಯಾಯಿತು.....ನಡೆಯುತ್ತಿದೆ ನೋಡು...." ಎಂದು ತಾವೇ ಮುಂಗಡೆ ಕುಳಿತು ತಿರಿಗಿಸುತ್ತಾ ಬಂದರು. ಕಾಮಾಕ್ಷಿಯ ಸಿಟ್ಟು ಬಿಸಿ ಕೆಂಡವಾಗಿತ್ತು. "ನನ್ನನ್ನು ಏನೆಂದು ಭಾವಿಸಿದಿರಿ ಮಿಸ್ಟರ್ ನಾಗೇಶ!" ಎಂದು ಪ್ರಶ್ನಿಸಿದಳು. "ಏನೂ ಇಲ್ಲ. ಇಪ್ಪತ್ತನೆಯ ಶತಮಾನದ ಸಾಮಾನ್ಯ ತರುಣಿಯೆಂದಿಷ್ಟೆ ಭಾವಿಸಿದ್ದೇನೆ" "ಇದೇ ನೀವು ಮಾಡಿದ ಅಪರಾಧ" ಎನ್ನುತ್ತಾ ಕಾಮಾಕ್ಷಿ ನಾಗೇಶನಲ್ಲಿ "ಹಿಂಬದಿ ಕುಳಿತಿರಿ; ಕಾರನ್ನು ನಾನೇ ನಡೆಸುತ್ತೇನೆ" ಎಂದು ಆಜ್ಞೆ ಕೊಟ್ಟಳು.

ನಾಗೇಶ: ನೀನೆ ನಡೆಸುತ್ತಿ ಯಮಸದನಕ್ಕೆ?

ಕಾಮಾಕ್ಷಿ: ನೇರಾಗಿ ನಿಮ್ಮ ಚಿಕಿತ್ಸಾಗೃಹಕ್ಕೆ....ಅದೇ ನಮ್ಮ ಯಮಸದನ ಎಂದು ಕೋಪವನ್ನಡಗಿಸಿ ಹಾಸ್ಯಕ್ಕೆ ಪ್ರಯತ್ನಿಸಿದಳು.

ನಾಗೇಶ: ಹಾಗಾದರೆ ಸಭೆಯ ಗತಿಯೇನು?

ಕಾಮಾಕ್ಷಿ: ಅದಕ್ಕೆ ನನ್ನ ಮಧುರವಾಣಿಯನ್ನು ಕೇಳುವ ಪುಣ್ಯವಿಲ್ಲ ಎಂದು ನೀವೇ ಹೇಳಿದ್ದಿರಲ್ಲ....ಹೀಗೆ ಆಡುತ್ತಿದ್ದಂತೆಯೆ ಕಾಮಾಕ್ಷಿ ಕಾರಿನ ಮುಮ್ಮಣೆಯನ್ನೇರುವುದಕ್ಕೆ ಬಂದಳು. ನಖಶಿಖಾಂತವಾಗಿ

ಬೆವರುತ್ತಿದ್ದ ನಾಗೇಶ, ಸೂತ್ರದ ಬೊಂಬೆಯಂತೆ ತಾನಾಗಿ ಹಿಂಬದಿಯ ಆಸನದಲ್ಲಿ ಕುಳಿತುಕೊಂಡ....ಕಾಮಾಕ್ಷಿ ಕಾರನ್ನು ತಿರುಗಿಸಿ ರಸ್ತೆಗೆ ತಂದಳು. "ನಾಗೇಶರಾಯರೆ! ನೀವು ಕಾರು ನಡೆಸಿದರೆ ಅದು ಬಯಲಾಟದ ನರ್ತನ ಮಾಡುತ್ತದೆಯಲ್ಲವೆ? ನೋಡಿ; ನಾನು ನಡೆಸಿದರೆ ಹೇಗೆ ಕಥಕ್ಕಳಿ ನರ್ತನಮಾಡಿ ನೇರಾಗಿ ಉದ್ದಿಷ್ಟ ಸ್ಥಳಕ್ಕೆ ಹೋಗುವುದೆಂಬುದನ್ನು ನೋಡುವಿರಿ"—ಎನ್ನುತ್ತಾ ಮಂಗಳೂರಿನ ದಾರಿಯನ್ನೇ ಹಿಡಿದಳು.

ಒಂಬತ್ತು ಗಂಟೆಗೆ ಮರಳಿ ಬರಬೇಕಾಗಿದ್ದವರು ಒಂದು ಗಂಟೆ ಮುಂಚಿತವಾಗಿಯೆ ಬಂದು ಸೇರಿದರು.

ತನ್ನ ಜೀವನದಲ್ಲಿ ಇದೊಂದು ದೊಡ್ಡ ಘಟನೆ—ಎಂದು ನಾಗೇಶನು ಭಾವಿಸುತ್ತಿದ್ದ; ಕಾಮಾಕ್ಷಿಯೂ ಭಾವಿಸುತ್ತಿದ್ದಳು.

೧೪

ಚುನಾವಣೆಯ ಫಲಿತಾಂಶ ಹೊರಬಿದ್ದಿತು. ಬರಿಯ ಐನೂರು ಮತಗಳು ಕಡಿಮೆಯಾಗಿ ಭಾಮ ಸೋತಿದ್ದಳು. ಬರಿಯ ಐನೂರು ಮತಗಳು! ಗುರುಪುರದಲ್ಲಿ ಸಭೆಜರಗಿ ಕಾಮಾಕ್ಷಿ ಭಾಷಣಕೊಟ್ಟಿದ್ದರೆ, ಸಂಗ್ರಾಮಪತ್ರಿಕೆಯು ಅಂತಃಕರಣ ಪೂರ್ವಕವಾಗಿ ಮರ್ಮವೇಧಕವಾಗಿ ಒಂದು ಗ್ರಲೇಖನ ಪ್ರಕಟಿಸಿದ್ದರೆ, ಶ್ಯಾಮಣ್ಣ ಒಂದು ದಿವ್ಯವಾದ ವ್ಯಂಗ್ಯಚಿತ್ರವನ್ನು ಕೊಟ್ಟು ಇದಿರಾಳಿಯನ್ನು ಮರ್ಕಟಸ್ಥಾನಕ್ಕೆ ಇಳಿಸಿದ್ದರೆ, ಹೀಗೆಂದೂ ಆಗುತ್ತಿರಲಿಲ್ಲ. ಇಷ್ಟು ಮತಗಳಾದರೂ ದೊರೆತುವಲ್ಲ....ಇದು ಭಾಮೆಯ ಆತ್ಮಶಕ್ತಿಯ ಪ್ರಭಾವ—ನಾಗೇಶರಾಯ ತನುಮನೋಧನವನ್ನು ಧಾರಾದತ್ತವಾಗಿ ಕೊಟ್ಟುದರ ಪರಿಣಾಮ. ಹತ್ತು ಜನ ನಿಸ್ಪೃಹರು ಊರಿಂದೂರಿಗೆ ಓಡಾಡಿ ಶ್ರಮಪಟ್ಟುದರ ಫಲ. ಉಳಿದವರೇನು ಮಾಡಿದ್ದಾರೆ? ಹೀಗೆ ಪ್ರಶ್ನೆಗಳೆದ್ದುವು.

ಭಾಮಾದೇವಿಗೆ ಅತ್ಯಂತ ವ್ಯಸನವಾಯಿತು. ಅವತಾರ ಪುರುಷರು ಈ ಪ್ರಪಂಚದಕ್ಕೆ ಇಳಿದುಬರುವ ಠೀವಿಯಲ್ಲಿ ಮಿಸ್ ಎಸ್. ಭಾಮೆ

ಮಂಗಳೂರಿನ ನರಕಕ್ಕೆ ಇಳಿದುಬಂದು ಇದನ್ನು ಸ್ವರ್ಗದ ಮಟ್ಟಕ್ಕೆ ಏರಿಸಿ ಬಿಡಬೇಕೆಂದು ಸಂಕಲ್ಪ ಮಾಡಿದ್ದಳು. ನಾಡಿಗೆ ಪುಣ್ಯವಿಲ್ಲ. ಜನರಿಗೆ ಯೋಗ್ಯತೆಯಿಲ್ಲ. ಇಂಥವರ ಮಧ್ಯದಲ್ಲಿ ಅವತಾರಿ ವ್ಯಕ್ತಿಗಳಾದರೂ ಏನು ಮಾಡಬಹುದು? ಅವಳು ಆಕಸ್ಮಿಕವಾಗಿ ಬಂದಂತೆ, ಆಕಸ್ಮಿಕವಾಗಿಯೇ ಹೊರಟು ಹೋದಳು. ಹೋಗುವ ಮುಂಚಿನ ದಿನ ತನ್ನ ಗೆಳೆಯರನ್ನೆಲ್ಲ ಮನೆಗೆ ಕರೆದು ಲಘೂಪಹಾರದಿಂದ ಸತ್ಕರಿಸಿ ಲಘುತರಹಾಸ್ಯೋಕ್ತಿಗಳಿಂದ ಪ್ರಸನ್ನಗೊಳಿಸಿ ಪ್ರತಿಯೊಬ್ಬರಿಗೂ ಹಸ್ತಲಾಘವವಿತ್ತು. ಕೃತಜ್ಞತೆಯನ್ನು ಸಮರ್ಪಿಸಿ ಕಳುಹಿಸಿಕೊಟ್ಟಳು. ನಾಗೇಶರಾಯನಿಗೆ ಉಪಚಾರೋಕ್ತಿಗಳು ಕೂಡ ಬೇಕಾಗಿರಲಿಲ್ಲ. ಪ್ರದರ್ಶನದ ಪ್ರಧಾನಸೂತ್ರಧಾರರೇ ಅವರು. ಉಳಿದವರಲ್ಲಿ ಶ್ಯಾಮಣ್ಣನಿಗೆ ಹಾರ್ದಿಕವಾದ ಅಭಿನಂದನೆ ಸಲ್ಲಬೇಕಾಗಿತ್ತು; ಸಂದಿತು. ಕಾಮಾಕ್ಷಿಯ ಉಪಕಾರ ಸ್ಮರಣವಾಯಿತು. ಭಾಮೆ ವಿಶೇಷವಾದ ಹೊಗಳಿಕೆಯಿಂದ, ಅವಳು ಸ್ತ್ರೀವರ್ಗಕ್ಕೆ ಮಾಡಿರುವ, ಮಾಡುತ್ತಿರುವ, ಇನ್ನು ಮಾಡಲಿರುವ ಸೇವೆಯನ್ನು ಕೊಂಡಾಡಿದಳು. ಪ್ರಭಾಕರನು ಸಹ ಅಭಿನಂದನಕ್ಕೆ ಪಾತ್ರವಾಗುತ್ತಿದ್ದ. ಆದರೆ ಅವನು ಭಾಮೆಯ ಮನೆಯ ಅಂಗಳವನ್ನೂ ಸೋಕದಿದ್ದುದರಿಂದ ಅಪ್ರತ್ಯಕ್ಷವಾಗಿ ಕಾಮಾಕ್ಷಿಯ ಮೂಲಕ ಆ ಅಭಿನಂದನ ಸಂದಿತು. ಮಂಗಳೂರಿನ ಆಕಾಶದಿಂದ ಉಜ್ವಲಜ್ಯೋತಿಯೊಂದು ತೊಲಗಿ ಹೋಯಿತು. ನಾಗೇಶನ ಜೀವನದ ದೀಪವೊಂದು ಸದ್ಯಕ್ಕೆ ಆರಿಹೋಯಿತು.

ಚುನಾವಣೆಯ ಜ್ವರ ಅತಿರೇಕಗೊಂಡಿದ್ದಾಗ ಸ್ಥಳೀಯ ಪತ್ರಿಕೆಗಳಲ್ಲಿ ಗುರುಪುರದ ಸಭಾ ಸಮಾಚಾರವು ಒಗಟಿನ ರೀತಿಯಲ್ಲಿ ಪ್ರಕಟವಾಗಿತ್ತು. ಅಲ್ಲಿ ಸಭೆ ಜರಗಲಿಲ್ಲ. ಮೂರು ಮೈಲು ದೂರದ ಬಯಲು ನೆಲದಲ್ಲಿ ಆ ಸಭೆಯನ್ನು ಜರಗಿಸಬೇಕಾದ ಪ್ರಸಂಗ ಬಂತೆಂದು ಒಂದು ಪತ್ರಿಕೆ. ಭಾಷಣಕರ್ತರೂ ಸಭಿಕರೂ ಕಾರಿನಲ್ಲಿಯೇ ಅದರ ಸುತ್ತಲಿನ ವಠಾರದಲ್ಲಿಯೇ ನಿಂತು ಭಾಷಣಕೊಟ್ಟರು—ಕೇಳಿದರು—ಎಂದು ಇನ್ನೊಂದು ಪತ್ರಿಕೆ. "ಸಾಯಂಕಾಲೇ ವನಾಂತೇ ಕುಸುಮಿತ ಸಮಯೇ" ಆ ಸಭೆ

ಜರಗಿದುದು ಎಂದು ರಸಿಕಮನೋರಂಜನ; ಪ್ರಚಂಡ ಸಭೆ ಜರಗಿತು; ಭಾಮಾದೇವಿಗೆ ಮತ ಕೊಡುವುದಾಗಿ ನೂರಾರು ಮಂದಿ ಮಹಿಳಾಮಣಿಯರು ಆವೇಶದಿಂದ ಪ್ರತಿಜ್ಞೆತೊಟ್ಟರು—ಎಂದು ಸಂಗ್ರಾಮದಲ್ಲಿ ಪ್ರಕಟವಾಗಿತ್ತು. ಸಂಗ್ರಾಮದಲ್ಲಿ ಈ ರೀತಿ ಉದ್ಘೋಷಿಸಲ್ಪಟ್ಟ ಮತದಾರರ ಸಭೆಯ ಸಮಾಚಾರ ಇತರ ಪತ್ರಿಕೆಗಳಲ್ಲಿ ಒಗಟಾಗಿ ಕಾಣಿಸಿದುದೇಕೆ? ಎಂಬುದಕ್ಕೆ "ರಸಿಕರು" ನಾನಾ ರೀತಿಯಲ್ಲಿ ಅರ್ಥಕಲ್ಪಿಸಿಕೊಂಡರು.

ಪ್ರಭಾಕರ ಇದನ್ನೆಲ್ಲ ಓದಿ ಪತ್ರಿಕೆಗಳನ್ನು ನೆಲಕ್ಕೆ ಬಿಸುಟ. ಕಾಮಾಕ್ಷಿ ಹೃದಯದ ಉರಿನಂಜನ್ನು ಕಣ್ಣಿನಿಂದ ತುಟಿಯಿಂದ ನಿಟ್ಟುಸಿರಿನಿಂದ ಕಾರತೊಡಗಿದಳು. ಶ್ಯಾಮಣ್ಣ ನಕ್ಕ—ನಮ್ಮ ಸಂಪಾದಕರ ನೋಟವೆಷ್ಟು ಕಲುಷಿತವಾದುದು? ಪತ್ರಿಕೆಗಳಲ್ಲಿ ಬಂದುದರಿಂದ, ಸಾರ್ವಜನಿಕ ಕಾರ್ಯಕರ್ತರನ್ನು ನಿಂದಿಸಿ ಅಪಹಾಸ್ಯಕ್ಕೀಡು ಮಾಡಬಯಸುವವರು ಮೂಢ ಜಂತುಗಳಲ್ಲವೆ?

ಕೇಶವಯ್ಯನವರಲ್ಲಿಗೆ ಯಾರೋ ಒಬ್ಬ ವಾಚಕರು ಪತ್ರಿಕೆಯ ದಫ್ತರನ್ನು ಹಿಡಿದುಕೊಂಡು ಬಂದು—ನೋಡಿರಯ್ಯ ಚುನಾವಣೆಯ ಗದ್ದಲವನ್ನು—ಎಂದು ಸಂಬಂಧಪಟ್ಟ ಪಂಕ್ತಿಗಳನ್ನಷ್ಟೇ ಎತ್ತಿತೋರಿಸಿ ಅವರ ಹೃದಯದಲ್ಲಿ ಯಾವ ಪರಿಣಾಮವಾಗಬೇಕೋ ಅದನ್ನು ಉಂಟು ಮಾಡಿಯೇ ಬಿಟ್ಟರು. "ಅಯ್ಯೋ ಮಗಳೆ....ನೀನೂ ಹೀಗೆ ನೀಕರಿಸುವ ನಾಲಗೆಗಳ ಹೊಡೆತಕ್ಕೆ ಈಡಾಗಬೇಕಾಯಿತೇ?" ಎಂದು ಹಣೆಯನ್ನು ಹೊಡೆದುಕೊಂಡರು. ತಮ್ಮ ಕುಲದಲ್ಲಿ ಹುಟ್ಟಿದ್ದ ಪುನೀತ ಮಹಾ ಪುರುಷರಿಗೆಲ್ಲ ಅಪಮಾನವಾಯಿತು; ತಮಗೆ ಮಾನ ಭಂಗವಾಯಿತು; ಇಷ್ಟೆಲ್ಲ ಕಾಮಾಕ್ಷೀ ಪ್ರಭಾಕರರ ಅವಿವೇಕದ ಫಲ! ಮಿಂಚಿಹೋದುದಕ್ಕೆ ಚಿಂತಿಸಿ ಫಲವೇನು?

ಹೀಗೆ ವ್ಯಸನಪಡುವ ಹವ್ಯಾಸಕ್ಕೆ ಹೋಗದವನು ನಾಗೇಶನು ಮಾತ್ರ. ಸಾರ್ವಜನಿಕ ರಂಗದಲ್ಲಿ ವೇಷಕಟ್ಟಿ ಕುಣಿಯುವವರು ಇಂತಹ ಎಷ್ಟು ಅಪವಾದಗಳನ್ನು ಸಹಿಸಬೇಕೋ ಬಲ್ಲವರಾರು?

"ಕಾಮಾಕ್ಷಿ! ನಾನು ಹೆಗ್ಗಣವಲ್ಲವೆ? ಅಲ್ಲವೇ?" ಎಂದವನು ಮನಸ್ಸಿನೊಳಗೇ ಹಲ್ಲು ಕಡಿಯುತ್ತಿದ್ದನೋ ಏನೋ! ಮುಖದಲ್ಲಂತೂ ಯಾವ ವಿಕಾರವೂ ಗೋಚರಿಸುತ್ತಿರಲಿಲ್ಲ.

## ೧೫

ಮೋಟರ್‌ಕಾರು ಎಷ್ಟು ಉತ್ತಮವಾಗಿದ್ದರೂ ಒಮ್ಮೊಮ್ಮೆ ತಡೆದು ನಿಂತು ಮುಷ್ಕರ ಹಿಡಿಯುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಜಡಸಂಪ್ರದಾಯಪ್ರಿಯರಲ್ಲದ ಸ್ತ್ರೀಪುರುಷರು ಒಂದೇ ಕಾರಿನಲ್ಲಿ ಸ್ವಲ್ಪ ದೂರ ಪ್ರಯಾಣ ಮಾಡುವುದರಲ್ಲಿಯೂ ಆಕ್ಷೇಪಕ್ಕೆ ಎಡೆಯಿಲ್ಲ. ಸ್ತ್ರೀಪುರುಷರ ಸಮಾನತೆಯನ್ನು ಒಪ್ಪಿಕೊಂಡ ಈ ಯುಗದಲ್ಲಿ ಹೆಣ್ಣಾಗಿ ಹುಟ್ಟಿದವಳು, ಭಾಷಣವೇದಿಕೆಯನ್ನೇರುವುದು ಮಹಾ ಪಾಪವೆ? ಗುರುಪುರದ ಸಭೆಯಿಂದು ಜನರಿಷ್ಟು ಗದ್ದಲ ಮಾಡುತ್ತಿರುವರಲ್ಲ....ಅಪಹಾಸ್ಯ ಮಾಡುತ್ತಿರುವರಲ್ಲ....ನಮ್ಮ ಸುತ್ತಲಿರುವ ಚಿಕ್ಕ ಲೋಕವು ಇನ್ನೂ ತನ್ನ ಪ್ರಾಚೀನತೆಯ ಜಾಡ್ಯವನ್ನು ಬಿಟ್ಟು ಬಲು ಮುಂದುವರಿಯಲಿಲ್ಲ. ಇಂತಹ ನೀಚ ಮನೋವೃತ್ತಿಯ ಲೋಕದ ಮಾತಿಗೆ ಕಿವಿಕೊಡುವುದೇಕೆ?

ಕಾಮಾಕ್ಷಿಗೆ ಈ ವಿಷಯದಲ್ಲಿ ಸಂದೇಹವಿಲ್ಲ. ಕ್ರೂರಪ್ರಾಣಿಯನ್ನು ಪಳಗಿಸುವ ವಿಧಿಯಲ್ಲಿ ಅನೇಕ ವೇಳೆ ಆ ಪ್ರಾಣಿಯ ರೋಷಹಿಂಸೆಗಳಿಗೆ ಈಡಾಗಬೇಕಾಗುತ್ತದೆ. ಸರ್ಕಸ್ಸಿನ ಸಿಂಹಕ್ಕೂ ಈ ಸಮಾಜಕ್ಕೂ ಭೇದವೇನು? ಇಷ್ಟು ಅಲ್ಪ ವಿಷಯಕ್ಕಾಗಿ ಚಾಳಿಸುವ ಸಮಾಜಕ್ಕೆ ಸರ್ಕಸ್ಸಿನ ಸಿಂಹ ಎಂದು ಹೆಸರಿಡುವುದೂ ತಪ್ಪು. ಇದಿರಿದಿರು ಬಂದು ನಿಂತು ಗರ್ಜಿಸುವ ಶಕ್ತಿ ಅದಕ್ಕಿಲ್ಲ. ತಿನ್ನುವೆನೆಂದು ಹಾರಿಬರುವ ಸಾಮರ್ಥ್ಯವಿಲ್ಲ. ಇದು ಕಪಿ....ಗೂಡು ಸೇರಿದ ಕಪಿ....

ಈ ವಿಷಯದಲ್ಲಿ ಅಭಿಪ್ರಾಯವು ಖಂಡಿತವಾಗಿದ್ದರೂ ತನ್ನನ್ನು ಆ ದಿನದ ಸಭೆಗೆ ಎಳೆದ ವ್ಯಕ್ತಿಗಳ ಚರ್ಯೆ ಒಂದಿಷ್ಟು ಅನುಮಾನವನ್ನೆಬ್ಬಿಸಿತು. ನಾಲ್ಕು ಜನ ಒಂದಾಗಿ ಹೋಗಬೇಕೆಂದು ಸಂಕಲ್ಪಿಸಿದ್ದರು. ಕೊನೆಯ ಗಳಿಗೆಗೆ ಶ್ಯಾಮಣ್ಣ—ಭಾಮಾದೇವಿಯರು ಅತ್ತ ಸಾಗಿದರು. ಹೊರಡುವ ಕಾಲಕ್ಕೆ ನಾಗೇಶನ ಡ್ರೈವರನಿಗೆ ವಿಚಿತ್ರವಾದೊಂದು ಅಸ್ವಾಸ್ಥ್ಯ. ಈ ಅಸ್ವಾಸ್ಥ್ಯದ ಹಿಂದೆ ನಾಗೇಶನ ದುರ್ಭಾವನೆ ಇಣಿಕಿ ನೋಡುತ್ತಿದೆಯೆ? ಕಾರು ಫಕ್ಕನೆ ನಿಂತುದು....ಅನಂತರ ನಾಗೇಶನ ಹಾವಭಾವ ಭಂಗಿ....

ಮಾತು.......ಒಂದು ಇನ್ನೊಂದಕ್ಕಿಂತ ಸ್ಫುಟತರವಾಗಿ ಕಾಣಿಸಿಕೊಂಡು ನಾಗೇಶನ ಅಂತರಂಗವು ಶುಚಿಯಾಗಿರಲಿಲ್ಲ; ಎಂಬುದನ್ನು ಸ್ಪಷ್ಟಗೊಳಿಸಿ ತ್ತೆಂಬುದರಲ್ಲಿ ಇನ್ನೇಕೆ ಸಂದೇಹ? ಶ್ಯಾಮಣ್ಣ ಕೊನೆಯ ನಿಮಿಷದಲ್ಲಿ ತಪ್ಪಿಸಿಕೊಂಡುದಾಗಿ ಇರಲಾರದೆ? ಭಾಮೆಗೆ ಜರೂರಿನ ಕಾರ್ಯವಿದ್ದಿ ತೆಂಬುದು ಒಪ್ಪತಕ್ಕ ಮಾತು. ಶ್ಯಾಮಣ್ಣನೇಕೆ ತಾನೂ ಸೇರಿಕೊಂಡ? ನಾಗೇಶನ ಒಳಸಂಚಿಗೆ ಬಲಿಯಾಗಿರಬಹುದೆ? ಅಥವಾ ಶ್ಯಾಮಣ್ಣನು ಕೂಡ ಸಂಸರ್ಗ ದೋಷದಿಂದ ಈ ವಿಧದ ಸಂಚಿಗೆ ಸಮ್ಮತಿಕೊಡುವ ದೌರ್ಬಲ್ಯವನ್ನು ಹೊಂದಿರಬಹುದೆ?

ಇಂತಹ ಪ್ರಮೇಯವನ್ನು ತಿಳಿಯುವುದಕ್ಕೆ ಒಂದೇ ಒಂದು ಮಾರ್ಗ– ಶ್ಯಾಮಣ್ಣನನ್ನೇ ಕೇಳುವುದು! ಕೇಳಲೇ ಬೇಕೆಂದು ಕಾಮಾಕ್ಷಿ— ಕಚೇರಿಯೊಳಗೆ ತಾವಿಬ್ಬರೇ ಕುಳಿತಿದ್ದ ವೇಳೆಯಲ್ಲಿ ಈ ವಿಷಯವನ್ನು ಎತ್ತಿದಳು.

ಕಾಮಾಕ್ಷಿ: ಶ್ಯಾಮಣ್ಣ! ಮೊನ್ನೆಯ ಘಟನೆಯ ಕುರಿತು ನಿನ್ನ ಅಭಿಪ್ರಾಯವೇನು?

ಶ್ಯಾಮಣ್ಣ: ಅಭಿಪ್ರಾಯವೇನು ತಂಗಿ........ನಿನ್ನ ಸಿದ್ಧಾಂತ ಯಾವುದೋ ಅದೇ ನನ್ನದು.

ಕಾಮಾಕ್ಷಿ: ಎಂದರೆ, ನಾಗೇಶರಾಯರು ಎಂದು ನಾವೀಗ ಯಾರನ್ನು ಸಂಬೋಧಿಸುತ್ತೇವೆಯೋ, ಯಾರಲ್ಲಿ ಶಿಷ್ಟಾಚಾರದ, ಉತ್ತಮ ಕ್ರಮಗಳನ್ನು ಕಾಣುತ್ತೇವೆಯೋ ಅವರ ಒಳಗಿನ ರಾಯರು ಕಾಮಕೀಟಕ ವಾಗಿದ್ದಾರೆ ಎಂದಲ್ಲವೆ?

ಶ್ಯಾಮಣ್ಣ: ಹಾಗೆನ್ನಬಹುದು ತಾಯಿ!

ಕಾಮಾಕ್ಷಿ: ಹಾಗಾದರೆ, ನಾವು ದೊಡ್ಡ ವಿಪತ್ತಿನಲ್ಲಿ ಸಿಲುಕಿದ್ದೇವೆ.

ಶ್ಯಾಮಣ್ಣ: ವಿಪತ್ತೇನು? ನಾಗೇಶನೆಂಬ ವ್ಯಕ್ತಿಯೊಂದು ಹುಟ್ಟ ಲೇ ಇಲ್ಲ; ಚುನಾವಣೆಯ ಚಳವಳ ನಡೆಯಲೇ ಇಲ್ಲ; ನಾವು ಅದರಲ್ಲಿ ಭಾಗವಹಿಸಲೇ ಇಲ್ಲ—ಎಂಬಂತೆ ನಡೆದುಕೊಂಡರಾಯಿತು.

ಕಾಮಾಕ್ಷಿ: ನಂಜಿನ ಮುಳ್ಳಿನಿಂದ ಚುಚ್ಚಿದಂತೆ, ಇದರ ನೆನಪು ಮನಸ್ಸಿಗೆ ಅಸಹ್ಯವೇದನೆಯನ್ನು ಕೊಡುವುದು ಶ್ಯಾಮಣ್ಣಾ....

ಶ್ಯಾಮಣ್ಣ: ಎಂದರೆ, ನಾವು ನಿಜವಾದ ಪ್ರಪಂಚಕ್ಕೆ ಇಳಿದಿದ್ದೇವೆ ಎಂದರ್ಥ. ಪ್ರಪಂಚ ಇಂತಹದೇ ನೋಡು. ನಾಗೇಶರಾಯನು ವ್ಯಕ್ತಿಗಳ ಗುಣ ಸ್ವಭಾವದ ಕುರಿತು ಆಡಿದ ಮಾತು ಅಕ್ಷರಶಃಸತ್ಯ. ಮುಸುಕಿನೊಳಗಿನ ನಾಗೇಶನ ಸ್ವಭಾವದ ಒಂದು ಮುಖವನ್ನು ಅಲ್ಲಿ ನೋಡಿದೆ ನೀನು.

ಕಾಮಾಕ್ಷಿ: ನೀನು ಆ ದಿನ ಭಾಮೆಯೊಂದಿಗೆ ಹೋಗಲು ಕಾರಣವೇನಿತ್ತು?

ಶ್ಯಾಮಣ್ಣ: ಬರಬೇಕು ಎಂದಳು; ಭಾಷಣ ಕೊಡಬೇಕು— ಎಂದಳು.

ಕಾಮಾಕ್ಷಿ: ಗುರುಪುರಕ್ಕೆ ನಾವಿಬ್ಬರೇ ಹೋಗುವೆವೆಂದು ಅನುಮಾನ ಕೂಡ ಇರಲಿಲ್ಲ?

ಶ್ಯಾಮಣ್ಣ: ತಂಗಿ! ಇಂತಹ ಮಾತನ್ನಾಡುವೆಯಾ? ಅನುಮಾನವಿದ್ದು ನಿನ್ನನ್ನು ಅಲ್ಲಿಯೇ ಬಿಟ್ಟು ಹೋಗುತ್ತಿದ್ದೆನೆಂದು ಭಾವಿಸಿದೆಯಾ? ಎನ್ನುವಾಗ ಶ್ಯಾಮಣ್ಣನ ಕಂಠವು ಗದ್ಗದವಾಯಿತು.

ಕಾಮಾಕ್ಷಿ: ಹಾಗೆ ಭಾವಿಸಿರಲಿಲ್ಲ—ಅಣ್ಣಾ....ಕೆಲವು ಅನುಮಾನಗಳಿಂದ ಕೆಲವು ತರ್ಕಗಳಿಂದ ನಡೆದ ಸಂಗತಿಯ ತೂಕವನ್ನು ತಿಳಿಯಬೇಕಾಗಿದೆ ಅಷ್ಟೆ....

ಶ್ಯಾಮಣ್ಣ: ತಿಳಿಯಬೇಕಾದುದನ್ನೆಲ್ಲ ತಿಳಿದಿರುವೆ ತಂಗಿ!

ಕಾಮಾಕ್ಷಿ: ಹಾಗಿದ್ದರೆ ನೀನೇಕೆ ಎಚ್ಚರಿಕೆಕೊಡಲಿಲ್ಲ ಶ್ಯಾಮಣ್ಣಾ...

ಶ್ಯಾಮಣ್ಣ: ಹೇಗೆ ಎಚ್ಚರಿಕೆ ಕೊಡಬೇಕಿತ್ತು....ನೀನು ಪ್ರಬುದ್ಧ ಮಹಿಳೆ........ಜ್ಞಾನವಂತಳು; ಅನುಭವಶಾಲಿನಿ ನಾನಾದರೋ ಪ್ರಪಂಚದ ಕೆಡುಕನ್ನು ಕಂಡು ಅದರ ಸ್ವಭಾವ ಕೆಡುಕೆಂದು ಸಿದ್ಧಾಂತಕ್ಕೆ ಮುಟ್ಟಿದವನಾಗಿದ್ದೇನೆ. ಅಲ್ಲಿ ಇಲ್ಲಿ ಒಂದಿಷ್ಟು ಸ್ವಚ್ಛತೆ, ಸಭ್ಯತೆ, ಆತ್ಮದಪ್ರಕಾಶ

ಗಳನ್ನು ಕಂಡೆನೆಂದರೆ ಧನ್ಯನೆಂದು ಭಾವಿಸುವ ವ್ಯಕ್ತಿ ತಾಯಿ....ಒಳ್ಳಿತೂ ಕೆಡುಕೂ ಒಟ್ಟಾಗಿ ಸೇರಿರುವಲ್ಲಿ. ಕೆಡುಕನ್ನು ಮರೆತೇ ಬಿಡುತ್ತೇನೆ ತಾಯಿ...

ಕಾಮಾಕ್ಷಿ: ಎಂದರೆ ನನಗಿನ್ನೂ ಪ್ರಪಂಚದ ಅನುಭವ ಸಾಲದು.

ಶ್ಯಾಮಣ್ಣ: ಒಂದು ಬಗೆಯ ಅನುಭವವಾಗಿದೆ. ಇನ್ನೊಂದು ಬಗೆಯದು ಆಗಿಲ್ಲವಷ್ಟೆ....

ಕಾಮಾಕ್ಷಿ: ಯಾರನ್ನು ನಮ್ಮವರೆಂದು ಸ್ವೀಕರಿಸಿರುವೆವೋ ಅಂಥವರೇ ನಮಗೆ ಪ್ರಪಂಚ ಜ್ಞಾನಕೊಡುವವರಾಗಿ ಪರಿಣಮಿಸಿದರೆ ಬದುಕುವುದು ಕಷ್ಟವಾಗದೆ ಅಣ್ಣ....

ಶ್ಯಾಮಣ್ಣ: ನಮ್ಮವರ ಲೋಕವೇ ನಮಗೆ ಹೊಸ ಬೆಳಕನ್ನು ತೋರಬೇಕು. ಪರಕೀಯರು ಏನು ಮಾಡಬಲ್ಲರು? ಹೆಚ್ಚೆಂದರೆ ನಮ್ಮ ಖ್ಯಾತಿಯನ್ನೊ ಅಪಖ್ಯಾತಿಯನ್ನೊ ಕೇಳಿ ಹೊಗಳಬಹುದು; ಅಥವಾ ತೆಗಳಬಹುದು. ಸಂಘರ್ಷಣಗಳಾಗುವುದು ನಮ್ಮ ಮತ್ತು ನಮ್ಮ ಸ್ವಕೀಯರ ಹೃದಯಕ್ಕೆ ತಾನೇ?

ಕಾಮಾಕ್ಷಿಗೆ ಈ ಮಾತು ಸತ್ಯವೆಂದು ತೋರಿತು. ತನ್ನ ಚಿಕ್ಕ ಜೀವನವನ್ನೇ ಉದಾಹರಣೆಯಾಗಿ ತೆಗೆದುಕೊಂಡು ಅಂದಿನಿಂದ ಇಂದಿನ ವರೆಗೆ ತರಂಗಗಳಂತೆ ಹೊಡೆದುಬಂದ ಘಟನೆಗಳನ್ನು ಸ್ಮರಿಸಿ ತನ್ನಲ್ಲಿ ತಾನೆ ಚಿಂತಿಸಿದಳು. ತಂದೆಯ ಪುನರ್ವಿವಾಹ; ಅದು ವರೆಗೆ ತಂದೆಗೆ ತನ್ನಲ್ಲಿದ್ದ ಪ್ರೇಮ; ಅನಂತರದ ಅಲಕ್ಷ್ಯ; ಸುಶೀಲಮ್ಮನ ಅಬ್ಬರ; ಶಾಂತಮ್ಮನ ಒರಟುತನ....ಇವೆಲ್ಲ ತನ್ನ ಎದೆಗೆ ಕೊಡತಿಯಿಂದ ಹೊಡೆದಷ್ಟು ಬೇರೆಲ್ಲಿಗೆ ಹೊಡೆಯುತ್ತದೆ? ಲೋಕಕ್ಕೂ ಇವಕ್ಕೂ ಏನು ಸಂಬಂಧ?

ಶ್ಯಾಮಣ್ಣ ಹೀಗೆ ಸಮಾಧಾನಪಡಿಸಿದ:—ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ ತಾಯಿ. ನಮ್ಮ ಮನಸ್ಸು ನಮ್ಮ ಮುಷ್ಟಿಯೊಳಗೆ ಇರುವಷ್ಟು ಕಾಲ ಮಾನಮರ್ಯಾದೆಯೂ ನಮ್ಮವಶ ತಾನೇ? ನಮ್ಮ ಕೈಯಲ್ಲಿರುವ ತಿಂಡಿಯನ್ನು ಕಿತ್ತುಕೊಳ್ಳ ಬೇಕೆಂದು ಕಾಗೆ ಹಾರಿ ಬರುತ್ತದೆ. ಇದರಲ್ಲಿ ನಮಗೆ ಅಪಮಾನವುಂಟೇ? ಸೊಳ್ಳೆಯೊಂದು ಹಾಡುತ್ತಾ

ಬಂದು ಕಡಿದು ಹೋಗುತ್ತದೆ. ನನ್ನ ಮಾನವನ್ನದು ಅಪಹರಿಸಿತೇ? ಚಪಲ ಬುದ್ಧಿಗಳು ಎಷ್ಟೊ ಇವೆ....ನಾಗೇಶ ಮನೋರಾಜ್ಯ ಎಂದೇನೋ ವರ್ಣಿಸಿದನಲ್ಲ....ಮೊನ್ನೆ ಅಂತಹ ಮನೋರಾಜ್ಯದಲ್ಲಿ ದಾರಿಗನಾಗಿ ಸಂಚರಿಸುತ್ತಿದ್ದ ಯಾರೋ ಒಬ್ಬಳು ಸೊಬಗೆಯನ್ನು ಕಂಡು. ಕಾಮಾಕ್ಷಿಯ ಪರಿಶುದ್ಧ ಮಾರ್ಗವನ್ನು ಕಾಣಲಿಲ್ಲ. ನನ್ನ ಧ್ವನಿ ವಿಕಾರದಿಂದ—ಪರುಷ ವಿನೋದದಿಂದ ಅಪಜಯ ಹೊಂದಿ ಬೆನ್ನು ತಿರುಗಿಸಿದ. ನಿನಗೆ ಇದೊಂದು ಆತ್ಮವಿಜಯ ತಂಗಿ....ಅಂದಿನಿಂದ ನಿನ್ನ ಗುಣ ಹೆಚ್ಚು ಪಳಗಿದೆ; ಬಲಿತಿದೆ....ಎಂದೇಕೆ ಭಾವಿಸಿಕೊಳ್ಳಬಾರದು?

ಹಾಗೆ ಭಾವಿಸಬಹುದಾಗಿತ್ತು. ಇಷ್ಟೆಲ್ಲ ಸಂಗತಿ ನಡೆದಾಗ 'ಪ್ರಭಾಕರ'ನೆಂಬ ವ್ಯಕ್ತಿಯೊಂದು ವಿಸ್ಮೃತವಾಗಿತ್ತಲ್ಲವೆ? ಕಾಮಾಕ್ಷಿ ಗುರುಪುರದ ಸಭಾಸಂದರ್ಭದಲ್ಲಿ ಏನಾಯಿತು? ಎಂಬುದನ್ನು ಆತನಿಗೆ ತಿಳಿಸಿರಲಿಲ್ಲ. ಪತ್ರಿಕೆಗಳಿಂದ ಓದಿತಿಳಿದವರಿಗೆ ಎಷ್ಟು ತಿಳಿದಿರಬಹುದೋ ಅಷ್ಟೇ ಅವನಿಗೂ ತಿಳಿದಿತ್ತು. ತನ್ನ ಪ್ರಾಣ ವಲ್ಲಭನೆಂದೆನಿಸುವವನಿಗೆ ಅವಳ ಪ್ರಾಣ ಸಂಕಟದ ಅರಿವೇ ಇರಲಿಲ್ಲ! ಹೀಗೇಕೆ ಆಗಬೇಕಾಗಿತ್ತು?

## ೧೬

ಅನ್ನ ಪ್ರಾಶನಕ್ಕೆ ಹೋಗಿಬಂದದಿನಿಂದ ಕಾಂತಮ್ಮನ ಪ್ರಕೃತಿಯು ಕೆಡತೊಡಗಿತು. ಶರೀರದ ಸಂಧಿಬಂಧಗಳು ಕಳಚಹೋಗುವ ಹಾಗೆ—ಕಳಚದೇ ಇದ್ದರೂ ನೋವಿನ ದಾರದಿಂದ ಹೊಲಿಗೆ ಹಾಕಿ ಜೋಡಿಸಿದ ಹಾಗೆ, ಅನುಭವವಾಗುತ್ತಿತ್ತು. ಒಬ್ಬಳೇ ಇದ್ದಾಗ ಸಹಿಸಲಾಗುತ್ತಿದ್ದ ವೇದನೆ ಮನೆಜನರನ್ನು ಕಂಡೊಡನೆ ಪ್ರಕೋಪಹೊಂದಿ ಅಸಹ್ಯತೆಯು ಸೀಮೆಯನ್ನು ಸೇರಿ ಹೋಗುತ್ತಿದ್ದಿತು. ಕೊಡದಲ್ಲಿ ನೀರುತುಂಬಿ ಕಟ್ಟೆಯ ಮೇಲೆ ಇಡುವಾಗ, ಮೇಲೋಗರಕ್ಕೆ ಒಗ್ಗರಣೆ ಹಾಕುವಾಗ, ಮನೆಯ ಕೈಸಾಲೆಯ ಅರ್ಧವನ್ನು ಗುಡಿಸುವಷ್ಟರಲ್ಲಿ——ವೇದನೆ ಆಕಸ್ಮಿಕವಾಗಿ ಹೊಡೆದು ಆಕೆಯ ಕೈಕಾಲುಗಳ ಚೇಷ್ಟೆಯನ್ನೆ ತಡೆದು ಹಾಸಿಗೆ ಹಿಡಿಸು

ತ್ತಿತ್ತು. ಎಂದರೆ, ಆಕೈಕೆವಗಾಡದಿದ್ದರೆ, ಪ್ರಭಾಕರನ ಗೃಹಸಾಮ್ರಾಜ್ಯವು ಅಡಿಮೇಲಾಗಿ ಹೋಗುವುದೆಂಬುದನ್ನು ಸೂಚಿಸುವುದೇ ಆ ಬೇನೆಯು ಆಸೆಯೆಂಬಂತೆಯೂ ತೋರುವಹಾಗಿತ್ತು. ಪ್ರಭಾಕರನು ಅಂತಃಕರಣ ವಿಲ್ಲದವನಲ್ಲ; ಕಾಮಾಕ್ಷಿಯೂ ಅಲ್ಲ. ಆದರೆ ಆ ಚಿಕ್ಕ ಮನೆಯೊಳಗೆ, ಆಕೆಯ ಅನುಭವದ ಸಂಕಷ್ಟಗಳನ್ನು ಕಂಡು ಕಣ್ಣೀರು ಸುರಿಯುವ ಪ್ರಾಣಿಯೆಂದರೆ ಒಬ್ಬನೇ ಒಬ್ಬ--ಆ ಶ್ಯಾಮಣ್ಣ!

ಡಾಕ್ಟರನ್ನು ಕರೆಯಿಸಿ, ಪರೀಕ್ಷೆ ಮಾಡಿಸಿ, ಚಿಕಿತ್ಸೆಗೆ ಅಣಿಮಾಡು ವುದಾಗಿ ಪ್ರಭಾಕರನೊಮ್ಮೆ ಸಾಂತಮ್ಮನಿಗೆ ಕೇಳುವಂತೆ ಆಡಿದುದೇ ತಡ. ಆಕೆಯ ರೋಗ ಉಲ್ಬಣಿಸಿತು. ಆಸ್ಪತ್ರೆಯ ಔಷಧ ಕೊಡಿಸಿದರೆ ಕೂಡಲೇ ಪ್ರಾಣ ಬಿಡುತ್ತೇನೆ— ಎಂದವಳು ಭಯೋತ್ಪಾದನೆ ಮಾಡಿದಳು. ಪ್ರಭಾಕರನು ಆ ಗೊಡವೆಯನ್ನೇ ಬಿಟ್ಟ. ಒಂದೆರಡು ದಿನ ಶ್ಯಾಮಣ್ಣನೆ ಅಡಿಗೆಗೆ ಕೈಗೊಡುವುದಕ್ಕೆ ಯತ್ನಿಸಿದ. ಆ ದಿನಗಳಲ್ಲಿ ರೋಗವು ಎಷ್ಟು ವಿಕಟವಾಯಿತೋ ಹೇಳಬರುವುದಿಲ್ಲ. ಕಾಮಾಕ್ಷಿ ಅಡಿಗೆಕೋಣೆಯೊಳಗೆ ಕಾಲಿಡುವ ದಿನಗಳಲ್ಲಿ ಮಾತ್ರ ರೋಗವು ಸ್ವಲ್ಪ ಇಳಿಯುವಂತೆ ತೋರು ತ್ತಿತ್ತು.

ಸಾಂತಮ್ಮನ ವಿಚಿತ್ರ ಸ್ವಭಾವಕ್ಕೆ ಪ್ರತೀಕಾರವಿರಲಿಲ್ಲ. ಮನೆಯೊ ಳಗಿದ್ದ ಮೂವರು ಮುಂದಿಯೂ ತಮತಮಗೆ ಬಿಡುವಾಗುವಾಗ, ಅಥವಾ ಪರ್ಯಾಯದಿಂದ ಅವಕಾಶ ಮಾಡಿಕೊಂಡು ಬಂದು, ಸಾಂತಮ್ಮನ ಕೆಲಸ ವನ್ನು ನಿರ್ವಹಿಸಬೇಕಾಗಿ ಬರುತ್ತಿದ್ದುದರಲ್ಲಿ ಯಾರಿಗೂ ಅಸಂತುಷ್ಟಿಯಿರ ಲಿಲ್ಲ. ಆದರೆ ಇದರ ವೈಚಿತ್ರ್ಯದ ಒಗಟನ್ನು ಬಿಚ್ಚುವುದು ಹೇಗೆ?

ಒಮ್ಮೆ ಅದು ತನಗೆ ತಾನೇ ಬಿಚ್ಚಿತು. ಕಾಮಾಕ್ಷಿ ಅಡಿಗೆಮನೆ ಯಲ್ಲಿದ್ದಾಗ—ನಮ್ಮಂತಹ ಹೆಮ್ಮಕ್ಕಳು ಗಂಡಸರಂತೆ ಇಡೀ ದಿನ ಮನೆಯ ಹೊರಗೆ ಅಲೆದಾಡುವುದು ಯೋಗ್ಯವೆ ಮಗು! ಮನೆತನದ ಮಗಳಾಗಿ ತನ್ನ ಜನ್ಮಕ್ಕೆ ತಕ್ಕ ಕೆಲಸ ಮಾಡಬೇಡವೇ? ಎಂಬ ಪ್ರಶ್ನೆಯ ಮೂಲಕ ಆ ಒಗಟು ಹೊರಗೆ ಬಿದ್ದಿತು.

ಕಾಮಾಕ್ಷಿ: ಮನೆತನಕ್ಕೆ ಒಪ್ಪದ ಕೆಲಸ ಯಾವುದನ್ನು ಮಾಡಿದ್ದೇನೆ ಅತ್ತೆ?

ಸಾಂತಮ್ಮ: ಏನು ಮಾಡಿಲ್ಲ? ಏನು ಮಾಡಲಿಲ್ಲ? ಇಡೀ ದಿನ ಕಚೇರಿ ಕಚೇರಿ ಎಂದು ಹೋಗುತ್ತೀಯಲ್ಲ? ಯಾವ ಕಚೇರಿಯದು? ನೀನೇನು ಕಲ್ಲೆಕಟ್ರೆ?

ಕಾಮಾಕ್ಷಿ: ದುಡಿಯಬೇಕಮ್ಮ......ಪ್ರತಿಯೊಂದು ಪ್ರಾಣಿಯೂ ತನ್ನ ಶ್ರಮದಿಂದ ಹೊಟ್ಟೆ ತುಂಬಿಸಿಕೊಳ್ಳಬೇಕು.

ಸಾಂತಮ್ಮ: ನಿನ್ನಪ್ಪ....ಆ ಪುಣ್ಯಾತ್ಮ ಹತ್ತುಸಾವಿರ ಕೊಟ್ಟಿದ್ದಾನೆ. ಒಂದು ಹೊಟ್ಟೆತುಂಬುವುದಕ್ಕೆ ಏನಾಗಬೇಕು?....ಪ್ರಭಾಕರನೋ....ಗಂಡು ಜೀವ....ದುಡಿಯುವುದಕ್ಕಾಗಿಯೇ ಹುಟ್ಟಿದಾತ.... ಅವನೇನಾದರೂ ತಂದು ಹಾಕಿದರೆ, ಬೇಯಿಸಿಕೊಟ್ಟರೆ ಸಾಲದೆ?

ಕಾಮಾಕ್ಷಿ: ನಮ್ಮ ನಡತೆಯಲ್ಲಿ ತಪ್ಪೇನು ಕಂಡಿರುವೆ ಅತ್ತೆ! ಅಡಿಗೆ ಮಾಡಿ ಗಂಡುಸಿನ ಹೊಟ್ಟೆತುಂಬಿಸುವುದೊಂದೇ ಹೆಂಗುಸಿನ ಧ್ಯೇಯವಾದರೆ....

ಸಾಂತಮ್ಮ: ಧ್ಯೇಯ ಗೀಯ ಎಂದು ಮಾತು ಮಾತಿಗೂ ಹೇಳುತ್ತೀರಲ್ಲ........ಅದರ ಅರ್ಥ ನನ್ನಂತಹ ಹಳೆ ಹೆಂಗುಸರಿಗೆ ಏನು ತಿಳಿದೀತು ಕಾಮು....ನಿನ್ನ ತಾಯಿ ಕಚೇರಿಯಲ್ಲಿ ಕೆಲಸಮಾಡಲಿಲ್ಲ; ಅತ್ತೆ ಮಾಡಲಿಲ್ಲ. ಅವರಿಗೇನು ಕಡಿಮೆಯಿತ್ತು? ಒಂದು ಕೆಟ್ಟ ನಾಲಗೆ ಅವರಲ್ಲಿ ಅಪವಾದ ಹೇಳಿರಲಿಲ್ಲ....

ಕಾಮಾಕ್ಷಿ: ನನ್ನ ವಿಷಯವಾಗಿ ಏನು ಹೇಳುತ್ತದೆ ಆ ನಾಲಗೆ?

ಸಾಂತಮ್ಮ: ಹೇಳಿನೆಂದು ಇರಬಹುದು. ಕೇಳಿನೆಂದು ಇರುವುದಕ್ಕಾಗುತ್ತದೆಯೆ? ಮೊನ್ನೆ ಅನ್ನಪ್ರಾಶನಕ್ಕೆ ಹೋದಾಗ....

ಕಾಮಾಕ್ಷಿ: ಯಾರೇನು ವಿಷಪ್ರಾಶನಮಾಡಿದರು?

ಸಾಂತಮ್ಮ: ನಿನ್ನ ಚಿಕ್ಕಮ್ಮನೇನು ಶತ್ರುವೆ? ಅವಳಿಗೆ ನಿನ್ನ ಮಾನಮರ್ಯಾದೆ ಬೇಡವಾಗಿದೆಯೆ? ಪಾಪ! ಕಣ್ಣೀರಿಟ್ಟಳು. ತನ್ನ ಮಗಳು ಏನೇನು ಕೆಟ್ಟಮಾತುಗಳನ್ನು ಕೇಳಬೇಕಾಯಿತು? ಎಂದು

ಹೊಟ್ಟೆಹೊಸೆದು ಕೊಂಡಳು..ನೋಡು..ಸುಶೀಲಮ್ಮನ ಹಣೆಯ ಬೊಟ್ಟನ್ನು ನೋಡು....ಎಷ್ಟು ಲಕ್ಷಣವಾಗಿ ತೋರುತ್ತದೆ....ನೀನು ಒಮ್ಮೊಮ್ಮೆ ಇರುವ ಚಿಕ್ಕ ಬೊಟ್ಟನ್ನು ಹಾಕಿಕೊಳ್ಳುವುದಕ್ಕೂ ಮರೆತುಬಿಡುತ್ತಿ....

ಕಾಮಾಕ್ಷಿ: ಇನ್ನು ಮುಂದೆ ಹಣೆಯಲ್ಲಿ ದೊಡ್ಡ ಬೊಟ್ಟನ್ನಿಡುತ್ತೇನೆ. ದಿನಕ್ಕೆ ಅರ್ಧಸೇರು ಕುಂಕುಮ ಖರ್ಚುಮಾಡುತ್ತೇನೆ. ಮತ್ತಾದರೂ ಅಪವಾದ ತಪ್ಪಬಹುದಲ್ಲವೇ?

ಸಾಂತಮ್ಮ: ನನ್ನಲ್ಲಿ ಕುತರ್ಕಹೂಡುತ್ತೀಯಾ ಮಗು! ಎಳೆ ಕೂಸಾಗಿ ಬಂದವಳನ್ನು ಹೊಟ್ಟೆಯಲ್ಲಿ ಹುಟ್ಟದ ಮಗುವಿಗಿಂತ ಚೆನ್ನಾಗಿ ಲಾಲಿಸಿಕೊಂಡು ಬಂದಿದ್ದೇನೆ. ನನ್ನಲ್ಲಿಯೂ ಇಂತಹ ವಾದಾಂಟೆ?

ಕಾಮಾಕ್ಷಿ: ಎದೆಯಲ್ಲಿರುವುದನ್ನು ಬಿಚ್ಚಿಹೇಳಿರಿ ಅತ್ತೆ!

ಸಾಂತಮ್ಮ: ನನ್ನ ಎದೆಯೊ? ಐವತ್ತು ವರ್ಷದ ಮುದಿ ಎದೆ; ನಲ್ವತ್ತುವರ್ಷ ಹಣೆಯಲ್ಲಿ ಬೊಟ್ಟಿಡದ ಹೆಣ್ಣಿನ ಎದೆಯಲ್ಲಿರುವುದನ್ನೆಲ್ಲ ಬಿಚ್ಚಿದರೆ ಕೇಳುವ ಕಿವಿಯುಂಟೆ?....ಶ್ಯಾಮಣ್ಣ....ಶ್ಯಾಮಣ್ಣ....ಎಂದು ಯಾರೋ ಒಬ್ಬ ತಿರುಕುಳಿಯನ್ನು ತಂದು ಹತ್ತಿರದಲ್ಲಿ ಇಟ್ಟುಕೊಂಡಿರುವಿರಲ್ಲ? ತೋರಿಕೆಗೆ ಸಭ್ಯನಂತಿದ್ದಾನೆ. ದಗೆ ಮಾಡಬೇಕಾದವರು ನಗುತ್ತಾ ಬರುತ್ತಾರೆ....ಎಂದು ನಮ್ಮಜ್ಜಿ ಆಡಿದ ಮಾತು ಈಗಲೂ ಈ ಕಿವಿಯಲ್ಲಿ ಹೊಡೆಯುತ್ತಾ ಇದೆ. ಅವನಿಗೆ ಊಟಕ್ಕೆ ವಾಸಕ್ಕೆ ಹೊಟೇಲಿಲ್ಲವೆ? ನಾವೇ ಅಡಿಗೆಮಾಡಿ ಬಡಿಸಬೇಕೆ? ಇಲ್ಲಿಯೇ ಆತ ಇರಬೇಕೆ? ಕೆಟ್ಟುಮಾತುಗಳನ್ನು ನಾವು ಕೇಳುತ್ತಲೇ ಇರಬೇಕೆ? ಇಷ್ಟು ಪ್ರಾಯವಾದ ಹುಡುಗಿಯರಿಗೆ ಆಚಾರವೇಕೆ ತಿಳಿಯುವುದಿಲ್ಲ?

ಅನುಮಾನಿಸುತ್ತಿದ್ದ ವಿಷಯ ಸಾಂತಮ್ಮನ ಬಾಯಿಯಿಂದಲೆ ಹೊರಬಿದ್ದುದರಿಂದ, ಆಕೆಗೆ ತನ್ನ ವಿವೇಕದಲ್ಲಿ ವಿಶ್ವಾಸವುಂಟಾಯಿತು. "ನೀವು ಅನ್ನಪ್ರಾಶನಕ್ಕೆ ಹೋದಂದಿನಿಂದ, ಚಿಕ್ಕಮ್ಮ ಇಲ್ಲಿಗೆ ಸಂದರ್ಶನ ಕೊಟ್ಟಂದಿನಿಂದ, ಶ್ಯಾಮಣ್ಣ ಕೆಡುಕನಾದನಲ್ಲವೆ?" ಎಂದವಳು ಪ್ರಶ್ನಿಸಿದಳು.

ಸಾಂತಮ್ಮ: ಕಿವಿಕೊಡಬೇಕಾದವರ ಮಾತಿಗೆ ಕಿವಿಕೊಡಬೇಕಾಗಿದೆ. ' ಪರಕೀಯರು ಆಡಿದ್ದರೆ, ಕಿವಿಯನ್ನು ಮುಚ್ಚಿಬಿಡುತ್ತಿದ್ದೆ.... ಪಾಪ....ಸುಶೀಲಮ್ಮ ಕರುಳಿನ ಗೋಳಿನಿಂದ ಆಡಿದಳು. ಕಾರಣವಿರಲಿ; ಇಲ್ಲದಿರಲಿ; ಅವಳ ಮಾತಿಗೆ ಬೆಲೆಕೊಡದಿರಲಾಗುವುದೇ ?

ಶ್ಯಾಮಣ್ಣನನ್ನು ಹೊರಗೆ ಕಳುಹಿಸಿಬಿಟ್ಟರೆ ನಿಮ್ಮ ರೋಗವಾಸಿಯಾಗುವುದಲ್ಲವೆ? ಎಂದು ಕಾಮಾಕ್ಷಿ ಪ್ರಶ್ನಿಸಿದಳು....

ಈಗಿನ ಹುಡುಗಿಯರ ಮಾತು ಡೊಂಕು; ಬುದ್ಧಿ ಡೊಂಕು; ಯಾರೇನು ಮಾಡಲಾಗುತ್ತದೆ? ಹೊಟ್ಟೆಯಲ್ಲಿ ಹುಟ್ಟಿದ ಒಂದು ಗಂಡೋ ಹೆಣ್ಣೋ ಇರುತ್ತಿದ್ದರೆ ನಾನಿಂತಹ ಮಾತನ್ನು ಕೇಳಬೇಕಾಗುತ್ತಿತ್ತೆ? ಎಂದು ಸಾಂತಮ್ಮ ಕಣ್ಣೀರು ಸುರಿಸಿದಳು.

ಸಾಂತಮ್ಮ ಬಾಯಾಳಿಯಾಗಿದ್ದರೂ, ಈ ವಿಷಯವನ್ನು ಮಾತಾಡುವಾಗ ಬಹಳ ಬುದ್ಧಿವಂತಿಕೆಯನ್ನು ಪ್ರಯೋಗಿಸಿದ್ದಳು. ಪ್ರಭಾಕರನಲ್ಲಿಯೇ ಇದನ್ನು ಹೇಳಬಹುದಾಗಿತ್ತು. ಒಂದು ವೇಳೆ ಪ್ರಭಾಕರನ ಮನಸ್ಸು ತನ್ನ ನೀತಿಬೋಧೆಯನ್ನು ಒಪ್ಪಿಕೊಂಡಿದ್ದರೆ, ಏನನಾಹುತವಾಗುತ್ತಿರಲಿಲ್ಲ? ಚಿಕ್ಕ ಪ್ರಾಯದ ಹುಡುಗಿಯೊಬ್ಬಳ ನಡತೆಯಲ್ಲಿ ಬಂದ ಆಕ್ಷೇಪಕರ ಸಂಗತಿಯನ್ನು ಅವಳಿಗೇ ತಿಳಿಸಿ ಸರಿದಾರಿಗೆ ಹಚ್ಚುವುದಕ್ಕೆ ಪ್ರಯತ್ನಿಸುವುದು ಶ್ರೇಯಸ್ಕರವಲ್ಲವೆ? ಗಂಡನಲ್ಲಿ ಹೇಳಿ ಆತನ ಮನಸ್ಸನ್ನು ತಿರುಗಿಸುವುದು ಚಾಡಿಗಾರ್ತಿಯರ ನಡೆವಳಿ. ಸಾಂತಮ್ಮ ಅಂಥವಳಲ್ಲ. ಮೊದಲು ಹುಡುಗಿಯ ಡೊಂಕುಬುದ್ಧಿಯನ್ನು ನೇರಾಗಿಸುತ್ತೇನೆ; ಅದು ಸಾಧ್ಯವಾಗದಿದ್ದರೆ ಎರಡನೆಯ ಉಪಾಯ. ಮಾತ್ರವಲ್ಲ; ಯಾರೇನೆಂದರೂ ಶ್ಯಾಮಣ್ಣನ ಪ್ರಸನ್ನ ಮುಖವನ್ನು ನೋಡುವಾಗ ಸಾವಿರ ಜನರು ಸಾವಿರ ಮಾತನ್ನಾಡಿದರೂ, ಅದನ್ನು ನಂಬುವುದಕ್ಕಾಗುವುದಿಲ್ಲ—ಎಂದು ಭಾಸವಾಗುತ್ತದೆ. ಇಂತಹ ಸ್ಥಿತಿಯಲ್ಲಿ, ಒಳಗೊಳಗೇ ಮಾಡುವುದನ್ನೆಲ್ಲ ಮಾಡಿ ಅಪವಾದವನ್ನು—ಇದು ಬರಿಯ ಅಪವಾದವೆಂಬುದರಲ್ಲಿ ಆಕೆಗೆ ಸಂದೇಹವಿಲ್ಲ—ಹೋಗಲಾಡಿಸುವುದೇ ಶ್ರೇಯಸ್ಕರ. ಹೆಂಡತಿಯ ಕುರಿತು ಗಂಡನಲ್ಲಿ ತರಳೆ ಹೇಳುವ ಸ್ವಭಾವ ಅವಳದು ಅಲ್ಲವೂ ಅಲ್ಲ.

ತನ್ನ ಮಾತನ್ನು ಧಿಕ್ಕರಿಸುವ ಕಾಮಾಕ್ಷಿಯ ಔದ್ಧತ್ಯವನ್ನು ನೋಡಿ ಸಾಂತಮ್ಮನ ರಕ್ತ ಬಿಸಿಯೇರಿತು. ಆಗಲೆ ಸೌಟನ್ನು ಅಲ್ಲಿಯೇ ನೆಲಕ್ಕೊಗೆದು ಹೋಗಬಿಡುತ್ತಿದ್ದಳು. ಆದರೆ ಕಾಮಾಕ್ಷಿ ಮೊನ್ನೆಯಿಂದ ಶಾಂತಿಮಾಡುತ್ತಾಳೆ. ಮುಟ್ಟುಕಟ್ಟಾಗಿದೆ.....ಅವಳ ಈ ಸ್ಥಿತಿಯಲ್ಲಿ ಸಾಂತಮ್ಮನ ಆಶಾಮಯ ಭವಿಷ್ಯ ಅಡಗಿಕೊಂಡಿದೆ....ಒಂದು ಗಂಡು ಮಗು ಹುಟ್ಟುವುದು....ಅದರ ಅನ್ನಪ್ರಾಶನವಾಗುವುದು....ಇಡೀ ದಿನ ಅದನ್ನು ಎತ್ತಿ ಕುಣಿದು ತನ್ನ ಬಾಳಿನ ಕತ್ತಲೆಯನ್ನು ಬೆಳಗುವುದು....

ತಾನು ಹುಟ್ಟಿದುದಕ್ಕೆ—ತನ್ನ ಮಗ ಪ್ರಭಾಕರನಿಗೆ ಒಂದು "ಹುಳ" ವಾಗುವುದನ್ನಾದರೂ ಕಣ್ಣಾರೆ ನೋಡಿ ಸಾಯಬೇಕಲ್ಲವೆ?

ಈ ಕಾರಣದಿಂದಲೆ, ಮನೆ ಬಿಟ್ಟುಹೋಗುವ ಅವಳ ಆವೇಶ ತನ್ನಿಂದ ತಾನೆ ತಣ್ಣಗಾಯಿತು.

## ೧೭

ಸಾಂತಮ್ಮನ ಮಾತು ಕಾಮಾಕ್ಷಿಗೆ ಮೆಚ್ಚಿತೇ? ಇಲ್ಲವೆ? ಎಂಬುದನ್ನು ವಿಚಾರಿಸಬೇಕಾಗಿಲ್ಲ. ಶಕುನಗಳು ನಮಗೆ ಮೆಚ್ಚಬಹುದು; ಅಥವಾ ಮೆಚ್ಚದೆ ಇರಬಹುದು. ಅವುಗಳನ್ನು ತಡೆಗಟ್ಟಲಾಗುವುದಿಲ್ಲ. ಎಂದ ಮೇಲೆ, ಅವುಗಳನ್ನು ಕಂಡು ಕೆಲವರು ಅರ್ಥಮಾಡಿಕೊಳ್ಳುತ್ತಾರೆ; ಕೆಲವರು ಮಾಡಿಕೊಳ್ಳುವುದಿಲ್ಲ; ಇಷ್ಟೆ ಮನುಷ್ಯರಲ್ಲಿರುವ ವ್ಯತ್ಯಾಸ. ಸಾಂತಮ್ಮನನ್ನು ಶಕುನದ ಹಕ್ಕಿಯಾಗಿ ಕಾಮಾಕ್ಷಿ ಗ್ರಹಿಸಿದ್ದಳು. ಹತ್ತು ದಿನಗಳ ಹಿಂದೆ ಕೂಡ ಈ ಶಕುನ, ಚುನಾವಣೆಯ ಗದ್ದಲದ ಭರತ ಇಳಿದ ಮೇಲೆ, ಅಶುಭವಾಗಿಯೇ ಆಕೆಗೆ ತೋರಿತು.

ಸ್ವರ್ಗ—ಮರ್ತ್ಯ—ಪಾತಾಳ ಎಂಬ ಮೂರು ಲೋಕಗಳಿವೆಯೆಂದು ಪುರಾಣಗಳು ಹೇಳುತ್ತಿವೆಯಲ್ಲ; ಈ ಮೂರು ಲೋಕಗಳು ನಿಜವಾಗಿಯೂ ಇದ್ದರೆ ಅವುಗಳ ಮುಂದೆ, ತತ್ಕಾಲಕ್ಕೆ ತಾನು ಒಬ್ಬಳೇ ಒಬ್ಬಳಾಗಿ, ಇರುವಂತೆ ಕಾಮಾಕ್ಷಿಗೆ ಭಾಸವಾಯಿತು. ಗುರುಪುರ ಸಭೆಯಲ್ಲಿ ಭಾಷಣ

ಕತ್ರ್ಯಯಾಗಲು ಒಪ್ಪಿದಾಗಲೆ ತಾನು ತಪ್ಪು ಹೆಜ್ಜೆಯನ್ನಿಟ್ಟೆ. ತನ್ನ ಒಡನಾಡಿ, ಒಡಬಾಳಿ, ಸುಖದುಃಖಗಳಲ್ಲಿ ಕೆಚ್ಚುಬಿದ್ದು ಒಂದಾಗಿ ಹುರಿಗೊಂಡ ಒಂದು ಜೀವದಿಂದ ಸ್ವಲ್ಪದೂರಕ್ಕೆ ಸರಿಯುವ ಕವಲುದಾರಿಯಲ್ಲಿ ಅಂದೇ ಕಾಲಿಟ್ಟೆ—ಎಂದವಳಿಗೆ ತೋರತೊಡಗಿತು. ತಪ್ಪು ಮಾಡಿದಳೆ? ಅಂತಹ ತಪ್ಪು ಏನೂ ಇಲ್ಲ. ಮಾಡಲಿಲ್ಲವೆ? ಇಲ್ಲ ಎನ್ನುವ ಧೈರ್ಯವಿಲ್ಲ. ತನ್ನ ಶುಚಿವ್ರತವನ್ನು ನಾಗೇಶ ಪರೀಕ್ಷಿಸಿದ್ದಾನೆ; ಪರೀಕ್ಷೆಯಲ್ಲಿ ಅವಳು ಗೆದ್ದಿದ್ದಾಳೆ. ಗೆದ್ದುದಕ್ಕೆ ಸಾಕ್ಷಿ ಇಬ್ಬರೇ—ನಾಗೇಶ ಮತ್ತು ಅವಳು. ದುಷ್ಟನತದ ನಾಗೇಶ ಸೋತುಹೋಗಿದ್ದರೂ, ನಡೆದ ಸಂಗತಿ ಗುಟ್ಟಾಗಿದ್ದುದರಿಂದ, ಆತ ತನ್ನ ನಡತೆಗೆ ಒಪ್ಪುಹಾಕುವಾಗ, ಕಾಮಾಕ್ಷಿಯುದಕ್ಕೆ ಅಪಕೀರ್ತಿಯನ್ನು ಬಳಿಯಬಹುದು. ಆಗ ಅವಳೇ ಅಪರಾಧಿಸಿಯೆಂಬ ಆರೋಪಣೆಗೆ ಒಳಗಾಗಬೇಕಾಗುತ್ತದೆ. ಅವಳು ಈ ವಿಷಯವನ್ನು ಪ್ರಭಾಕರನಿಗೆ ತಿಳಿಸಿರಲಿಲ್ಲ. ತಿಳಿಸಿ, ವಿಷಯಗಳನ್ನು ಚರ್ಚಿಸಿ, ಅವನಿಂದ ಒಂದು ಹೊಗಳಿಕೆಯನ್ನು ಕೇಳಿದ್ದರೆ, ಕಾಮಾಕ್ಷಿಗಾಗುವ ತೃಪ್ತಿ ಮತ್ತಾವುದರಲ್ಲಿಯೂ ದೊರಕುತ್ತಿರಲಿಲ್ಲ. ಅವನಲ್ಲಿ ಹೇಳಲಿಲ್ಲ; ಹೇಳದೆ ದಿನಗಳು ಕಳೆದುಹೋದವು. ತನ್ನ ಅಂತರಂಗದ ಸಾಕ್ಷಿ ಅವನೊಬ್ಬ. ಅವನು ಹೇಸಿದನೆಂದರೆ, ತನ್ನ ಹೆಣ್ತನದ ಸೊಗಸೆಲ್ಲಿ? ಕಾಮಾಕ್ಷಿಯ ಎದೆಯಲ್ಲಿ ದೊಡ್ಡ ಹುಣ್ಣಾಗಿದೆ; ಸಿಡಿಯುತ್ತಿದೆ; ಅದನ್ನು ಬರಿಸಿಕೊಂಡುದೂ ಅವಳೇ!

ನಾಗೇಶನು ಮನುಷ್ಯರ ಸ್ವಭಾವವನ್ನು ವರ್ಣಿಸುವಾಗ ಸತ್ಯವನ್ನೆ ಆಡಿದ್ದ. ಪ್ರತಿಯೊಬ್ಬನಿಗೂ ಒಳಗಿನ ವ್ಯಕ್ತಿತ್ವವೊಂದಿದೆ; ಹೊರಗಿನದೊಂದಿದೆ. ಒಳಗಿನದಕ್ಕೂ ಹೊರಗಿನದಕ್ಕೂ ಒಂದೇ ರೂಪವಿರುವುದಿಲ್ಲ. ಅದನ್ನವಳು ಕಣ್ಣಾರೆ ಕಂಡುದಾಯಿತು. ತನ್ನ ಪ್ರಾಣೇಶ್ವರ—ತಾನು, ಎಂಬ ಈ ಎರಡು ವ್ಯಕ್ತಿಗಳಲ್ಲಿ ಒಳಗು—ಹೊರಗು ಎಂಬ ಭೇದವು ಗೋಚರಿಸದಂತೆ, ಇಬ್ಬರು ಇದುವರೆಗೆ ವ್ಯವಹರಿಸಿಕೊಂಡು ಬಂದಿದ್ದಾರೆ-ಒಬ್ಬರಲ್ಲಿ ಇನ್ನೊಬ್ಬರಿಗೆ ಅಚಲ ವಿಶ್ವಾಸವಿದೆ. ಹಗಲು—ಇರುಳು—ಮನಸ್ಸಿನಲ್ಲಿ ಕೃತಿಯಲ್ಲಿ ಯಾವಯಾವ ಕ್ರಿಯೆಗಳಾಗುತ್ತಿವೆಯೆಂಬುದನ್ನು

ತಿಳಿಯದಿರುವುದೇ ಅಸಾಧ್ಯವಾಗಿತ್ತು. ಹನ್ನೊಂದು ವರ್ಷದ ಜೀವನ.... ನೇತ್ರಾವತಿ ಪಯಸ್ವಿನಿಗಳ ಸಂಗಮದಂತೆ, ಏಕರಸವಾಗಿ, ಏಕವಾಹಿನಿಯಾಗಿ, ಪ್ರಪಂಚ ಸಮುದ್ರದ ಕಡೆಗೆ ದುಮುಕಿದ್ದುವು. ಈ ರೀತಿಯ ಅಭೇದ ಸಂಬಂಧವನ್ನು ಪರಿಸ್ಥಿತಿ ಒದಗಿಸಿತ್ತು. ಕಠಿನ ಘರ್ಷಣೆಗಳಿರಲಿಲ್ಲ; ಒಬ್ಬರು ಇನ್ನೊಬ್ಬರನ್ನು ಪ್ರಬಲವಾಗಿ ಆಕ್ಷೇಪಿಸುವ ಸಂದರ್ಭವಿರಲಿಲ್ಲ. ಒಬ್ಬರ ನಡತೆ ಮತ್ತೊಬ್ಬರಿಗೆ ಚಿನ್ನ—ಹೊನ್ನು! ವಿಶ್ವಾಸವು ಇಷ್ಟು ಬಲವಾಗಿತ್ತು. ಹಾಗೇಕೆ? ಹೀಗೇಕೆ? ಎಂದು ಪ್ರಶ್ನಿಸಿ, ತಂತಮ್ಮ ನಡತೆಗಳನ್ನು ತಾವು ತಾವೇ ವಿಮರ್ಶಿಸಿ, ಟೀಕಿಸಿ, ಖಂಡಿಸಿ, ಉತ್ತರಕೊಟ್ಟು ತಪ್ಪೊಪ್ಪುಗಳನ್ನು ತೂಗುವ ಸಂಪ್ರದಾಯಕ್ಕೆ ಅವರ ಬಾಳುವೆಯಲ್ಲಿ ಇದುವರೆಗೆ ಎಡೆದೊರೆತಿರಲಿಲ್ಲ. ದೊರೆತಿದ್ದರೆ ಬಹುಶಃ ಲೇಸಾಗುತ್ತಿತ್ತೇನೋ! ಹೊಂದಿಕೆಯ ಸುಖದಲ್ಲಿ ಕೂಡಿ ಬಾಳಿದ ವ್ಯಕ್ತಿಗಳ ದೃಷ್ಟಿ ಮಂದವಾಗಿರುತ್ತದೆ. ಆಗಾಗ ವಿಷಮಗಳೊದಾಗಿ ಅವುಗಳನ್ನು ಸೂಕ್ಷ್ಮವಾಗಿ ಪರಾಮರ್ಶಿಸಿ—ವಿಮರ್ಶೆಯ ಲಾಭವಾಗಿ, ಪರಸ್ಪರ ವಿಶ್ವಾಸವನ್ನು ಪಡೆಯುವವರ ಜೀವನದಲ್ಲಿ ವೈರಸ್ಯಗಳು ಬಂದರೂ, ಹೃದಯ ಬಂಧ ಕಡಿದು ಹೋಗುವುದಿಲ್ಲ. ಅಂಥ ವಿಷಮಗಳು ಅಭಿಪ್ರಾಯ ವ್ಯತ್ಯಾಸ ಎಂದೆನಿಸಿಕೊಂಡು ಜೀವನಕ್ಕೆ ಒಂದು ಬಗೆಯ ಸೊಗಸನ್ನು ಕೊಡುತ್ತವೆ.

ಕಾಮಾಕ್ಷಿ ಮಾಡಿದ ಮಹಾಪರಾಧವೆಂದರೇನು? ಎಂಬುದನ್ನು ನಿರ್ದೇಶಿಸುವುದು ಸುಲಭವಲ್ಲ. ನ್ಯಾಯದರ್ಶಿಗಳಾರು? ಎಂದೂ ಹೇಳಬರುವುದಿಲ್ಲ. ಕಾರಣಕೊಟ್ಟು ಅಪರಾಧ ಸ್ಥಾಪನೆ ಮಾಡುವವರೂ ಇಲ್ಲ. ಕಂಡ ಕಣ್ಣೂ ಇಲ್ಲ. ಕಿವಿಗಳಿಗೆ ಏನೇನೋ ಕೇಳಿದೆ; ಕಿವಿಗಳ ಮೂಲಕ ಕಣ್ಣುಗಳೇನನ್ನೊ ಕಂಡಿವೆ. ಆದರೆ ಹೀಗೆ ಕಂಡುದೆಲ್ಲ ಕಲ್ಪನೆ—ಮಿಥ್ಯೆ—ಎಂದು ಪ್ರಮಾಣೀಕರಿಸುವುದು ಹೇಗೆ? ದೇವರು ಇಂತಹ ವಿಷಯಗಳಲ್ಲಿ ಕೈಹಾಕುವುದಿಲ್ಲ. ಅವನು ಅಂತಃಕರಣ ಸಾಕ್ಷಿಯೆಂಬುದು ನಿಜವಾದರೆ, ತಿಳಿಗನ್ನಡಿಯಂತೆ ಶುಭ್ರವಾದ ಆಕೆಯ ಅಂತರಂಗವನ್ನು ಅವನು ಕಂಡಿರಬೇಕು. ಆದರೆ, ಈ ಬಾಳಿನ, ಕಣ್ಣ ಮುಂದೆ ಕಾಣುವ ಸಾಕಾರ

ದೈವದ ಕಣ್ಣು ಏನನ್ನು ಕಂಡಿರಬಹುದೊ ಯಾರು ಬಲ್ಲರು? ತಾನಾದರೂ ಸಕಾಲದಲ್ಲಿ ಹೃದಯವನ್ನು ನಿವೇದಿಸಲಿಲ್ಲ; ಇದು ಸರಿಯೆ? ಒಲೆಯ ಮೇಲಿಟ್ಟ ಎಸರಿನಂತೆ ಕಾಮಾಕ್ಷಿಯ ಎದೆ ಕುದಿಯುತ್ತಿತ್ತು. ಸಾಂತವನ್ನು ಇನ್ನೊಂದು ಸಂಬಂಧದಲ್ಲಿ ಆಡಿದ ಮಾತು—ತನ್ನ ದೃಷ್ಟಿಗೂ ಲೋಕದ ದೃಷ್ಟಿಗೂ ಇರುವ ಅಂತರವನ್ನು ಬಲು ಚೆನ್ನಾಗಿ ಪ್ರದರ್ಶಿಸಿಬಿಟ್ಟಿತು.

ಒಮ್ಮೆ ಹೃದಯವನ್ನು ಬಿಚ್ಚಿ ಹೇಳಿಬಿಡುತ್ತೇನೆ; ಎಂದಾಕೆಗೆ ಗೋಚರಿಸಿದಾಗ ಮತ್ತೊಂದು ದೊಡ್ಡ ಸಂದೇಹ ಭೂತಾಕಾರದಲ್ಲಿ ಎದ್ದುನಿಂತು ಅಡ್ಡಗಿಸಿತು. ಅಂದೇ ಏಕೆ ಹೇಳಲಿಲ್ಲ? ಎಂಬ ಪ್ರಶ್ನೆಬಂದರೆ ಉತ್ತರವೇನು? ಸಕಾಲದಲ್ಲಿ ಹೇಳಬೇಕಾದುದನ್ನು ಕಾಲಾತಿರೇಕವಾಗಿ ಹೇಳಬೇಕೆ? ಪತ್ರಿಕೆಗಳು ನಂಜಿನ ಬಾಣಗಳನ್ನೆಸೆದು, ನಿಂದಕರು ನಿಂದಿಸಿ, ಅಪಹಾಸ್ಯಮಾಡುವವರು ಮಾಡಿದ ಮೇಲೆ, ತನಗೂ ತಿಳಿದುಬಂದ ಲಜ್ಜಾ ವಿಷಯವನ್ನು ಈಕೆ ಬೇರೆ ಬಣ್ಣದಲ್ಲಿ ಬರೆಯುತ್ತಿದ್ದಾಳೆ—ಎಂದು ಪ್ರಭಾಕರನೆಣಿಸಿದರೆ, ತನ್ನ ಆತ್ಮ ನಿವೇದನೆಯ ಫಲವೇನು? ಅವಳು ಹೀಗೆ ಉಭಯಸಂಕಟದಲ್ಲಿ ಸಿಲುಕಿದುದು ಇದೇ ಮೊದಲಬಾರಿ. ಅದರ ತೀಕ್ಷ್ಣತೆಯೆಷ್ಟು? ಎಂಬುದನ್ನು ಇದುವರೆಗೆ ತಿಳಿದಿರಲಿಲ್ಲ.

ಇತ್ತೀಚೆಗೆ ಪ್ರಭಾಕರನಾದರೂ ವಿಚಿತ್ರ ಪರಿವರ್ತನವನ್ನು ಹೊಂದಿದ್ದಾನೆ. ಕಾಮಾಕ್ಷಿಯಲ್ಲಿ ಮನಬಿಚ್ಚಿ ಮಾತಾಡುವುದಿಲ್ಲ; ಎದೆಬಿಚ್ಚಿ ನಗುವುದಿಲ್ಲ. ವ್ಯವಹಾರಕ್ಕೆ ಬೇಕಾದ ಮಾತುಕತೆಗಳು ನಡೆಯುತ್ತವೆ. ಆದರೆ, ಹೃದಯಕ್ಕೆ ಹೃದಯವು ಹೆಣೆದಂತೆ ನುಡಿಯುವುದಾಗಲಿ, ನಡೆಯುವುದಾಗಲಿ—ಇಲ್ಲ. ಇದಕ್ಕೆ ಕಾರಣವೇನು? ಲೋಕದ ಕಣ್ಣುಗಳಿಂದಲೆ ಪ್ರಭಾಕರನೂ ಪರಿಕಿಸುತ್ತಿರುವನೆ?

ಕಾರಣವೇನೂ ಇರಬಹುದು. ಕಾಮಾಕ್ಷಿ ಅಭಿಮಾನಕ್ಕೆ ತಿಲೋದಕ ಕೊಡಲು ಸಿದ್ಧಳಾಗಿರಲಿಲ್ಲ. ಜೀವನದಲ್ಲಿ ಅನೇಕ ಸಂಗತಿಗಳು ನಡೆದುಹೋಗಿದ್ದಿರಬಹುದು. ಪ್ರತಿಯೊಂದನ್ನು ವಿವರಿಸಿ ಹೇಳಲಾಗುತ್ತದೆಯೆ? ಅದರಂತೆ ಇದೊಂದು ಪ್ರಕರಣವೂ ಆಗಿಹೋಯಿತು. ಅವಳ ತಪ್ಪೇನೂ ಇರಲಿಲ್ಲ. ಮಾಡದ ತಪ್ಪನ್ನು ಮಾಡಲಿಲ್ಲ ಎಂದು ಸಾಧಾರ

ವಾಗಿ ರುಜುಗೊಳಿಸಬೇಕೆಂಬ ಬುದ್ಧಿಯೇ ನಿರಭಿಮಾನತೆಯ ಚಿಹ್ನೆಯಾಗಿದೆ. ಸಂದರ್ಭಬರಲಿ....ಆಗ ಹೇಳಬೇಕಾದುದನ್ನು ಹೇಳುವುದಕ್ಕೆ ಏನು ಭಯ? ಎಂದು ಆಕೆ ಒಂದು ಬಗೆಯ ಧೈರ್ಯದಲ್ಲಿಯೆ ಇದ್ದಳೆನ್ನಬಹುದು.

೧೮

ತನ್ನ ಮಗಳ ವಿಷಯವಾಗಿ ಅಪಹಾಸ್ಯದ ಧ್ವನಿಕೊಡುತ್ತಿದ್ದ ವಾರ್ತೆಗಳನ್ನು ಓದಿದಂದಿನಿಂದ ಕೇಶವಯ್ಯನಿಗೆ ನಿದ್ದೆ ಚೆನ್ನಾಗಿ ಬರುತ್ತಿರಲಿಲ್ಲ. ನಡುರಾತ್ರಿಯಲ್ಲಿ ಹಾಸಿಗೆಯ ಮೇಲೆ ಎದ್ದು ಕುಳಿತು ಹೀಗೂ ಆಯಿತೆ? ಹೀಗೂ ಆಯಿತೇ? ಇಳಿ ವಯಸ್ಸಿನಲ್ಲಿ ಇಂತಹ ಅಪಕೀರ್ತಿಯನ್ನು ಕೇಳಬೇಕಾಯಿತೆ? ಎಂದು ಕಿವಿಯಿರುವವರು ಕೇಳುವಷ್ಟು ದೊಡ್ಡ ಸ್ವರದಲ್ಲಿ ಆಡುತ್ತಿದ್ದ.

ಹತ್ತು ಹದಿನೈದು ದಿವಸಗಳು ಕಳೆದುಹೋದುವು. ಇಷ್ಟರಲ್ಲಿ ನಾಗೇಶನ ಪತ್ರಗಳು ಒಂದೆರಡಾದರೂ ಸುಶೀಲಮ್ಮನಿಗೆ ಬಂದಿರಬೇಕು. ಭಾಗ್ಯದೇವತೆಗಳು ತಮ್ಮ ಮನೆತನವನ್ನು ಬಿಟ್ಟು ಪಲಾಯನಮಾಡುತ್ತಿವೆ—ಎಂಬ ಹೆದರಿಕೆ ಅವಳನ್ನೂ ಹಿಡಿದಿತ್ತು. "ನೀವೇ ಒಮ್ಮೆ ಮಂಗಳೂರಿಗೆ ಬಂದು ಮಗಳಿಗೆ ನೀತಿ ಹೇಳಬಾರದೇಕೆ?" ಎಂದು ಸುಶೀಲಮ್ಮ ಕೇಳಿದಳು. "ಹೋಗಬಹುದು; ಹೇಳಬಹುದು; ಈಗಿನ ಹುಡುಗಿಯರು....ಹೇಳಿದ ಮಾತಿಗೆ ಮೂರು ಕಾಸಿನ ಬೆಲೆಯನ್ನಾದರೂ ಕೊಡುತ್ತಾರೋ....ಯಾರು ಬಲ್ಲರು? ಇಂತಹ ಅಪವಾದಗಳನ್ನು ಪತ್ರಿಕೆಗಳಲ್ಲಿ ಓದುವ ಮುಂಚೆ ನನ್ನ ಕಣ್ಣುಗಳು ಮುಚ್ಚಿದ್ದರೆ ಎಷ್ಟು ಸುಖವಾಗುತ್ತಿತ್ತು?" ಎಂದು ಕೇಶವಯ್ಯ ಕಣ್ಣೀರುಮಿಡಿದ.

ಕೊನೆಗೆ ಸುಶೀಲಮ್ಮ—ಕೇಶವಯ್ಯ ಇಬ್ಬರೂ ಗಾಢಾಲೋಚನೆಯನ್ನು ಮಾಡಿ ಈ ನಿರ್ಧಾರಕ್ಕೆ ಬಂದರು:

ಅವರ ದೃಷ್ಟಿಯಲ್ಲಿ ಇಷ್ಟೆಲ್ಲಕ್ಕೂ ಕಾರಣವಾದವನು ಆ ಶ್ಯಾಮಣ್ಣ. ಆತನು ಯಾವುದೋ ಒಂದು ಕೆಡು ಮುಹೂರ್ತದಲ್ಲಿ ತಮ್ಮ ಅಳಿಯನ

ಹೊಸ್ತಿಲೊಳಗೆ ಕಾಲಿಡುತ್ತಿದ್ದಾನೆ. ಬೋಳು ಮರವದು; ಅದಕ್ಕೆ ಗಾಳಿಯ ಹೆದರಿಕೆಯೇನು? ಚುನಾವಣೆಯೊಂದು, ಸಭೆಯೆಂದು, ಭಾಷಣವೆಂದು ಕಾಮಾಕ್ಷಿಯ ತಲೆಯಲ್ಲಿ ಅನವಶ್ಯ ಯೋಚನೆಗಳನ್ನು ಹುಟ್ಟಿಸಿದವನು ಆ ಕುಹಕಿಯೆ.......ವಶಮದ್ದು ಹಾಕಿದನೊ.......ಮಾಯಕ ಮಾಡಿದನೊ ಯಾರು ಬಲ್ಲರು? ಅವನನ್ನು ಜಾಡಿಸಿ ಓಡಿಸಿಬಿಟ್ಟರೆ ವಿಪತ್ಪರಿಹಾರವಾಗುವುದು. ಮಂಗಳೂರಿಗೆ ಹೋಗಿ, ತಮ್ಮ ಅಳಿಯನಿಗೂ ಮಗಳಿಗೂ ಕರ್ತವ್ಯೋಪದೇಶ ಮಾಡುವುದಕ್ಕೆ ಅನುಕೂಲವಾದ ಅವಕಾಶ ದೊರೆಯುವ ಹಾಗಿಲ್ಲ; ಆ ನಾಯಿ ಪರಿಮಳ ಮೂಸಿಕೊಂಡು ಬಂದೀತು.

ಗುರುಪುರದ ಸಭೆಯ ಕತೆಗೆ ನಾಯಕನು ಶ್ಯಾಮಣ್ಣ....ಕಾಮಾಕ್ಷಿ ಶ್ಯಾಮಣ್ಣ ಇವರಿಬ್ಬರೇ ಹೋಗಬೇಕೆಂದಿದ್ದರು. ಇದು ಚೆನ್ನಾಗಿಲ್ಲ; ಎಂದು ನಾಗೇಶ ಸ್ವತಃ ಹೋದ. ಅವನು ಪುರುಷನಾದರೂ ಸಂಬಂಧಿಕನಲ್ಲವೆ? ಜನರ ಕಣ್ಣಿಗೆ ಮಣ್ಣನ್ನಾದರೂ ಎರಚೋಣ....ಎಂದು ತಾನು ಗುರುಪುರಕ್ಕೆ ಹೋಗಬೇಕಾಯಿತು. ಹೋಗುವುದಕ್ಕೆ ಪ್ರಾಯಶ್ಚಿತ್ತ ಸಿಕ್ಕಿತು....ಎಂದು ನಾಗೇಶ ಸ್ವತಃ ಸುಶೀಲಮ್ಮನಿಗೆ ಬರೆದಿದ್ದಾನೆ.

ಪರಿಸ್ಥಿತಿ ಹೀಗಿರುತ್ತಾ ಕಾಮಾಕ್ಷಿಯನ್ನೆ ಬರಮಾಡುವುದು ನಿಶ್ಚಿತವೆಂದಾಯಿತು. ಕೇಶವಯ್ಯ ಕೂಡಲೆ ಪತ್ರಬರೆದು—

ಮಗು! ಕಾಮಿ!

ಈ ಪತ್ರ ನಿನ್ನ ಕೈಸೇರಿದ ಕೂಡಲೆ, ಒಮ್ಮೆ ಇಲ್ಲಿಗೆ ಬರಲೇಬೇಕು. ಆ ಕೆಲಸವಿದೆ—ಈ ಕೆಲಸವಿದೆ ಎಂದು ನೆವಹೇಳಿ ತಪ್ಪಿಸಿಕೊಳ್ಳಬೇಡ. ಇದು ನಿನ್ನ ತಂದೆಯ ಆಜ್ಞೆ. ನಿನ್ನ ತಾಯಿಯಾದ ಚಿಕ್ಕತಾಯಿಯ ಆಜ್ಞೆ.

ಇಂತಹ ಜರೂರಿನ ಕರೆಯೇಕೆ? ಎಂದು ನೀನು ಕೇಳಬಹುದು. ಇದು ಜರೂರು ಅಲ್ಲ; ಕರೆಯೂ ಅಲ್ಲ. ನೀನು ತವರು ಮನೆಗೆ ಬಾರದೆ ವರ್ಷ ಎಷ್ಟಾಯಿತು? ಕರೆಯದೆ ಬರಬೇಕಾದವುಗಳನ್ನು ನಾನೆಷ್ಟು ಬಾರಿ ಆಮಂತ್ರಿಸಲಿಲ್ಲ! ನೀನು ಬಂದೆಯಾ? ಈ ಬಾರಿ ಲೇದು ಎನ್ನ ಕೂಡದು.

ಕೆಲಸ ಇಲ್ಲದೆ ಬರುವುದಕ್ಕೆ ಒಲ್ಲದವಳು ನೀನು—ಎಂಬುದನ್ನು ಬಲ್ಲೆ. ಇಲ್ಲಿ ಮಾಡತಕ್ಕ ಕೆಲಸಗಳಿವೆ. ನೀನು ತಂದೆಯ ಹೃದಯಕ್ಕೆ ಸಮೀಪಗತಳಾಗಬೇಕು. ಚಿಕ್ಕಮ್ಮನ ಮಗಳು ಎನಿಸಿಕೊಳ್ಳಬೇಕು. ಇದು ಅವಶ್ಯ ಕರ್ತವ್ಯ. ಬರಲಾರೆ ಎನ್ನುವ ಅಧಿಕಾರ ನಿನಗಿಲ್ಲ.

ಎಷ್ಟೆಂದರೂ ತಂದೆಯ ಮನಸ್ಸಲ್ಲವೇ? ಸಂದೇಹಮಯ ಸ್ಥಿತಿಯಲ್ಲಿ ನಿನ್ನನ್ನು ಇರಿಸುವುದಕ್ಕೆ ಮನಸ್ಸಿಲ್ಲ. ಹೇಳಿಬಿಡುತ್ತೇನೆ. ನನ್ನ ಕರೆ ಇದಲ್ಲ; ಇದು ಕರಕರೆ! ಪತ್ರಿಕೆಗಳಲ್ಲಿ ಏನೋ ಓದಿದೆ. ಸಿಡಿಲು ಹೊಡೆದಂತಾಯಿತು. ಇದನ್ನು ಸಹಿಸಿಕೊಂಡು ಸುಮ್ಮನೆ ಕುಳಿತಿರುವುದೇ? ಮಾನ ನಷ್ಟಕ್ಕೆ ದಾವೆಮಾಡಬಾರದೇಕೆ? ನಿಂದಿಸುವ ಜನರ ಬಾಯಿಗೆ ಕೀಲು ಹಾಕಿ ಮುಚ್ಚಬಾರದೇಕೆ?

ನಿಮ್ಮ ಸಾಂಪತ್ತಿಕ ಸ್ಥಿತಿ ಚೆನ್ನಾಗಿಲ್ಲ—ಎಂದು ಕೇಳಿದ್ದೇನೆ. ಎಷ್ಟು ಹಣ ಬೇಕು; ಎಂಬುದನ್ನು ತಿಳಿಸು. ಪತ್ರಿಕೆಗೆ ಎಷ್ಟು ಬೇಕು? ದಾವೆಗೆ ಎಷ್ಟು ಬೇಕು? ಸದ್ಯದ ಅಗತ್ಯದ ಗರ್ಜಗೆ ಎಷ್ಟು ಬೇಕು? ನೀನು ಹೇಳುವುದೇ ತಡ. ಹಣದ ಗಂಟು ನಿನ್ನ ಕೈಯಲ್ಲಿ.

ಬೇರೆ ಯಾವ ಪ್ರತ್ಯುತ್ತರಗಳನ್ನು ಕೇಳುವುದಕ್ಕೂ ನಾನು ಸಿದ್ಧನೆ. ಆದರೆ "ಬರಲಾರೆ"—ಎಂಬುದನ್ನು ಕೇಳುವುದಕ್ಕೆ ಸಿದ್ಧನಾಗಿಲ್ಲ.

ನೀನು ಇತ್ತೀಚೆಗೆ ಸ್ವಸ್ಥಳಾಗಿಲ್ಲ; ಆಗಾಗ ವಾಂತಿಯಾಗುತ್ತದೆ; ಎಂದು ಕೇಳಿದ್ದೇನೆ. ಕೇಳಿದಂದಿನಿಂದ ನಿನ್ನ ಚಿಕ್ಕಮ್ಮನ ಮೆದುಳು ಅವಳ ಸ್ವಾಧೀನತೆಯಲ್ಲಿಲ್ಲ.

ಇಂತೀ ಆಶೀರ್ವಾದ.

ಪತ್ರವನ್ನು ಟಪ್ಪಾಲಿಗೆ ಒಪ್ಪಿಸುವುದು ಚೆನ್ನಾಗಿ ತೋರದುದರಿಂದ ತನ್ನ ಮನೆಯಾಳು ತಿಮ್ಮನ ವಶದಲ್ಲಿ ಕೊಟ್ಟು ಕೇಶವಯ್ಯ ಅವನನ್ನು ಮಂಗಳೂರಿಗೆ ಕಳುಹಿಸಿದ. ತಿಮ್ಮ ನೆಟ್ಟನೆ ಸಂಗ್ರಾಮದ ಕಚೇರಿಗೇ ನಡೆದ.

ಹೊತ್ತು ಮಧ್ಯಾಹ್ನವಾಗಿತ್ತು. ಕೆಲಸದವರು ಊಟಕ್ಕೆ ಹೋಗಿದ್ದರು. ಪ್ರಭಾಕರನು ಅರ್ಧ ಘಂಟೆ ಮುಂಚಿತವಾಗಿ ಮನೆಯ ಕಡೆಗೆ

ಹೊರಟಿದ್ದ. ಶ್ಯಾಮಣ್ಣ ಎಲ್ಲಿಗೋ ಹೋಗಿದ್ದ. ತಿಮ್ಮ ಬಂದಾಗ ಕಾಮಾಕ್ಷಿಗೆ ಆಶ್ಚರ್ಯವಾಗಲಿಲ್ಲ. ಅವನು ಒಮ್ಮೊಮ್ಮೆ ಹೀಗೆ ಮುಖ ತೋರಿಸುವ ಕ್ರಮವಿತ್ತು.

ಪ್ರಾರಂಭದ ಮಾತುಗಳಾದ ಮೇಲೆ "ರಾಯರು ಈ ಕಾಗದವನ್ನು ಕೊಟ್ಟಿದ್ದಾರೆ!" ಎನ್ನುತ್ತ ಪತ್ರವನ್ನು ಅವಳ ಕೈಯಲ್ಲಿಟ್ಟ.

ಕಾಮಾಕ್ಷಿ ಪತ್ರವನ್ನೋದಿದಳು. ಓದಿ ಮುಗಿಸುವಷ್ಟರಲ್ಲಿ ಅವಳ ಮುಖವೂ ಕತ್ತಲಿಸಿತು.

"ತಿಮ್ಮ! ಇಂದೆ ಹೋಗುವೆಯಾ? ಅಥವಾ ನಾಳೆ ಹೋಗುವೆಯಾ? ತಂದೆಯಲ್ಲಿ ಹೇಳು—ಅಥವಾ ಹೇಳುವುದಕ್ಕೇನೂ ಇಲ್ಲ. ನಾನೇ ಬರೆದು ತಿಳಿಸುತ್ತೇನೆ"—ಎಂದು ಕಾಮಾಕ್ಷಿ ಪತ್ರ ಬರೆಯತೊಡಗಿದಳು; ಬರೆಯುವುದಕ್ಕೆ ಹೆಚ್ಚು ಸಮಯ ಬೇಕಾಗಲಿಲ್ಲ. ಅದರಲ್ಲಿದ್ದುದು ಕೆಲವೇ ಪಂಕ್ತಿಗಳು.

"ಎದೆಯಿಂದ ಹೊರಟುಬಂದ ನಿಮ್ಮ ಮಾತುಗಳನ್ನು ಉಲ್ಲಂಘಿಸುವುದು ನನಗೆ ಅಸಾಧ್ಯ. ಹೀಗಿದ್ದರೂ ಹೇಳಬೇಕಾದುದನ್ನು ಸ್ಪಷ್ಟವಾಗಿ ಬರೆದು ಬಿಡುತ್ತೇನೆ. ಕಚೇರಿಯನ್ನು ಬಿಟ್ಟುಬರುವುದು ಸದ್ಯಕ್ಕೆ ಅಸಾಧ್ಯ. ಒಂದು ನಿಮಿಷ ಬಿಡುವಿಲ್ಲ. ರೋಮ ರೋಮದಲ್ಲಿ ಕೆಲಸಗಳು ಅಂಟಿಕೊಂಡಿವೆ. ಯಜಮಾನರಿಗೂ ಸ್ವಲ್ಪ ಅಸ್ವಾಸ್ಥ್ಯವಿದ್ದಂತೆ ತೋರುತ್ತದೆ. ತಮ್ಮ ಒಡಲಿಗೆ ಏನಾದರೂ ಬಾಯಿಬಿಟ್ಟು ಹೇಳುವ ಸ್ವಭಾವ ಅವರದಲ್ಲ. ಇನ್ನು ಪತ್ರಿಕೆಗಳಲ್ಲಿ ಬಂದ ಸಮಾಚಾರ....ಕೆಟ್ಟ ನಾಲಗೆಗಳು ಹೇಗೂ ಹೊಡೆಯುತ್ತವೆ. ನಾನೇನು ಮಾಡಲಾಗುತ್ತದೆ? ಗುರುಪುರದ ಸಭೆಯ ವೃತ್ತಾಂತದಿಂದ ಲೋಕಕ್ಕೆ ಪ್ರಳಯ ಬಂದಿರಬಹುದು. ಆದರೆ ನಮ್ಮ ಹೃದಯದ ನಾಡಿಗಳು ನಿಂತಿಲ್ಲ. ಒಮ್ಮೆಯಾದರೂ ಅವರು ಹೀಗೇಕೆ ಆಯಿತೆಂದು ವಿಚಾರಿಸಬೇಕೆ? ನಾನಾದರೂ ಹೇಳಲಿಲ್ಲ. ದಿನಕ್ಕೆ ಹತ್ತೆಂಟು ಸೊಳ್ಳೆಗಳು ಕಡಿಯುತ್ತವೆ. ಇದು ಹೇಳತಕ್ಕ ವೃತ್ತಾಂತವೇ? ತಂದೆ! ಧೈರ್ಯದಲ್ಲಿರು....ಸಹಾಯ ಬೇಕಾದಾಗ ಬೇಡದ ಮಗಳು ಇವಳಲ್ಲ.

ಚಿಕ್ಕತಾಯಿಗೆ ನನ್ನ ನಮಸ್ಕಾರಗಳು. ನಮ್ಮ ಯಜಮಾನರು ಒಂದೊಮ್ಮೆ ಸರಸಕ್ಕಾಗಿ ಹೇಳಿದ್ದರು—"ನೀನು ಹಸುಗೂಸನ್ನು ಕೈಯಲ್ಲಿ ಹಿಡಿದುಕೊಂಡಿರುವಾಗ, ಸುಂದರವಾದ ಭಾವಚಿತ್ರವೊಂದನ್ನು ತೆಗೆದು ಚಿಕ್ಕಮ್ಮನಿಗೆ ಕಳುಹಿಸಬೇಕೆಂದು." ಇನ್ನೆಂಟು ತಿಂಗಳಲ್ಲಿ ಅಂತಹ ಚಿತ್ರವೊಂದನ್ನು ಕಳುಹಿಸುತ್ತೇನೆ. ಆ ಮುಂಚೆ ಸಾಧ್ಯವಾದರೆ ಬರುತ್ತೇನೆ....

ನಿನ್ನ ಪ್ರೀತಿಯ ಮಗಳು,
ಕಾಮಿ.

ಪತ್ರವನ್ನು ಲಕೋಟೆಯೊಳಗೆ ತುರುಕಿಸಿ ಕೂಡಲೆ ತಿಮ್ಮನಕೈಗೆ ಎಸೆಯುವುದರಲ್ಲಿದ್ದಳು. ಆಗ ಒಂದು ಯೋಚನೆ ಹೊಳೆಯಿತು. ಇದುವರೆಗೆ ತಾನು ಗಂಡನಲ್ಲಿ ಪ್ರಸ್ತಾವಿಸದ ವಿಷಯವನ್ನು ತಿಳಿಸುವುದಕ್ಕೆ ಇದಲ್ಲವೆ ಸುಸಂದರ್ಭ? ನಿತ್ಯವಿಧಿಯಲ್ಲಿ ಇಂತಹ ಎಷ್ಟೊ ಪತ್ರಗಳು ಬರುತ್ತವೆ; ಹೋಗುತ್ತವೆ. ಅವುಗಳನ್ನು ಗಂಡನಿಗೆ ತೋರಿಸುವ ಪರಿಪಾಟಿಯಿರಲಿಲ್ಲ. ಈ ಪತ್ರವನ್ನು ತೋರಿಸುವಾಗ—ಆತನ ಮನಸ್ಸಿನಲ್ಲೇನಾದರೂ ಸಂಶಯ ಅಂಟಿಕೊಂಡಿದ್ದರೆ ಅದು ಹೊರಬೀಳುವುದಲ್ಲವೆ?

ಕೊನೆಗೆ "ತಿಮ್ಮ! ನೀನು ಮನೆಗೆ ಹೋಗು....ಪೇಟೆಯಲ್ಲೇನಾದರೂ ಕೆಲಸವಿದ್ದರೆ ಮುಗಿಸಿಕೊಂಡು ಬಾ....ನಾಳೆ ಬೆಳಗಾತ ಹೋಗಬಹುದಂತೆ!" ಎಂದಳು.

"ಆಗಬಹುದಮ್ಮ!" ಎಂದು ತಿಮ್ಮ ಕಾಲುಕಿತ್ತ.

೧೯

ಆ ರಾತ್ರಿ ಗಂಡ ಹೆಂಡಿರಿಬ್ಬರೂ ಸಮಯಕ್ಕೆ ಮುಂಚೆ ಮನೆಗೆ ಬಂದಿದ್ದರು. ಒಂಬತ್ತು ಗಂಟೆಯೊಳಗೆ ಊಟ ಮುಗಿಸಿ, ಪದ್ಧತಿಯಂತೆ ಮುಖಮಂಟಪದಲ್ಲಿ ಕುಳಿತು ಶ್ಯಾಮಣ್ಣನೊಡನೆ ಚಕ್ಕಂದ ಹೂಡಿ ತಮ್ಮ ಮಲಗು ಕೋಣೆಗೆ ಹೋದರು. ಒಂದು ಗಂಟೆಯಾದರೂ ಮುಂದಿನ

ಕಾರ್ಯಗಳನ್ನು ಕುರಿತು ಚರ್ಚಿಸದೆ ನಿದ್ದೆ ಬಾರದಿದ್ದ ದಂಪತಿಗಳ ನಡುವೆ ಆ ದಿನ ಮೌನದ ಪರದೆಯೊಂದು ಬಿದ್ದ ಹಾಗಿತ್ತು. ಪ್ರಭಾಕರ ತನ್ನ ಮಂಚದ ಹಾಸಿಗೆಯ ಬಳಿಯಲ್ಲಿಯೆ ಒಂದು ಪೀಠವನ್ನಿಟ್ಟುಕೊಂಡು ಅದರ ಮೇಲೆ ದೀಪವನ್ನಿರಿಸಿ ಒಂದು ಪುಸ್ತಕವನ್ನು ಓದತೊಡಗಿದ. "Problems of Wedlock" ಅಥವಾ ವಿವಾಹದ ಸಮಸ್ಯೆಗಳು.... ಎಂಬುದೇ ಅದರ ಹೆಸರು. ಗಂಡ ಹೆಂಡಿರೆಂದೆನಿಸಿಕೊಳ್ಳುವುದು ಅದೆಷ್ಟು ಸುಲಭವಾದರೂ, ಒಡಬಾಳುವಾಗ ಜೀವನ ಸಮುದ್ರದಲ್ಲಿ ಎಷ್ಟು ಬುದ್ಬುದಗಳು ? ತೆರೆಗಳು ? ಎಷ್ಟು ಸುಳಿಗಳು ? ಎಂಬುದನ್ನು ಅಮೇರಿಕದ ಗ್ರಂಥಕರ್ತನು ಸರಸವಾಗಿ ವರ್ಣಿಸಿದ್ದಾನೆ. ಅದರ ಅಕ್ಷರಗಳಲ್ಲಿ ಆತನ ನೋಟನೆಟ್ಟು ಹೋಗಿತ್ತು. ಅವನ ದೃಷ್ಟಿಯನ್ನು ಈ ಕಡೆಗೆ ಆಕರ್ಷಿಸುವುದಕ್ಕಾಗಿ ಕಾಮಾಕ್ಷಿ ತನ್ನ ಮಂಚದಲ್ಲಿಯೇ ಕುಳಿತು ಎರಡುಬಾರಿ ಗಂಟಲು ಕೆರೆದು ಕೆಮ್ಮಿದಳು. ದೃಷ್ಟಿ ಈ ಕಡೆಗೆ ಹೊರಳಲಿಲ್ಲ. ಮತ್ತೆ ಕೈಯಲ್ಲಿ ಎರಡೂ ಪತ್ರಗಳನ್ನು ಹಿಡಿದುಕೊಂಡು ಪ್ರಭಾಕರನ ಸಮೀಪಕ್ಕೆ ಬಂದು "ನೋಡಿದಿರಾ ಈ ಪತ್ರವನ್ನು !" ಎಂದು ಕೇಶವಯ್ಯ ಬರೆದಿದ್ದ ಪತ್ರವನ್ನು ಅವನ ಕೈಗೆಕೊಟ್ಟಳು.

ಪ್ರಭಾಕರ : ಅದನ್ನು ನಾನೇಕೆ ಓದಬೇಕು....?

ಕಾಮಾಕ್ಷಿ : ಓದಬೇಕಾದ ಕಾರಣದಿಂದ...

ಪ್ರಭಾಕರ : ಅಂತಹ ಕಾರಣವೇನು ?

ಕಾಮಾಕ್ಷಿ : ನಮ್ಮ ಲೋಕದಲ್ಲಿ ಪ್ರಳಯದ ಬೆಂಕಿಯ ಮಳೆ ಸುರಿಯುತ್ತಿದೆಯಂತೆ....

ಪ್ರಭಾಕರ : ನಾವಿನ್ನೂ ಬದುಕಿರುವೆವಲ್ಲ....ಪ್ರಳಯ ಎಲ್ಲಿಂದ ಬಂತು ?

ಈ ಪ್ರಶ್ನೆ ಕಾಮಾಕ್ಷಿಗೆ ರುಚಿಸಲಿಲ್ಲ. ಈ ಪ್ರಶ್ನೆಯಲ್ಲಿ ಕುದಿಯುವ ಉದ್ವೇಗವಿತ್ತು. "ನೀವು ಓದಲೇಬೇಕು !" ಎಂದು ಪತ್ರವನ್ನು ಬಿಚ್ಚಿ ಗ್ರಂಥದ ಹಾಳೆಗಳೆಡೆಯಲ್ಲಿ ಇಟ್ಟಳು.

ಬೇಡವಾಗಿದ್ದರೂ ಆ ಪತ್ರವನ್ನು ಓದಲೇ ಬೇಕಾಯಿತು ಪ್ರಭಾಕರ. ಅರ್ಥವಾಯಿತೇ ಇಲ್ಲವೇ....ಓದಿದನೇ ಇಲ್ಲವೇ ? ಓದುವುದಕ್ಕೆ ಬೇಕಾದ ನಿಮಿಷಗಳನ್ನು ಮೌನದಲ್ಲಿಯೇ ಕಳೆದು "ತೆಗೆದುಕೊ!" ಎಂದು ಪತ್ರ ವನ್ನು ಕಾಮಾಕ್ಷಿಯ ಕೈಗೆಕೊಟ್ಟ....ಆ ಕುರಿತು ಯಾವ ಅಭಿಪ್ರಾಯ ವನ್ನೂ ಹೇಳಲಿಲ್ಲ. ಅದರಲ್ಲಿ ಸೂಚಿತರಾದ ಕೇಶವಯ್ಯ....ಸುಶೀಲಮ್ಮ ಕಾಮಾಕ್ಷಿ....ಇವರಿಗೂ ತನಗೂ ಸಂಬಂಧವೇನೂ ಇಲ್ಲದಂತೆ—ಅದರಲ್ಲಿ ಬರೆದ ವಿಷಯಗಳು ತನ್ನ ವಿಚಾರಕ್ಕೆ ಬಾಹಿರವಾದುವು ಎಂಬಂತೆ, ಪತ್ರದ ಕಡೆಯಿಂದಲೂ ಕಾಮಾಕ್ಷಿಯ ಕಡೆಯಿಂದಲೂ ಕಣ್ಣುಗಳನ್ನು ಕಿತ್ತು ಓದುವುದರಲ್ಲಿ ಮಗ್ನನಾಗಿದ್ದ. ಇದು ಪರಿಗೆ ಪ್ರಳಯವಾಗಿರಲಿಲ್ಲ. ಪ್ರಭಾಕರನ ಈ ವಿಚಿತ್ರ ಮೌನದಲ್ಲಿ ತನ್ನ ಪ್ರಳಯವಾಯಿತು ಎಂದು ಭಾವಿಸಿ ಕಾಮಾಕ್ಷಿ ಕಣ್ಣುಗಳನ್ನೊರಸಿದಳು. ಆದರೆ ಹೆಂಡತಿಯ ಅಧಿ ಕಾರ ಅಷ್ಟರಲ್ಲಿಯೇ ನಿಲ್ಲಲಿಲ್ಲ. ತಾನು ಬರೆದ ಪತ್ರವನ್ನು ಓದಿಸಲೇ ಬೇಕೆಂದು. ಹೇಗಾದರೂ ಅವನ ಬಾಯಿಯಿಂದ ಎರಡು ಮಾತುಗಳನ್ನು ಹೊರಗೆಳೆಯಲೇ ಬೇಕೆಂದು, ತಾನು ಉತ್ತರವಾಗಿ ಬರೆದಿದ್ದ ಪತ್ರವನ್ನೂ ಅವನ ಕಣ್ಣ ಮುಂದೆ ಹಿಡಿದಳು.

"ನನಗೂ ಇದಕ್ಕೂ ಏನು ಸಂಬಂಧ ಕಾಮಾಕ್ಷಿ!"

"ಇಂತಹ ಮಾತಿನಿಂದ ನನ್ನ ಎದೆಯನ್ನೇಕೆ ಇರಿಯುತ್ತೀರಿ ?"

"ಬರೆದವನು ನಾನಲ್ಲ; ನನಗೆ ಬರೆದ ಪತ್ರವೂ ಅಲ್ಲ; ಪತ್ರಿಕೆ ಗಳಲ್ಲಿ ಬಂದ ವಾರ್ತೆಯಿಂದ ನನಗೆ ಹಾನಿಯಾದುದೂ ಇಲ್ಲ....ಇವೆಲ್ಲ... ನನ್ನ ವಿಷಯಗಳಲ್ಲ ಎಂದಾದ ಮೇಲೆ ನಿನ್ನ ಉತ್ತರಗಳಿಗೂ ನನಗೂ ಬಾದರಾಯಣ ಸಂಬಂಧವಾದರೂ ಏನು ಕಾಮಾಕ್ಷಿ ?"

ತನ್ನ ದಾಂಪತ್ಯ ಜೀವನದಲ್ಲಿ ಗಂಡಹೆಂಡಿರ ವೈರಸ್ಯದಿಂದ ಒಮ್ಮೆಯೂ ಕಣ್ಣೀರು ಸುರಿಸದವಳು ಇಂದು ಸಠ್ರೆಂದು ಕಂಬನಿ ಕರೆದಳು; ಅದಕ್ಕೆ ಅಂತ್ಯವೂ ಇಲ್ಲದಂತೆ ತೋರಿತು.

"ಅಳುವುದಕ್ಕೇನಿದೆ ಕಾಮಾಕ್ಷಿ ?"

" ಏನೂ ಇಲ್ಲ....ಅಳಬೇಕೆಂದು ತೋರಿತು ಅಷ್ಟೆ...."

" ಅಷ್ಟೆ ಆಗಿದ್ದರೆ ಅಳು ಕಾಮಿ....ಕಣ್ಣುಗಳು ಕರಗಿ ಹೋಗುವಷ್ಟು ಅಳು !"

" ನೀವು ನನ್ನನ್ನು ತಪ್ಪಾಗಿ ತಿಳಿದುಕೊಂಡಂತಿದೆ "

" ನಿನ್ನನ್ನು—ತಪ್ಪಾಗಿ ತಿಳಿಯುವವನು ನಾನು !"

" ನೀವು ತಪ್ಪಾಗಿ ತಿಳಿದುದೆಂದಲ್ಲ....ತಪ್ಪಾಗಿ ತಿಳಿಯುವುದಕ್ಕೆ ನಾನು ಆಸ್ಪದಕೊಟ್ಟಿರುವೆನು ಅಷ್ಟೆ"

" ನನಗೆ ತಿಳಿವಳಿಕೆಯೇ ಇಲ್ಲದ ಮೇಲೆ ತಪ್ಪೇನು? ಸರಿಯೇನು ?"

" ಕ್ಷಮಿಸಬೇಕು...."

" ಯಾವುದನ್ನು ಕಾಮಿ !"

" ನಾನು ಒಂದನ್ನು ಗುಟ್ಟಾಗಿ ಇಟ್ಟಿದ್ದೇನೆ"

" ನಿನಗೆ ಅಧಿಕಾರವಿದೆ !"

" ಆ ದಿನದ ನಮ್ಮ ಪ್ರಯಾಣದಲ್ಲಿ ನಾಗೇಶ ಅನುಚಿತವಾಗಿ ನಡೆದ"

" ಹಾಗೆ ನಡೆದುಕೊಳ್ಳುವುದಕ್ಕೂ ಅವನಿಗೆ ಅಧಿಕಾರವಿದೆ !"

" ಈ ಕೋಲಾಹಲದಲ್ಲಿ ಸಿಲುಕಿ ಕಷ್ಟಬರಿಸಿಕೊಂಡೆ !"

" ಏನದು ಕಷ್ಟ ?"

" ನಿಷ್ಕಾರಣವಾದ ಅಪವಾದ !"

" ಅಪವಾದ ಕೇಳುವುದಕ್ಕೆ ಸಿದ್ಧರಾಗಿಲ್ಲದೆ ಸಾರ್ವಜನಿಕ ರಂಗಕ್ಕೆ ಇಳಿಯುತ್ತಾರೆಯೆ ?"

" ಆಜ್ಞಾನ ನನಗೆ ಅಂದು ಇರಲಿಲ್ಲ"

" ಈಗಲಾದರೂ ಬಂತಷ್ಟೆ...."

" ಜ್ಞಾನ ಬರುವಾಗ ಆದ ನಷ್ಟ ?"

" ಏನು ನಷ್ಟವಾಗಿದೆ !"

" ಆಗಲಿಲ್ಲವೆಂದು ಭರವಸೆಕೊಡಿ "

" ಭರವಸೆಯಿಂದ ಯಾರಿಗೇನು ದೊರೆಯುತ್ತದೆ ಕಾಮಾಕ್ಷಿ ? ನಾಲ್ಕು ಹೊಳ್ಳುಮಾತುಗಳಲ್ಲಿ ಏನಿದೆ ?"

" ನಾಗೇಶನ ದೌರ್ಜನ್ಯ ಅಂದಿನ ವರೆಗೆ ತಿಳಿದಿರಲಿಲ್ಲ "

"ಪ್ರಪಂಚದಲ್ಲಿ ನಾವು ಕಲಿಯುದುದೇ ಹೆಚ್ಚು! ಕಷ್ಟಪಟ್ಟಾವರೂ ಕಲಿಯಬೇಕಾಗುತ್ತದೆ!"

" ನನ್ನ ಮನಸ್ಸು ಕಡಿಯುತ್ತಲೇ ಇತ್ತು "

" ಯಾತಕ್ಕಾಗಿ ?"

" ಅದೇ ದಿನ ಸಕಲವನ್ನೂ ತಿಳಿಸಲಿಲ್ಲ — ಎಂಬುದಕ್ಕಾಗಿ "

" ನೀನು ಏಕೆ ತಿಳಿಸಬೇಕಾಗಿತ್ತು ?"

" ನಮ್ಮ ದಾಂಪತ್ಯ ಧರ್ಮಕ್ಕಾಗಿ "

" ತಿಳಿಸದಿದ್ದುದರಿಂದ ಅದಕ್ಕೆ ಲೋಪ ಬಂತೆ? ಹೀಗೇಕೆ ಎಂದು ಹೇಳುವ ಸಂಪ್ರದಾಯವು ನಮಗಿತ್ತೆ ?"

" ಹೊಸತಾದ ಸಂಪ್ರದಾಯವನ್ನು ಮಾಡಿಕೊಳ್ಳಬೇಕಾಗಿದೆ "

"ಹಳೆದು ಹೊಸತು ಎಂಬುದೇ ಇಲ್ಲ ಕಾವಿ....ವಿಚಾರಿಸಿದರೆ ಎಲ್ಲವೂ ಹೊಸವೆ. ಎಲ್ಲವೂ ಹಳೆಯುದೆ....ಹೃದಯಗಳೆರಡು ಒಂದೇ ಗುರಿಯ ಕಡೆಗೆ ಒಂದೇ ಗತಿಯಿಂದ ಸರಳರೇಖೆಯ ಹಾಗೆ ಸರಿದು ಹೋಗುತ್ತಿರುವಾಗ ಹೇಳಬೇಕಾದುದೂ ಇಲ್ಲ; ಕೇಳಬೇಕಾದುದೂ ಇಲ್ಲ. ಒಂದು ಇನ್ನೊಂದಕ್ಕೆ ನೇರಾಗಿ ಕಾಣುತ್ತಿರುವುದಲ್ಲವೆ ? ಒಂದು ರೇಖೆ ವಕ್ರವಾಗಿದ್ದರೆ ತಾನೆ ಎರಡರ ಅಂತರ ಒಮ್ಮೊಮ್ಮೆ ಹೆಚ್ಚಾಗಿಯೂ ಕಡಿಮೆಯಾಗಿಯೂ ತೋರುವುದು. ಈ ಎರಡು ಸ್ವಭಾವಗಳಲ್ಲಿಯೂ ಹೊಸತನವೂ ಇಲ್ಲ; ಹಳೆತನವೂ ಇಲ್ಲ. ಸರಳವಾದುದು ವಕ್ರವಾಗುವಾಗಲೂ ವಕ್ರವಾದುದು ಸರಳವಾಗುವಾಗಲೂ ಆ ಮಾರ್ಪಾಟು ಹೊಸತೇನೋ ಎಂಬ ಭ್ರಾಂತಿಯಾಗುವುದು — ಅಷ್ಟೆ...."

ಪ್ರಭಾಕರನು ಒನಕೆಯಿಂದ ಕುಟ್ಟಿ ಆಕೆಯ ಎಲುಬು ಮಾಂಸಗಳನ್ನು ಹಸುಮುದ್ದೆಯಾಗಿ ಮಾಡಿದ್ದರೆ, ಅವಳಿಗೆ ಈಗ ಆದಷ್ಟು ಯಾತನೆಯಾಗುತ್ತಿರಲಿಲ್ಲ.

" ಹಾಗಾದರೆ ನನ್ನ ಡೊಂಕಿನಲ್ಲಿ ಹೊಸತನವನ್ನು ಕಂಡಿರಲ್ಲವೆ ?"

"ಎಂದೂ ಇಲ್ಲ ಕಾಮಿ. ಹಾಗೆ ಭಾವಿಸಬೇಕಾಗಿಲ್ಲ. ಸ್ಪಷ್ಟತೆಯ ಬಗ್ಗೆ ಒಂದು ಉದಾಹರಣೆ ಕೊಟ್ಟು ವಿವರಿಸಿದೆನಷ್ಟೆ. ಅದರಿಂದ ಸರಳತೆ ನನ್ನದು; ಡೊಂಕು ನಿನ್ನದು ಎಂಬ ಅರ್ಥ ಬರುವುದಿಲ್ಲ ಕಾಮಿ.... ಹಾಗೆ ಭಾವಿಸಿ ಕಣ್ಣೀರು ಸುರಿಯಬೇಕಾಗಿಲ್ಲ....ನನ್ನ ಸ್ವಭಾವವೇ ಪರಿವರ್ತನ ಹೊಂದಿ ವಿಕೃತವಾಗಿರಬಹುದು! ಯಾರು ಬಲ್ಲರು?"

"ಎರಡರಲ್ಲಿ ಯಾವುದು ಸತ್ಯವಾದರೂ ನನಗೆ ವ್ಯಸನ ತಾನೆ!"

"ವ್ಯಸನ ಬರಿಸಿಕೊಳ್ಳುವುದೇ ಮನುಷ್ಯನ ದೌರ್ಬಲ್ಯ"

"ನಾವೂ ಮನುಷ್ಯರಲ್ಲವೆ?"

"ಸಂದೇಹವೇನು? ಒಪ್ಪಿಕೊಳ್ಳೋಣ"

ಕಾಮಿಯ ಮಾತು ಕಟ್ಟಿಹೋಯಿತು. ಕಣ್ಣೀರಿನ ಕಟ್ಟೆ ಮಾತ್ರ ಕಟ್ಟಿರಲಿಲ್ಲ. "ನೀವು ಇತ್ತೀಚೆಗೆ ಹೀಗೇಕೆ ಅನ್ಯಮನಸ್ಕರಾಗಿದ್ದೀರಿ?" ಎಂದು ಕಾಮಿ ಕೇಳಿದಳು....

"ಮನಸ್ಸೆಂದರೇನು? ಅದನ್ನು ಹುಡುಕುತ್ತಿದ್ದೇನೆ." ಎಂದು ಪ್ರಭಾಕರನ ಉತ್ತರ ಬಂತು.

"ಶರೀರವು ಇಳಿಯುತ್ತಾ ಬಂದಿರುವುದಲ್ಲ!"

"ಮನಸ್ಸಿನ ತೊಡಿಗೆ ಅದು!"

ಕಾಮಾಕ್ಷಿಗೆ ತೃಪ್ತಿಯಾಗುವುದರ ಬದಲು ಒಗಟು ಮತ್ತಷ್ಟು ಕಠಿನವಾಯಿತು. "ಆದುದು ಇಷ್ಟೆ: ನಾಗೇಶನ ದುರುದ್ದೇಶವು ಅವನ ಚರ್ಯೆಯಲ್ಲಿ ಬಯಲಾಯಿತು. ಅವನಿಗೆ ಮಾತಿನಿಂದ ಬಲವಾಗಿ ಹೊಡೆದು ಮಾನವನ್ನುಳಿಸಿ ಬಂದೆ" ಎಂದಳು.

"ಚೆನ್ನಾಯಿತು. ಸ್ವತಂತ್ರ ವ್ಯವಹಾರಗಳು ಹಾಗೆ ಮಾಡತಕ್ಕುದೇ ಸರಿ. ಇದರಲ್ಲಿ ಹೇಳುವುದಕ್ಕೇನಿದೆ?"

ಹೇಳುವುದಕ್ಕೇನಿದೆ? ಎಂಬ ಮಾತಿನಿಂದ, ಪ್ರಭಾಕರ ಕಾಮಾಕ್ಷಿಯನ್ನು ತನ್ನ ಸಾಮೀಪ್ಯದಿಂದ ಕಿತ್ತು ದೂರಕ್ಕೆ ಬಿಸುಟಂತಾಯಿತು. ಅಥವಾ ಕಾಮಾಕ್ಷಿ ಹಾಗೆ ಭಾವಿಸಿದಳು. ಬುದ್ಧಿ ಮಂದವಾಯಿತು.

ದೃಷ್ಟಿ ಮಂದವಾಯಿತು; ತಲೆ ತಿರುಗಿತು. ಕಾಮಾಕ್ಷಿ ತಟ್ಟನೆ ಎದ್ದು ತನ್ನ ಹಾಸಿಗೆಯಲ್ಲಿ ಬಿದ್ದುಕೊಂಡಳು.

ಪ್ರಭಾಕರ ಮತ್ತೆರಡು ಗಂಟೆ ವಿವಾಹದ ಸಮಸ್ಯೆಗಳನ್ನು ಓದುತ್ತಿದ್ದು ಗಂಟೆ ಹನ್ನೆರಡು ಹೊಡೆಯುವಾಗ ದೀಪನಂದಿಸಿದ.

೨೦

ಪ್ರಭಾಕರನು ಕಾಮಾಕ್ಷಿಯ ವರ್ತನೆಗೆ ಅಪಾರ್ಥವನ್ನು ಕಲ್ಪಿಸಿಕೊಂಡಿದ್ದನೆಂದರೆ ತಪ್ಪಾದೀತು. ಅಂತಹ ಸಂದೇಹ ಬಂದಿರಲಿಲ್ಲ. ಅವಳು ಇನ್ನೂ ಹಿಂದಿನ ಕಾಮಾಕ್ಷಿ. ಯಾರ ರೂಪವನ್ನು ಕಂಡರೆ ಸ್ವಚ್ಛ ಸರಳ ಸ್ವಭಾವದ ಕಾಮಾಕ್ಷಿ ಎಂಬ ವ್ಯಕ್ತಿತ್ವದ ಮೂರು ಅಕ್ಷರಗಳು ಕಿವಿಯಲ್ಲಿ ರಣರಣಿಸುತ್ತಿದ್ದುವೊ ಅದೇ ಕಾಮಾಕ್ಷಿ ಈಗಲೂ ಇದ್ದಾಳೆ. ಆದರೆ, ಅವಳ ಪ್ರವೃತ್ತಿಯೂ ತನ್ನದೂ ಭಿನ್ನದಿಕ್ಕುಗಳನ್ನು ಹಿಡಿಯುವ ಸ್ವಭಾವವಿದೆ. ನೂರಾರು ಬಾರಿ ಅವರಿಗೆ ಸರಸ ಮತಭೇಧಗಳು ಬಂದಿದ್ದುವು. ವಿನೋದದಲ್ಲಿ ಭಾವ ಮರ್ದನಗಳಾಗಿದ್ದುವು. ಗಂಡಹೆಂಡಿರಿಬ್ಬರೆ, ಒಬ್ಬರು ಸೋತರೋ ಗೆದ್ದೊ—ತಮ್ಮ ಮತ ಒಂದೇ ಎಂದು ಭಾವಿಸುತ್ತಿದ್ದು ಕಾಲ ಯಾಪನೆ ಮಾಡುತ್ತಿದ್ದರು. ಇತ್ತೀಚೆಗೆ ಹಿಂದಿನ ಕ್ರಮವಿರಲಿಲ್ಲ. ಪರಕೀಯರ ಮುಂದೆ ಕಾಮಾಕ್ಷಿ ತನ್ನ ಮತಭೇದವನ್ನು ಪ್ರದರ್ಶಿಸಿದ್ದಾಳೆ. ಪ್ರಭಾಕರನ ಅಭಿಪ್ರಾಯ ತನ್ನದಲ್ಲ; ಅದನ್ನು ಸಂಶೋಧಿಸಿ ನೋಡಿ, ಸರಿಯೋ ತಪ್ಪೊ ಎಂದು ಪರಿಭಾವಿಸುವಷ್ಟು ಅವಕಾಶವನ್ನೂ ಕೊಡಲಿಲ್ಲ. ಅವಳ ಆತ್ಮ ಬೆಳೆಯುತ್ತಿರಬಹುದು. ತ್ವರಿತ ಗತಿಯಿಂದ ಮುಂದೆ ಸಾಗುತ್ತಿದ್ದಿರಬಹುದು. ತನ್ನದು ಮಾತ್ರ ಕುಂಟುತ್ತಾ ತಡೆಯುತ್ತಾ ಸಾಗುತ್ತಿರಬಹುದು; ಯಾರು ಬಲ್ಲರು? ಅಂತೂ ಎರಡು ವ್ಯಕ್ತಿಗಳು ಮಧ್ಯಪಥದಲ್ಲಿ ಅಗಲುವ ಲಕ್ಷಣ ತೋರುತ್ತಿದೆ. ಎಂದೇ ಪ್ರಭಾಕರನಿಗೆ ಬೋಧೆಯಾಯಿತು.

ಇನ್ನು ನಾಗೇಶನ ದೆಸೆಯಿಂದ ಅವಳಿಗೆ ಕೆಟ್ಟಹೆಸರು ಬಂದವಿಚಾರ. ಇದನ್ನಾತ ಸರಳದೃಷ್ಟಿಯಿಂದಲೇ ನೋಡಿದ್ದ. ಒಡನಾಡುವ ಮನುಷ್ಯ

ನಾಗೇಶನಂತಹ ದುಷ್ಟನಾಗಿರುವಲ್ಲಿ ಹೀಗಾಗದೆ ನಿರ್ವಾಹವಿಲ್ಲ. ಕಾಮಾಕ್ಷಿ ತನ್ನ ಹೆಣ್ತನದ ಪರಿಶುದ್ಧತೆಯನ್ನು ಕಾಪಾಡಿ ಕೊಂಡಿದ್ದಾಳೆ; ಅದರಲ್ಲಿ ಅನುಮಾನಕ್ಕೆ ಕಾರಣವೇ ಇಲ್ಲ. ತನ್ನಲ್ಲಿಲ್ಲದೆ ನಾಗೇಶನದು ಮಾತ್ರ ಆಗಿರುವ ಅಮೂಲ್ಯ ಶೋಭೆಯೇನಿದೆ? ಐಶ್ವರ್ಯ ಮಾತ್ರ. ಅದನ್ನು ತೃಣಸಮಾನವಾಗಿ ಬಗೆಯುವವಳು ಕಾಮಾಕ್ಷಿಯೆಂದರೆ. ತನಗೆ ಹಣದ ಅಡಿಚಣೆಯಾದಾಗ ತನ್ನ ಹಣವನ್ನು ಕೊಟ್ಟಿದ್ದಾಳೆ. ಆಭರಣಗಳನ್ನು ಅಡವಿಟ್ಟಿದ್ದಾಳೆ. ಒಂದು ಜರಿಸೀರೆಯನ್ನು ಕೊಂಡು ಹುಟ್ಟಿದ ಹಬ್ಬದಕಾಣಿಕೆಯೆಂದು ಕೊಟ್ಟಾಗ ಬಲವಾಗಿ ಆಕ್ಷೇಪಿಸಿದ್ದಾಳೆ. ತನಗಾಗಿ ತಂದೆಯನ್ನು ದೂರಮಾಡಿದ್ದಾಳೆ; ಚಿಕ್ಕಮ್ಮನ ಸಂಸರ್ಗ ಬಿಟ್ಟಿದ್ದಾಳೆ. ಇದಕ್ಕಾಗಿ ಒಂದು ನಿಮಿಷವಾದರೂ ಪಶ್ಚಾತ್ತಾಪ ಪಟ್ಟವಳಲ್ಲ. ಗೂಟಕ್ಕೆ ಕಟ್ಟಿಹಾಕಿದ ಹಸು ಕೊರಳಿನ ಉರುಳನ್ನು ಎಳೆದೆಳೆದು ತನಗೆಟಕದ ಮೇವನ್ನು ಪಡೆಯಲು ಜಗ್ಗಾಡುವಂತೆ ಈ ಹುಡುಗಿ——ತನ್ನ ಅಂಕೆಯನ್ನು ಮೀರಿ, ತನಗಲ್ಲದುದನ್ನು ಪಡೆವ, ತವಕವನ್ನು ಒಮ್ಮೆಯಾದರೂ ತೋರ್ಪಡಿಸಿರಲಿಲ್ಲ. ಎಂದ ಮೇಲೆ ಸಂದೇಹ ಪಡುವುದಕ್ಕೆ ಎಡೆಯೆಲ್ಲಿ?

ಹೀಗಿದ್ದರೂ ತನ್ನ ಮೆಚ್ಚೇನೆಂದು ತಿಳಿದಿದ್ದು—ಅದಕ್ಕೆ ವಿರೋಧವಾಗಿ ಎಂಬಂತೆ ತಿಳಿದೊ ತಿಳಿಯದೆಯೋ ಆಕೆ ನಡೆದ ಕ್ರಮ ಅಷ್ಟು ಪ್ರಶಸ್ತವಾಗಿರಲಿಲ್ಲ. ತಾನು, ಶ್ಯಾಮಣ್ಣ, ಕಾಮಾಕ್ಷಿ—ಈ ಮೂವರು ಯಾವುದಾದರೊಂದು ವಿಷಯದಲ್ಲಿ ಚರ್ಚೆನಡೆಸುವಾಗ, ಹೆಚ್ಚುಬಾರಿ ತನ್ನದು ಮಾತ್ರ ಭಿನ್ನಾಭಿಪ್ರಾಯವಾಗುವುದಲ್ಲ—ಅದೇಕೆ? ಅಂದು ಚುನಾವಣೆಯ ಸಂದರ್ಭದಲ್ಲಿಯೂ ಹಾಗೆಯೇ ನಡೆಯಿತು. ಭಾಮೆಯ ಚರ್ಯೆ ಆದರ್ಶವಾದುದಲ್ಲ ಎಂದು ತಿಳಿದಿದ್ದರೂ ಅವಳ ಯಶಸ್ಸಿಗಾಗಿ ಮೈಮುರಿತು ಈಕೆ ಶ್ರಮಿಸಿದಳು. ಇದು ತನಗೆ ಪಥ್ಯವಲ್ಲವೆಂದು ತಿಳಿದು ಆಪಕ್ಷ ವಹಿಸಿದಳು. ನಾಗೇಶನ ಮುಂಗಡೆಯಲ್ಲಿ ಗಂಡನು ಒಲ್ಲದುದನ್ನು ತಾನು ಮಾಡುವುದಾಗಿ ಶಪಥಕೊಟ್ಟಳು. ಇದು ಶುಭಸೂಚ

ನೆಯೆ? ತನ್ನಲ್ಲಿ ಮಾತ್ರ ರಹಸ್ಯವಾಗಿ ಚರ್ಚಿಸಬೇಕಿತ್ತು; ತನ್ನ ಮನಸ್ಸೂ ಆ ಕಡೆಗೆ ಒಲಿಯುವಂತೆ ಮಾಡಬಹುದಾಗಿತ್ತು; ತನ್ನದಾದರೂ ವಿವೃತ ಹೃದಯವಲ್ಲವೆ? ಒಮ್ಮೆ ಅಲ್ಲ; ನೂರುಬಾರಿ ಭಿನ್ನಾಭಿಪ್ರಾಯಗಳಿಂದ ಚರ್ಚಿಸುವುದಕ್ಕೆ ಹೊರಟ ಗಂಡಹೆಂಡಿರು ಏಕಕಂಠತೆಯ ನಿರ್ಧಾರಕ್ಕೆ ಬಂದಿದ್ದರು. ಮೊನ್ನೆ ಏಕೆ ಕಾಮಾಕ್ಷಿ ಅವಸರ ಮಾಡಿದಳು? ಅವಳಲ್ಲಿ ದುರುದ್ದೇಶವನ್ನು ಕಲ್ಪಿಸುವುದಲ್ಲ; ಒಮ್ಮತವಿಲ್ಲ––ಎಂಬುದಷ್ಟೆ ಇದರಿಂದ ಸಿದ್ಧವಾಗುವುದು. ತನ್ನ ಅಭಿಪ್ರಾಯಗಳು ಕಸವಾಗಿ, ಅವಳ ನಿರ್ಧಾರಗಳೇ ಕಸಬರಿಗೆಯಂತಾಗಿ ಜಾಡಿಸಿ ಬಿಡುವುದಿದ್ದರೆ, ತಾನು ಎಂಬ ತನ್ನ ಪೌರುಷಕ್ಕೂ ಅವಳದಾದ ವ್ಯಕ್ತಿತ್ವಕ್ಕೂ ಕೂಡಿಕೆಯೆಲ್ಲಿ? ಜೋಡಿಕೆಯೆಲ್ಲಿ?

ಅವಳನ್ನು ಪ್ರಶ್ನಿಸಿ ತಾನೇ ಹೃದ್ಗತವನ್ನು ಅರಿಯ ಬಹುದಾಗಿತ್ತು. ಪ್ರಶ್ನೆಮಾಡಿ ತಿಳಿಯುವುದರಿಂದ ತನಗೂ ಅಪಮಾನ; ಅವಳಿಗೂ ಅಪಮಾನ. ಇಷ್ಟು ವರ್ಷಗಳಿಂದ ಒಂದಾಗಿ ಬಂದಿದ್ದ ಜೀವಗಳೆರಡು ಈಗ ಪರಸ್ಪರವಾಗಿ ಆಕ್ಷೇಪಿಸುವುದೆಂದರೆ ಎರಡಕ್ಕೂ ಅಗೌರವವಲ್ಲವೆ? ಹೀಗೇಕೆ ಮಾಡಿದೆ? ಎಂದು ಕೇಳುವಾತನು ತನ್ನ ನಿರಂಕುಶಾಧಿಕಾರವನ್ನು ಪ್ರಯೋಗಿಸುವ ಅಧಿಕಾರ ಎಂಬ ಅರ್ಥಬರುತ್ತಿದೆ. ಇನ್ನೊಂದು ವ್ಯಕ್ತಿಯನ್ನು ಸಂದೇಹ ದೃಷ್ಟಿಯಿಂದ ನೋಡುತ್ತಾನೆ ಎಂದು ಅರ್ಥವಾಗುತ್ತದೆ; ಅಲ್ಲದೆ, ತನ್ನ ನೆರಳಲ್ಲದೆ ಅದಕ್ಕೆ ಬೇರೆ ಆಶ್ರಯವಿಲ್ಲ ಎಂಬ ಧ್ವನಿಯನ್ನು ಹೊರಡಿಸಿದಂತಾಗುತ್ತದೆ. ಇದು ಜ್ಞಾನಿಗಳೆನಿಸಿ ಕೊಳ್ಳುವವರಿಗೆ ಅಗೌರವವಲ್ಲವೆ? ಅಥವಾ ನಿರ್ಬಂಧ ಹಾಕಿದೆವೆನ್ನೋಣ. ಅದಕ್ಕೊಳಗಾಗಿ, ಅಥವಾ ಸಭ್ಯಸಂಪ್ರದಾಯ ಎಂಬ ಕಣ್ಣುಕಟ್ಟಿಗಾಗಿ, ಅಭಿಪ್ರಾಯಧ್ಯೇಯಗಳ ಸಮ್ಮತಿಯನ್ನು ನಟಿಸಿ, ಮನಸ್ಸನ್ನು ಅಲೆದಾಡುವುದಕ್ಕೆ ಬಿಟ್ಟರೆ ಪ್ರಯೋಜನವೇನು? ಇದು ಜೀವಹಿಂಸೆಯಲ್ಲವೆ? ಅಂತಹ ಹಿಂಸೆ ತನ್ನಿಂದಾಗದು; ಕಾಮಾಕ್ಷಿ ಸ್ವತಂತ್ರ ಸ್ತ್ರೀಯಾಗಿ ವ್ಯವಹರಿಸಲಿ; ಆಕೆಯ ಪಥದಲ್ಲಿ ಕಲ್ಲಾಗಿ, ಕಂಟಕವಾಗಿ ತಾಗುವ ಬುದ್ಧಿ ಅವನಿಗಿರಲಿಲ್ಲ.

ಇನ್ನು ಸಂಸಾರದಲ್ಲಿ ಬಳಕೆಗೊಂಡ ಶ್ಯಾಮಣ್ಣನ ವಿಚಾರವೂ ಅಷ್ಟೆ. ಕೆಡುನಾಲಗೆಗಳು ಏನೋ ಹೇಳುತ್ತಿವೆ. ಅವುಗಳಿಗೆ ತಡೆಹಾಕುವ ಶಕ್ತಿಯಾರಿಗಿದೆ? ಕಾಮಾಕ್ಷಿ ಹೇಗೋ ಹಾಗೆ ಶ್ಯಾಮಣ್ಣನು ಕೂಡ ಸ್ವತಂತ್ರ ವಿಚಾರಿ. ಪ್ರಾಪಂಚಿಕ ವ್ಯವಹಾರಕ್ರಮಗಳನ್ನು ತಿಳಿದ ಪರಿಣಮತಿಯಾದ ಕಾರಣ ಭೇದಭಾವಗಳನ್ನು ನುಂಗಿಕೊಂಡು ಮಾಡಬೇಕಾದ ಕೆಲಸಗಳನ್ನೆಲ್ಲ ಮಾಡುತ್ತಾನೆ. ಆತನ ಬುದ್ಧಿಗೆ ಕುದುರೆಯ ವೇಗ; ತನ್ನದಕ್ಕೆ ಎತ್ತಿನ ಗಾಡಿಯ ಓಟ. ಪತ್ರಿಕೆಗಂತೂ ಕಲ್ಪವೃಕ್ಷದಂತಿದ್ದಾನೆ. ಎಷ್ಟೋ ವರ್ಷಗಳಿಂದ ಸಂಗ್ರಾಮವು ಸಂಪಾದಿಸಿದ ಲೋಕ ಪ್ರಿಯತೆಯ ಯಶಸ್ಸಿನಲ್ಲಿ ಸೇಕಡ ಎಪ್ಪತ್ತೈದು ಆತನ ಪರಿಶ್ರಮದಿಂದ ದೊರಕಿದುದು. ಎಂದರೆ ಆತನೊಬ್ಬನೆ ಪತ್ರಿಕೆಯನ್ನು ನಡೆಸಬಹುದು; ಬೇಕಾಗಿದ್ದರೆ ಕಾಮಾಕ್ಷಿಯ ಸಹಾಯವನ್ನು ಪಡೆಯಬಹುದು. ತನ್ನ ಸೇವೆಯೇನು? ಏನೂ ಇಲ್ಲ. ಸಂಪಾದಕನೆಂದು ಹೆಸರುಕೊಟ್ಟುದಷ್ಟೆ. ಈ ಹೆಸರು ಪತ್ರಿಕಾ ಶ್ರೇಯಸ್ಸಿಗೆ ಅವಶ್ಯವಾಗಿ ತೋರಿದರೆ ಇನ್ನೂ ಇರಲಿ. ಆದರೆ, ನಿರುಪಯೋಗಿಯಾದ ತನ್ನ ಸಾಹಚರ್ಯವು ಅವಶ್ಯವಾಗಿಲ್ಲ. ಹೀಗೆಲ್ಲ ಪ್ರಭಾಕರನು ವಿಚಾರಿಸ ತೊಡಗಿದ. ಆಗ ತನ್ನ ದಾರಿಯಲ್ಲಿ ತಾನೊಬ್ಬನೇ ದಾರಿಗನೆಂದೂ ಹೊಳಕಾಯಿತು. ತೊಟ್ಟುಕೊಳೆತ ಹಣ್ಣು ಇನ್ನೆಷ್ಟು ಕಾಲ ಉದುರದೆ ಇದ್ದೀತು? ಎನ್ನುತ್ತಾ ತನ್ನಲ್ಲಿ ತಾನೆ ನಕ್ಕ.

## ೨೧

ಒಂದು ಪತ್ರವನ್ನು ತಂದು ಇನ್ನೊಂದನ್ನು ಒಯ್ಯುಲಿದ್ದ ತಿಮ್ಮ ನಾಗೇಶನ ಕಣ್ಣುಗಳಿಂದ ತಪ್ಪಿಸಿಕೊಳ್ಳಲಿಲ್ಲ. ಆತ ಬೀದಿಯಲ್ಲಿ ಹೋಗುತ್ತಿದ್ದಾಗ ನಾಗೇಶರಾಯರ ಕಾರು ಇದಿರಾಗಿ ಬಂತು. ಕಾರನ್ನು ನಡುರಸ್ತೆಯಲ್ಲಿಯೇ ನಿಲ್ಲಿಸಿ "ಹತ್ತು ತಿಮ್ಮ! ನಮ್ಮ ಮಾವಯ್ಯನವರಿಗೆ ತಿಳಿಸಬೇಕಾದ ವಿಷಯಗಳಿವೆ!" ಎಂದು ಒತ್ತಾಯದ ಮಾತನ್ನಾಡಿ ತಿಮ್ಮನನ್ನು ಏರಿಸಿಕೊಂಡು ನಾಗೇಶರಾಯ ತನ್ನ ನಗರದ ಮನೆಗೆ ಓಡಿದ.

ತನ್ನ ಕೋಣೆಗೆ ಕರೆದು, ಬಂದ ಸಮಾಚಾರವನ್ನು ಕೇಳಿದ. ತಿಮ್ಮ ಯಥಾವತ್ತಾಗಿ ಸಕಲವನ್ನೂ ಹೇಳಿದ.

ನಾಗೇಶ: ಪತ್ರ ಎಂದೆಯಲ್ಲ, ಅದೇನು ನೋಡಬಹುದೆ?

ತಿಮ್ಮ: ನೋಡದೇನು ಸ್ವಾಮಿ? ಅದು ನಮ್ಮನ್ನು ತಿನ್ನುತ್ತದೆಯೆ? ಪತ್ರವನ್ನು ವಾಚಿಸಲಾಗಿ ಮುಖದಬಣ್ಣ ಬದಲಾಯಿತು. "ಯಜಮಾನರಿಗೆ ಅನಾರೋಗ್ಯ! ಕಚೇರಿಯನ್ನು ಬಿಟ್ಟುಬರುವಂತಿಲ್ಲ! ಕೆಟ್ಟನಾಲಗೆಗಳು ಹೊರಳುತ್ತಿವೆ!" ಎಂತಹ ಅಹಂಕಾರ!

ನಾಗೇಶ: ಅತ್ತೆಯವರು ಹೇಗಿದ್ದಾರೆ?

ತಿಮ್ಮ: ಸೌಖ್ಯವಾಗಿದ್ದಾರೆ.

ನಾಗೇಶ: ನಮ್ಮ ವಿಷಯವನ್ನು ಮಾತಾಡುತ್ತಾರೊ....

ತಿಮ್ಮ: ಪ್ರತಿ ದಿನ.

ನಾಗೇಶ: ಮಾವ?

ತಿಮ್ಮ: ಅವರೂ ಹಾಗೆಯೆ. ನಿಮ್ಮನ್ನು ಹೊಗಳುವುದಕ್ಕೆ ಬಾಯಿ ಸಾಲದು.

ನಾಗೇಶ: ಸದ್ಯಃ ಕ್ಷೇಮದಲ್ಲಿದ್ದಾರೊ?

ತಿಮ್ಮ: ಕ್ಷೇಮ....ಕ್ಷೇಮವೆ....

ನಾಗೇಶ: ಇದೇನು ವಿಚಾರಮಾಡಿ ಉತ್ತರಕೊಡುತ್ತಿ?

ತಿಮ್ಮ: ಆರೋಗ್ಯಕ್ಕೆ ಕಡಿಮೆಯೇನೂ ಇಲ್ಲ. ವರ್ಷ ಅರುವತ್ತಾದರೂ ಇಡಿ ಗೋಟಡಿಕೆಯನ್ನು ಕರಕರ ಎಂದು ಜಗಿಯುವಷ್ಟು ಹಲ್ಲು ಗಟ್ಟಿಯಾಗಿದೆ. ಆದರೆ ಒಮ್ಮೊಮ್ಮೆ—

ನಾಗೇಶ: ಒಮ್ಮೊಮ್ಮೆ ಏನು?

ತಿಮ್ಮ: ಕಾರಣವಿಲ್ಲದೆ ಆಳುಗಳನ್ನು ಗದರಿಸುತ್ತಾರೆ.

ನಾಗೇಶ: ವಯಸ್ಸಾಯಿತಲ್ಲವೆ?

ತಿಮ್ಮ: ವಯಸ್ಸೂ ಆಯಿತು; ಯಾವುದೋ ಒಂದು ವ್ಯಸನ ಮನಸ್ಸಿನ ಒಳಗೆ ಎರಗಿದಂತೆ ತೋರುತ್ತದೆ.

ನಾಗೇಶ: ಅದೇನಾಗಿರಬಹುದು ?

ತಿಮ್ಮ: ನಮಗೇನು ಗೊತ್ತು ಸ್ವಾಮಿ! ಆಗಾಗ ಕಾಮಿ.... ಕಾಮಾ....ಕಾಮಾಕ್ಷಿ — ಎಂದೇನೋ ಹೇಳುತ್ತಾರೆ.

ನಾಗೇಶ: ಏಕೆ ಎಂದು ಬಲ್ಲೆಯಾ....

ತಿಮ್ಮ: ಹೊಟ್ಟೆಯಲ್ಲಿ ಹುಟ್ಟಿದ ಹುಡುಗಿಯ ಮುಖನೋಡದೆ ಎಷ್ಟು ಕಾಲವಾಯಿತು!

ನಾಗೇಶ: ವರ್ಷವೇಕೆ? ನಾಲ್ಕು ತಿಂಗಳ ಹಿಂದೆ ಬಂದು ಅವಳನ್ನು ನೋಡಿ ಹೋಗಲಿಲ್ಲವೆ ?

ತಿಮ್ಮ: ನೋಡಿ ಹೋದರೆ ಸಾಕೆ ? ಕೊಟ್ಟಕೂಸು ವರ್ಷಕ್ಕೆ ಒಮ್ಮೆಯಾದರೂ ತವರುಮನೆಗೆ ಬಂದು ತಂದೆಯ ಅನ್ನವನ್ನುಂಡು ಹೋಗಬೇಡವೆ ತಂದೆತಾಯಿಗಳು ಇರುವಷ್ಟು ಕಾಲ ?

ನಾಗೇಶ: ಹೌದು ತಿಮ್ಮ; ಆಕೆ ಬಾರದೆ ಎಷ್ಟು ಕಾಲವಾಯಿತು ?

ತಿಮ್ಮ: ಹಿಂದಿನ ವರ್ಷವಲ್ಲ; ಮುಂತ್ತವರ್ಷ ಸುಬ್ರಹ್ಮಣ್ಯದ ಜಾತ್ರೆಯ ಕಾಲಕ್ಕೆ ಒಮ್ಮೆ ಗಂಡಹೆಂಡತಿ ಮುಖತೋರಿಸಿ ಹೋಗಿದ್ದರು. ಆಗ ಧನಿಯ ಮನೆಯಲ್ಲಿ ಏನು ಗದ್ದಲ ? ಏನು ಔತಣ ?

ನಾಗೇಶ: ಮತ್ತೆ ಬರಲೇ ಇಲ್ಲವೆನ್ನುತ್ತೀಯಾ ?

ತಿಮ್ಮ: ಖಂಡಿತ ಬರಲಿಲ್ಲ........ಪ್ರಮಾಣಮಾಡಿ ಹೇಳುತ್ತೇನೆ ಬರಲಿಲ್ಲ.

ನಾಗೇಶ: ಪ್ರಮಾಣ ಮಾಡಬೇಕಾಗಿಲ್ಲ. ನಿನ್ನ ಮಾತನ್ನು ನಂಬುತ್ತೇನೆ.

ತಿಮ್ಮ: ನಂಬಬಹುದು ಬುದ್ಧಿ....ನಿಮ್ಮಂಥವರಲ್ಲಿ ಸುಳ್ಳು ಹೇಳಿ ಎಷ್ಟು ಕಾಲ ಬದುಕಬಹುದು ಬುದ್ಧಿ....

ನಾಗೇಶ: ಸುಳ್ಳು ಹೇಳುವವರಿಗೆ ದೀರ್ಘಾಯುಷ್ಯ ಕಾಣೋ....

ತಿಮ್ಮ ಗಹಗಹಿಸಿ ನಕ್ಕ.

ನಾಗೇಶ: ತಿಮ್ಮ! ನಿನ್ನಲ್ಲಿ ಇನ್ನೊಂದು ಮಾತನ್ನು ಕೇಳುತ್ತೇನೆ... ನೀನು ನಿನ್ನೆಯ ಬಂದೆಯಲ್ಲವೆ ?

ತಿಮ್ಮ: ಹೌದು; ನಿನ್ನೆಯೆ ಬಂದೆ....

ನಾಗೇಶ: ಎಲ್ಲಿಗೆ ಬಂದೆ? ಯಾರನ್ನು ಕಂಡೆ....

ತಿಮ್ಮ: ಕಚೇರಿ ಎನ್ನುತ್ತಾರಲ್ಲ....ಅಲ್ಲಿಗೆ ಹೋದೆ....ಅಮ್ಮನವರನ್ನು ಕಂಡೆ....

ನಾಗೇಶ: ಈ ಪತ್ರ ಅಲ್ಲಿಯೆ ಸಿಕ್ಕಿತೆ?

ತಿಮ್ಮ: ಇಲ್ಲ—ಮನೆಗೆ ಹೋಗು ತಿಮ್ಮ....ಒಂದು ಊಟಮಾಡಿ ಹೋಗು ತಿಮ್ಮ ಎಂದು ಮನೆಗೆ ಕರೆದು ಕುತ್ತಿಗೆಯ ವರೆಗೆ ತಿನಿಸಿದರು....

ನಾಗೇಶ: ಈ ದಿನ ಅಲ್ಲಿಂದ ಹೊರಟೆಯೊ?

ತಿಮ್ಮ: ಹೌದು....

ನಾಗೇಶ: ಈ ಪತ್ರವನ್ನು ಯಾರು ಕೊಟ್ಟರು?

ತಿಮ್ಮ: ಮತ್ತೆ ಯಾರು? ಅಮ್ಮನವರು....

ನಾಗೇಶ: ಅಳಿಯಂದಿರು ಕೊಟ್ಟುದಲ್ಲ....

ತಿಮ್ಮ: ನಾನು ಸುಳ್ಳುಹೇಳುವುದುಂಟೆ, ಬುದ್ಧಿ....ಅಳಿಯಂದಿರು ಈ ತಿಮ್ಮನಿಗೆ ಮುಖ ತೋರಿಸಲಿಲ್ಲ....

ನಾಗೇಶ: ನೀನು ಸತ್ತಿರುವೆಯೊ ಬದುಕಿರುವೆಯೊ ಎಂದು ಕೇಳಲಿಲ್ಲವಷ್ಟೆ....

ತಿಮ್ಮ: ಬಾಯಿಯಿಂದ ಒಂದು ಮಾತೂ ಹೊರಡಲಿಲ್ಲ....

ನಾಗೇಶ: ಕಣ್ಣೆತ್ತಿ ನೋಡಲೂ ಇಲ್ಲ?

ತಿಮ್ಮ: ಯಾರೋ ಒಬ್ಬ ಕಳ್ಳ ಜಗಲಿಯ ಮೇಲೆ ಕುಳಿತಿದ್ದರೆ ಹೇಗೊ ಹಾಗೆ....

ನಾಗೇಶ: ನಿನಗೇನು ತೋರಿತು?

ತಿಮ್ಮ: ಮನಸ್ಸಿನಲ್ಲಿ ವ್ಯಸನವಿದ್ದ ಹಾಗೆ....ಸೊರಗಿದ ಹಾಗೆ....

ನಾಗೇಶ: ನಿನ್ನ ರಾಯರು ಕಾಮಿ....ಕಾಮಾಕ್ಷಿ....ಎಂದ ಹಾಗೆ ಇವರೇನೂ ಹೇಳುತ್ತಿರಲಿಲ್ಲ....

ತಿಮ್ಮ: ಏನೂ ಇಲ್ಲ.

ನಾಗೇಶ: ಸಾಕು ತಿಮ್ಮ....ನೀನು ಸತ್ಯವನ್ನೆ ಹೇಳಿದೆ....ಇನ್ನೂ ಹೆಚ್ಚು ಸತ್ಯಗಳನ್ನು ಹೇಳಬೇಕಾಲ್ಲ....ಐದು ನಿಮಿಷ ಇಲ್ಲಿಯೇ ಕುಳಿತು ಕೊ....ನಾನೂ ಒಂದು ಪತ್ರಕೊಡುತ್ತೇನೆ....

ತಿಮ್ಮ: ಆಗಬಹುದು ದೇವರು!

ನಾಗೇಶ: ಒಳಗೆ ಹೋಗಿ ಹತ್ತು ನಿಮಿಷದೊಳಗೆ ಪತ್ರಸಮೇತ ಬಂದು ಅದನ್ನೂ ಒಂದು ರೂಪಾಯಿಯನ್ನೂ ತಿಮ್ಮನ ಕೈಯಲ್ಲಿಟ್ಟ.... ತಿಮ್ಮನಿಗೆ ಪತ್ರ ಕಾಣುವ ಮುಂಚೆಯೆ ರೂಪಾಯಿ ಕಂಡಿತು....

ತಿಮ್ಮ: ಇದನ್ನು ಯಾರಿಗೆ ಕೊಡಬೇಕು ಬುದ್ಧಿ?

ನಾಗೇಶ: ಅದನ್ನು ಹೇಳುವುದಕ್ಕೆ ಮರೆತೆ..ಅಮ್ಮನವರಿಗೆ ಕೊಡು.. ಧನಿಗಳು ಏನೆಂದು ಕೇಳಿದರೆ ಅವರ ಕೈಗೆ ಕೊಡು....ಕೇಳದಿದ್ದರೆ ಅಮ್ಮ ನವರ ಕೈಗೆ ತಲಪಿಸು....

ತಿಮ್ಮ: ಆಯಿತು ಬುದ್ಧಿ ಎಂದು ಹೊರಟ.

ನಾಗೇಶನ ಬುದ್ಧಿ ಯಾವ ಪರಿಪಾಕವನ್ನು ಹೊಂದಿದ್ದಿತೆಂಬುದನ್ನು ಹೇಳಬರುವುದಿಲ್ಲ. ಆಶೆಯೆ? ಅವರ ಸಮಾಧಿಯಾಗಿದೆ. ಅಭಿಮಾನವೆ? ಅದು ಕಾಮಾಕ್ಷಿಯ ಮುಂದೆ ಸುಟ್ಟು ಭಸ್ಮವಾಗಿದೆ. ಮತ್ಸರವೆ? ಏತ ಕ್ಕಾಗಿ?....ಅಥವಾ ಈ ಎಲ್ಲಾ ಭಾವಗಳ ಮಿಶ್ರಣವೆ? ಏನೋ ಒಂದು ಭಾವದಿಂದ ಪತ್ರ ಬರೆದಿದ್ದು ಅವರ ಒಕ್ಕಣೆ ಹೀಗಿತ್ತು.

ಅತ್ತೆ!

ನೀವು ಕುಲ—ಮಾನ--ಮರ್ಯಾದೆ ಎಂದು ಬಹಳ ಸಂಕಟ ಪಡುವವರೆಂಬುದನ್ನು ಬಲ್ಲೆ. ಸಂಕಟಪಟ್ಟರೆ ಸಾಲದು; ಅವುಗಳನ್ನು ಕಾಪಾಡುವುದಕ್ಕೂ ಈಗ ಸಿದ್ಧರಾಗಿರಬೇಕು.

ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದ ಕೂಸಲ್ಲ ಎಂಬುವನ್ನು ಬಲ್ಲೆ. ಹೀಗಿ ದ್ದರೂ ನೀವೂ ಅವಳನ್ನು ಮಗಳೆಂದು ಕರೆಯಬೇಕಲ್ಲವೆ?

ಹಾಗಿದ್ದರೆ ಮಗಳನ್ನು ಕಾಪಾಡಿ. ಮಾನದಲ್ಲಿ ಇನ್ನೇನಾದರೂ ಉಳಿದಿದ್ದರೆ ಅದನ್ನೂ ಅವಳನ್ನೂ ಒಟ್ಟೊಟ್ಟಾಗಿ ಉಳಿಸಿಕೊಳ್ಳಿರಿ.

ಒಂದೆರಡು ತಿಂಗಳಲ್ಲಿ ನಾನೇ ಆ ಕಡೆಗೆ ಬರಬಹುದು.

ಇಂತೀ ಅಳಿಯನು ಬೇಡುವ ಆಶೀರ್ವಾದ,...

ಪತ್ರವನ್ನು ಬರೆದು ತನ್ನ ಕರ್ತವ್ಯವೊಂದನ್ನು ಮಾಡಿದ ಕೃತಾರ್ಥತೆಯ ಸಂತೋಷವನ್ನು ಅನುಭವಿಸುತ್ತಿದ್ದ.

೨೨

ಹಿಂದಿನ ರಾತ್ರಿ ಉಪ್ಪರಿಗೆಯನ್ನೇರಿದ ಗಂಡಹೆಂಡಿರು ಒಂದು ಘಂಟೆಯ ವರೆಗೆ ಏನೋ ಪಿಸುಗುಟ್ಟುತ್ತಿದ್ದುದೂ ಆಗಾಗ ತನ್ನ ಸೊಸೆ ಬಿಕ್ಕುಮಾತಿನಲ್ಲಿ ಆಡುತ್ತಿದ್ದುದೂ ಸಾಂತಮ್ಮನಿಗೆ ತಿಳಿಯದಿರಲಿಲ್ಲ. ಗಂಡ ಹೆಂಡತಿಗೆ ಬುದ್ಧಿ ಹೇಳಿರಬೇಕೆಂದು ಅವಳು ಭಾವಿಸಿದಳು.

ಮುಂಜಾವದ ಕಾಫಿಯ ವೇಳೆಯಲ್ಲಿ ಸಾಂತಮ್ಮನ ಸಂಧಿ ಬಂಧಗಳು ಕಳಚಿ ಬೀಳುವಂತಾಯಿತು. ಇಡಲಿ-ಕಾಫಿಗಳನ್ನು ತಂದಿಟ್ಟವಳೇ ಉಸ್ಸಪ್ಪಾ—ಎಂದು ನೆಲದ ಮೇಲೆ ಬಿದ್ದುಕೊಂಡಳು....

ಪ್ರಭಾಕರ ಅವಳ ಸಮೀಪದಲ್ಲಿ ಸುಳಿಯಲೇ ಇಲ್ಲ. ಶ್ಯಾಮಣ್ಣ ಸಮೀಪಕ್ಕೆ ಬಂದು "ಏನಾಯಿತು ತಾಯಿ?" ಎಂದು ವಿಚಾರಿಸಿದನು. ಕಾಮಾಕ್ಷಿ ದೂರದಲ್ಲಿಯೇ ನಿಂತು ಡಾಕ್ಟರರನ್ನು ಕರೆಯಿಸಬೇಕೆ? ಎಂದು ಕೇಳಿದಳು.

ಸಾಂತಮ್ಮ: ಡಾಕ್ಟರರನ್ನು ನೀನು ಕರೆಯಿಸಬೇಕೆ? ನಾನು ಒಂದು ಜನ ಕಳುಹಿಸಿದರೆ ನಾಗೇಶ ಎಲ್ಲಿದ್ದರೂ ಓಡಿಬರಲಾರನೆ?.... ನೀನು ಕರೆಯಿಸುವುದಂತೆ.... ಯಾಕೆ ಕರೆಯಿಸುವುದು?.... ಮದ್ದುಮಾಡಿ ಗುಣವಾಗುವ ರೋಗವಲ್ಲ ಇದು....

ಪ್ರಭಾಕರ: ಮತ್ತೇನು ಮಾಡಬೇಕೆನ್ನುತ್ತಿ ಚಿಕ್ಕಮ್ಮ....

ಸಾಂತಮ್ಮ: ನಿಮ್ಮ ಬುದ್ಧಿಗೆ ಮದ್ದು ಮಾಡಬೇಕು....

ಕಾಮಾಕ್ಷಿ: ನಾವು ಮದ್ದು ಕುಡಿದರೆ ನಿಮ್ಮ ರೋಗವಾಸಿಯಾಗುವುದೇ?

ಸಾಂತಮ್ಮ: ಒಬ್ಬರ ದೋಷದಿಂದ ಇನ್ನೊಬ್ಬರನ್ನು ಹಿಡಿವ ರೋಗ....

ಪ್ರಭಾಕರ: ವಿಚಿತ್ರ ರೋಗವೇ ಸರಿ....

ಸಾಂತಮ್ಮ: ಮನೆದೇವರ ಕೋಪ....

ಕಾಮಾಕ್ಷಿ: ನಾವೇನು ಮಾಡಿದ್ದೇವೆ ದೇವರನ್ನು ರೇಗಿಸುವುದಕ್ಕೆ?

ಸಾಂತಮ್ಮ: ಆಚಾರವಿಲ್ಲ......ಧರ್ಮವಿಲ್ಲ...... ಮಡಿಯಿಲ್ಲ....... ಮೈಲಿಗೆಯಿಲ್ಲ....ಈ ಮನೆಯಲ್ಲಿ ದೇವರು ಹೇಗೆ ನಿಂತಾನು?

ಪ್ರಭಾಕರ: ನಿಂತರೆ ಆತನು ಕೆಟ್ಟುಹೋಗುತ್ತಾನಲ್ಲವೆ?

ಸಾಂತಮ್ಮ: ಇದಕ್ಕೆ ಕುತರ್ಕವೆಂದು ಹೆಸರು....ನಮ್ಮ ನಡತೆಯನ್ನು ಮೆಚ್ಚದೆ ಮನೆದೇವರು ಕಾಲಿಗೆ ಬುದ್ಧಿಹೇಳುತ್ತಾನೆ....ಅವನು ಮೈಲಿಗೆಯಾಗುವುದು ಹೇಗೆ?

ಪ್ರಭಾಕರ: ನೀವು ಯಾವ ಪರಿಹಾರ ಹೇಳುತ್ತೀರಿ?

ಸಾಂತಮ್ಮ: ನಾನು ಹೇಳುವುದಕ್ಕೇನೂ ಇಲ್ಲ. ಪ್ರಾಯಬಂದ ಮಕ್ಕಳು ಹೇಳಿಸಿಕೊಳ್ಳಬಾರದು; ಸ್ವತಃ ಆಲೋಚಿಸಿ ತಿಳಿದುಕೊಳ್ಳಬೇಕು.

ಪ್ರಭಾಕರ: ತಿಳಿಯುವುದಿಲ್ಲ—ಎಂದಾದರೆ....

ಸಾಂತಮ್ಮ: ಹಾಳಾಗುತ್ತಾರೆ; ಹಾಳಾಗುವ ಕಾಲ ಬಂದಿದೆ....

ಪ್ರಭಾಕರ: ನಮ್ಮ ತಪ್ಪೇನು ತಿಳಿಸಿಬಿಡಿ....

ಸಾಂತಮ್ಮ: ಗಂಟಲ ಒಳಗಿರುವುದನ್ನು ಹೊರಗೆ ಹಾಕಿಸಬೇಕೆಂದಲ್ಲವೆ ನಿಮ್ಮ ಹಟ? ಹಾಗಾದರೆ ಕೇಳಿ....ಈ ಮನೆಯ ದೇವರಿಗೆ ಮಡಿಮೈಲಿಗೆಯೆಂದರೆ ವಿಶೇಷ....

ಪ್ರಭಾಕರ: ಸರಿ ತಿಳಿಯಿತು.

ಸಾಂತಮ್ಮ: ವರ್ಷಕ್ಕೆ ನಾಲ್ಕಾರು ಶಿವಪೂಜೆ—ಗಣಹವನ.... ಅಷ್ಟಮಿ....ಚೌತಿ....ಶಿವರಾತ್ರಿ....ಮಹಾಲಯ ಆಗದಿದ್ದರೆ ದೇವರು ಮುನಿದಾರು. ನಿನಗೆ ನಿನ್ನಪ್ಪನ ದಿನವೇ ತಿಳಿದಿರುವುದಿಲ್ಲ....

ಪ್ರಭಾಕರ: ಸರಿ ಇನ್ನು ಮುಂದೆ ಆ ವಿನಿಯೋಗಗಳೆಲ್ಲ ಸರಿಯಾಗಿ ಜರಗುವುವೆಂದು ಭಾವಿಸಿಕೊ....ಮತ್ತಾದರೂ ನಿನ್ನ ರೋಗ ಗುಣವಾಗುವುದೇ?

ಸಾಂತಮ್ಮ: ಇದೆಲ್ಲದಕ್ಕಿಂತಲೂ ಮುಖ್ಯವಾದುದು ನೀತಿ.... ನಡತೆ...ಈ ಮನೆಗೆ ಬಂದ ಹುಡುಗಿಯರು ಮನೆಯೊಳಗೆ ಇರತಕ್ಕದು.... ಗಂಡು ಬೀರಿಗಳಂತೆ ಬೀದಿಗಳಲ್ಲಿ ಅಲೆಯುವ ಸಂಪ್ರದಾಯವಿಲ್ಲ.

ಪ್ರಭಾಕರ: ಕಾಮಾಕ್ಷಿ ಗಂಡು ಬೀರಿಯಂತೆ ಅಲೆದಾಡುವುದಿಲ್ಲ... ಹೊಟ್ಟೆ ತುಂಬಿಸುವುದಕ್ಕಾಗಿ ಕೆಲಸಮಾಡುತ್ತಾಳೆ....

ಸಾಂತಮ್ಮ: ಹೊಟ್ಟೆ ತುಂಬಿಸುವುದಕ್ಕೆ ಅವಳೇ ದುಡಿಯಬೇಕಾ ದರೆ ನಿನ್ನ ಮೀಸೆಗಳನ್ನು ಬೋಳಿಸಬಾರದೇಕೆ?

ಪ್ರಭಾಕರ: ಹಾಗೆಯೂ ಮಾಡೋಣ. ದೇವರಿಗೆ ತೃಪ್ತಿಯಾಗು ವುದಿದ್ದರೆ....

ಸಾಂತಮ್ಮ: ಮೀಸೆ ಬೋಳಿಸಿ ದೇವರನ್ನು ಮಂಕಾಡಿಸುತ್ತೇನೆ— ಎಂದು ಭಾವಿಸಬೇಕಾಗಿಲ್ಲ. ಈ ಮನೆಯ ಹೆಮ್ಮಕ್ಕಳು ಪರಪುರುಷ ರೊಡನೆ ಚಕ್ಕಂದವಾಡುವುದು ದೇವರಿಗೆ ಮೆಚ್ಚದು.

ಈ ಮಾತನ್ನು ಕೇಳುವುದಕ್ಕೆ ಪ್ರಭಾಕರನು ಸಿದ್ಧನಾಗಿರಲಿಲ್ಲ— ಶ್ಯಾಮಣ್ಣನ ಮುಖವಂತೂ ಬಿದ್ದುಹೋಯಿತು. ಕಾಮಿಯ ವೈಬೇನೆ ಹೆಚ್ಚಿತು. ಪ್ರಪಂಚವೆಲ್ಲ ಒಂದೆ—ಸ್ವಲ್ಪವೂ ವ್ಯತ್ಯಾಸವಿಲ್ಲ. ಕೆಡುಬಾಯಿ ಗಳು ಆಡುವವಾತನ್ನೆ ಮನೆದೇವರು ಈಕೆಯ ಬಾಯಿಯಿಂದ ಆಡಿಸುತ್ತಾನೆ. ಜನರ ಸ್ವಭಾವಕ್ಕೆ ಒಪ್ಪುವ ದೇವರೇ, ಆಶ್ಚರ್ಯವೇನು? ಕಾಮಾಕ್ಷಿ ಅಲ್ಲಿ ನಿಲ್ಲದೆ ತಟ್ಟನೆ ಮಾಳಿಗೆಗೆ ತೆರಳಿದಳು. ಪ್ರಭಾಕರ ಬಚ್ಚಲಿಗೆ ಹೋದ. ಶ್ಯಾಮಣ್ಣ ಮಾತ್ರ ಅಲ್ಲಿಯೇ ಐದು ನಿಮಿಷಗಳ ಕಾಲ ನಿಂತಿದ್ದ.

ನೋಡು ಶ್ಯಾಮು....ಈ ಮನೆಯೆಂದರೆ ಎಂತಹ ಮನೆಯೆಂದು ಭಾವಿಸಿದ್ದಿ? ದೈವದೇವರು ಹಗಲಿರುಳು ನಲಿದಾಡುವ ಮನೆ....ಮನೆ ಮಂದಿಯ ನೀತಿ ನಡತೆಯಲ್ಲಿ ಕಣ್ಣಿಡುವ ದೇವರು. ಒಂದಿಷ್ಟು ಲೋಪ ಬಂದರೆ ಮುನಿಯುವ ದೇವರು. ಈ ಕಾಮಿ ಪ್ರಭಾಕರರ ದೆಸೆಯಿಂದ ಎಲ್ಲದಕ್ಕೂ ನಾಸ್ತಿಯಾಗಿದೆ. ಪ್ರತಿದಿನ ಎರಡು ಬಾರಿ ಸೇರಕ್ಕಿಯ ನೈವೇದ್ಯವಾಗಬೇಕು. ಗೃಹಿಣಿ ಸ್ವತಃ ಮಿಂದು ಮಡಿಯುಟ್ಟು ಎಸರಿಡ

ಬೇಕು. ಯಜಮಾನ ಸ್ವತಃ ಪೂಜೆಮಾಡಬೇಕು. ಹೀಗಿದ್ದರೆ ತಾನೆ ಈ ಮನೆಯಲ್ಲಿ ಐಶ್ವರ್ಯ ತುಂಬಿ ತುಳುಕಾಡೀತು. ಈ ಕಾವಿಗೆ ಬರೆ ಯುವ ಹುಚ್ಚೇಕೆ? ಇವಳು ಸ್ವತಃ ಪತ್ರಿಕೆ ನಡೆಸದಿದ್ದರೆ ಲೋಕ ಹಾಳಾ ಗುವುದೇ? ಮನೆಯಲ್ಲಿಯೂ ಅತಿಥಿಯ ಹಾಗೆ ಇರುವುದೆಂದರೇನು? ಈ ಹವ್ಯಾಸವನ್ನು ಬಿಟ್ಟು ಇನ್ನಾದರೂ ಮನೆತನದ ನಡತೆಯನ್ನು ಕಾಪಾಡ ಬಾರದು ಏಕೆ? ಬುದ್ಧಿ ವಿಪರೀತವಾಗಿದೆ ಅಷ್ಟೆ....ಅವರು ಇವರು ಎಂದು ಯಾವ ಸುಡುಗಾಡಿನವರ ಜೊತೆಯಲ್ಲಿ ತಿರುಗಾಟ....ಭಾಷಣ....ಹೆರಟೆ ಹೊಡೆಯುವುದು....ಹೆಣ್ಣು, ಗಂಡಿನ ನೆರಳಿನಲ್ಲಿರಬೇಕು. ಪರಕೀಯನು ಎಂತಹ ಮಹಾ ಪುರುಷನಾಗಿದ್ದರೂ ಹತ್ತು ಆಡಿದರೆ ಒಂದಕ್ಕೆ ಉತ್ತರ ಕೊಡಬೇಕು. ನಮಗೆ ಈ ವಿಷಯವನ್ನು ಯಾರಾದರೂ ಕಲಿಸಿದ್ದರೆ ಶ್ಯಾಮಣ್ಣ? ಆಚಾರವಂತರಾದ ತಾಯಿತಂದೆಗಳ ನಡತೆಯೇ ನಮಗೆ ಗುರು. ಇವರಲ್ಲಿ ಆಚಾರವನ್ನು ಕಲಿಯುವ ಬುದ್ಧಿಯುಂಟೆ? ತಲೆಗೇಡಿಗಳು.... ಕಲಿಯುಗ ಮೀರಿದೆ ಶ್ಯಾಮಣ್ಣ....ಹೀಗೆ ಉದ್ದಕ್ಕೂ ಮಾತಾಡುತ್ತಿದ್ದಳು ಸಾಂತಮ್ಮ.

ಅವಳ ರೋಗದ ಕಾರಣವೇನೆಂಬುದು ಶ್ಯಾಮಣ್ಣನ ಮನಸ್ಸಿಗೆ ನಾಟಿತು. "ವಿಶಾಲ ಪ್ರಪಂಚವು ಕರೆಯುತ್ತಿದೆ. ನನಗಾದರೂ ಇಲ್ಲಿ ಸ್ಥಾನವೇನು? ಇರುವಷ್ಟು ಕಾಲ ಇವರ ಸೇವೆ ಮಾಡಿವೆ. ಪ್ರಯೋಜಕ ವ್ಯಕ್ತಿ ಎನಿಸಿಕೊಂಡೆ. ಕಸಬರಿಗೆಗೆ ಇದಕ್ಕಿಂತ ಹೆಚ್ಚಿನ ಹೆಮ್ಮೆಯೇನು?" ಎಂದು ಕಣ್ಣುಗಳನ್ನು ಒದ್ದೆಮಾಡಿದ.

ಸಂದರ್ಭ ನೋಡಿ ಬೀಳ್ಕೊಳ್ಳಬೇಕು....ಎಂದು ನಿರ್ಧರಿಸಿದ.

## ೨೩

ಕಾಮಾಕ್ಷಿ ಪ್ರಭಾಕರರ ಜುಟ್ಟನ್ನು ಮುಷ್ಟಿಯಲ್ಲಿ ಇಟ್ಟುಕೊಳ್ಳ ಬೇಕು; ಮತ್ತೆ—ಮುಂದೇನು ಮಾಡಬೇಕೆಂದು ಅಂತರಾತ್ಮ ಪ್ರೇರಣೆ ಯಾಗುವುದೋ ನೋಡೋಣ—ಎಂದು ನಾಗೇಶನ ಯೋಚನೆಯಿತ್ತು.

ನಾಗೇಶನಿಗೆ ಅಂತರಾತ್ಮವಿಲ್ಲ—ಎಂದು ಯಾರೂ ಹೇಳಲಾರರು. ಮನುಷ್ಯರ ಹೊರಗು ಬೇರೆ—ಅಂತರಾತ್ಮ ಬೇರೆ—ಎನ್ನುವ ತತ್ವದ ಪ್ರತಿಪಾದಕನೆ ಅವನೆಂದಾದ ಮೇಲೆ ಹೇಳುವುದೇನು? ಪ್ರೇರಣೆಗಳನ್ನು ಪರೀಕ್ಷಿಸುತ್ತಿರುವುದೊಂದೇ ಅವನ ಕರ್ತವ್ಯ.

ಪ್ರಭಾಕರ ಕಾಮಾಕ್ಷಿಯರು ತನ್ನ ಸೂತ್ರದ ಬೊಂಬೆಗಳಂತೆ ಕುಣಿಯುವುದನ್ನು ನೋಡಿದರೆ ಸಾಕು; ಅವನ ಜೀವನ ಸಫಲ. ಅದು ಸುಲಭದಲ್ಲಿ ಆಗುವುದೇ? ಅವರು ಕೇಶವಯ್ಯ—ಸುಶೀಲಮ್ಮನವರ ಅಂತರಿಕ ಪ್ರೇಮದಿಂದ ಬಾಹಿರರಾಗಿದ್ದಾರೆ; ಇನ್ನು ಹತ್ತಿರ ಸೇರಿಕೊಳ್ಳದಂತೆ ಸಂಚು ಹೂಡಬೇಕು. ಶ್ಯಾಮಣ್ಣನೆ ಶನಿ ಮಹಾರಾಯ. ಅವನನ್ನು ಅದರ ಎಡೆಯಿಂದ ಕಿತ್ತು ಬಿಸುಡಬೇಕು. ಗಂಡಹೆಂಡಿರಲ್ಲಿ ಒಂದು ಬಗೆಯ ಆಲಸ್ಯವಿದ್ದಂತೆ ತೋರುತ್ತದೆ. ಇದು ಇಷ್ಟಾರ್ಥಸಿದ್ಧಿಗೆ ಸಹಾಯಕವೇ ಸರಿ. ಮಧ್ಯದಲ್ಲಿ ತನ್ನ ಪ್ರವೇಶವಾಗ ಬೇಕು!

ಭಾಮೆಯು ಮಂಗಳೂರಲ್ಲಿದ್ದಾಗ ಧನುರ್ಧಾರಿ ಎಂಬ ಪತ್ರಿಕೆ ಹೊರಡುವ ಸುದ್ದಿಯು ಗದ್ದಲವಾದುದು ನಾಗೇಶನ ಕಲ್ಪನಾ ಬಲದಿಂದ. ಆ ಮೇಲೆ ಸಂಗ್ರಾಮ ಪತ್ರಿಕೆಯನ್ನೆ ಭಾಮೆ ದತ್ತಸ್ವೀಕಾರ ಮಾಡುವುದಾಗಿ ಭರವಸೆ ಕೊಟ್ಟಳು. ಈ ನಡುವೆ ಪತ್ರಿಕೆಗೊಂದು ನಾಜೂಕಿನ ಮುದ್ರಣ ಮಂದಿರ—ಆಡಳಿತಕ್ಕೊಂದು ಮಂಡಲಿ—ಪಾಲು ಭಂಡವಳ ಮೊದಲಾದುದನ್ನು ಏರ್ಪಡಿಸುವ ಪ್ರಸ್ತಾವ ಹೂಡಿದ್ದ. ಇದು ವರೆಗೆ ಗರ್ಭಾವಸ್ಥೆಯಲ್ಲಿದ್ದ ಈ ವ್ಯವಸ್ಥೆಗಳ ಪ್ರಸೂತಿ ಕಾಲವು ಬಂತು. ನಾಗೇಶನು ಹೆರಿಗೆ ಮಾಡಿಸುವುದಾಗಿ ಅಭಿವಚನವಿತ್ತ.

ಪ್ರಭಾಕರನಿಗೆ ಇದು ಆಕ್ಷೇಪಕರವಾಗಿ ತೋರಲಿಲ್ಲ. ಹೊರಲಾರದ ಹೊರೆಯನ್ನು ಇದು ವರೆಗೆ ಹೊತ್ತದಾಯಿತು. ಇನ್ನೆಷ್ಟು ಕಾಲ ಹೊರಲಿ? ಶ್ಯಾಮಣ್ಣನನ್ನು ನಂಬಿ ಜೀವನ ಯಾತ್ರೆಯನ್ನು ಸಾಗಿಸುವುದಕ್ಕಾಗುವುದಿಲ್ಲ. ಕಾಮಾಕ್ಷಿಯ ಮರ್ಜಿ ಒಂದೂ ನಮೂನೆ; ಇಬ್ಬರೂ ಕೈಗೊಟ್ಟು ಏಕರಥರಾಗಿ ನಡೆಸಿಕೊಂಡು ಹೋಗುವುದು ಹೇಗೂ

ದುಷ್ಕರವೆ. ಇಬ್ಬರಲ್ಲಿ ಒಬ್ಬರು—ಕಾರಣಾಂತರದಿಂದ ಅಗಲಿದರೆ ಮುಂದೇನು ಗತಿ? ಅಗಲುವುದು ಅಸಂಭವ ಅಲ್ಲ. ಕಾಮು ದಿನೇ ದಿನೇ ಆತ್ಮವಿಕಾಸ ಹೊಂದುವವಳಾಗಿದ್ದರೆ, ತಾನು ಬೆಳೆಯಲಾರದ ಗೊಡ್ಡಾ ನಂತಿದ್ದರೆ, ಅಗಲದೆ ಇರುವುದಾದರೂ ಹೇಗೆ? ಇಂತಹ ಸಂಭವದಲ್ಲಿ ಕಷ್ಟಕ್ಕೀಡಾಗುವ ಪತ್ರಿಕೆಯನ್ನು ಹತ್ತು ಜನರ ಆಡಳಿತಕ್ಕೆ ಒಪ್ಪಿಸುವುದು ಲೇಸಲ್ಲವೇ? ತನ್ನ ನಾಯಕತ್ವದಲ್ಲಿ ಹೊರಟ ಪತ್ರಿಕೆ ಯಾರ ನಾಯಕತ್ವದಲ್ಲಾದರೂ ನಡೆದು ಕೀರ್ತಿಗಳಿಸಿದರೆ ಆತ್ಮಕ್ಕೆ ಸಮಾಧಾನವಲ್ಲವೆ? ನಾಗೇಶನು ಈ ವಿಚಾರವನ್ನೆತ್ತಿದಾಗ ಪ್ರಭಾಕರನು ಧೈರ್ಯದಿಂದ "ಆಗಬಹುದು" ಎಂದು ಉತ್ತರಕೊಟ್ಟ.

ಆದರೆ ಕಾಮಾಕ್ಷಿ ಒಪ್ಪಲಿಲ್ಲ; ಸರ್ವಥಾ ಒಪ್ಪಲಿಲ್ಲ. ತಾವೇ ಬಿತ್ತಿ, ತಾವೇ ತಮ್ಮ ರಕ್ತವನ್ನೆರೆದು, ಬೆಳೆಸಿದ ಸಸಿ ಮರವಾಗಿ ಹಣ್ಣು ಕೊಡುವ ಕಾಲಕ್ಕೆ ಬೇರೆಯವರಿಗೆ ಮಾರುವುದೆಂದರೇನು? ಎಂದು ಆಕೆ ಪ್ರಬಲವಾಗಿ ಆಕ್ಷೇಪಿಸಿದಳು. ಅನ್ಯರ ಒಡೆತನದಲ್ಲಿ, ಅನ್ಯರ ತೊತ್ತಾಗಿ, ಒಂದು ದಿನ ನಿಲ್ಲಲಾರೆ—ಎಂದು ಪ್ರತಿಜ್ಞೆ ಮಾಡಿದಳು. ನಾಗೇಶನೇ ಈ ಪತ್ರಿಕಾ ಮಂಡಲಿಯ ಪ್ರಧಾನ ಪುರುಷನಾಗುವನೆಂಬುದನ್ನು ಕೇಳಿ ಅವಳ ನರನಾಡನಲ್ಲಿ ಸಂಚರಿಸುತ್ತಿದ್ದ ರಕ್ತ ಕುದಿಯೇರಿತು.

ಈ ವಿಚಾರವಾಗಿ ಪ್ರಭಾಕರನಿಗೂ ಕಾಮಾಕ್ಷಿಗೂ ಬಿಸಿ ಬಿಸಿ ಮಾತುಗಳಾದುವು; ಶ್ಯಾಮಣ್ಣನ ಸಮ್ಮುಖದಲ್ಲಿಯೇ ಆದುವು.

ಕಾಮಾಕ್ಷಿ: ಸ್ವಾತಂತ್ರ್ಯವನ್ನೂ ಅಭಿಮಾನವನ್ನೂ ಕಳೆದುಕೊಂಡು ನಾಗೇಶನ ದಾಸರಾಗಿ ಬಾಳುವುದಕ್ಕೆ ನಾವು ಸಿದ್ಧರಾಗಬೇಕೆನ್ನುತ್ತೀರಾ?

ಪ್ರಭಾಕರ: ಸ್ವಾತಂತ್ರ್ಯ! ಹೌದು; ಅದಕ್ಕೆ ಒಂದು ಬಗೆಯ ನಿರ್ಬಂಧವಾಗುತ್ತದೆ; ಅಭಿಮಾನಕ್ಕೆ ಕುಂದೇನು?

ಕಾಮಾಕ್ಷಿ: ಅಂತಹ ದುರ್ಜನರ ಕೂಡೆ....

ಪ್ರಭಾಕರ: ಯಾರು ದುರ್ಜನರು? ಯಾರು ಸಜ್ಜನರು? ಎಂದು ಪರೀಕ್ಷಿಸುವುದಕ್ಕೆ ಆಧಾರವೇನು?

ಕಾಮಾಕ್ಷಿ: ಕೃತಿ....

ಪ್ರಭಾಕರ: ನಾಗೇಶನ ಕೃತಿಯಲ್ಲಿ ಯಾವ ತಪ್ಪನ್ನು ಕಂಡೆ?

ಈ ಮಾತನ್ನು ಕೇಳಿದಾಗ ಕಾಮಾಕ್ಷಿಯ ಮುಖವರ್ಣವು ವ್ಯತ್ಯಾಸ ಹೊಂದಿತು. ತನ್ನನ್ನು ಮುದಿಲಿಸುತ್ತಾನೆ. ಮೊದಲೆನೊಂದು ನವೆಯುವ ತನ್ನ ಹೃದಯಕ್ಕೆ ಮತ್ತೂ ಹೊಡೆಯುತ್ತಾನೆ ಎಂಬ ಭಾವನೆಯಾಗಿ ಕಾಮಾಕ್ಷಿ ಮಾತಾಡಲಿಲ್ಲ.

ಪ್ರಭಾಕರ: ಒಬ್ಬನೊಡನೆ ಸಂಪರ್ಕವನ್ನಿಟ್ಟುಕೊಳ್ಳುವುದೆಂದರೆ, ತಪ್ಪೊಪ್ಪುಗಳನ್ನು ಹೊಂದಿರುವ ಆ ವ್ಯಕ್ತಿಯನ್ನು ಇಡಿಯಾ ಸಮೀಪಕ್ಕೆ ಬರಿಸಿಕೊಳ್ಳುವುದೆಂದರ್ಥ. ಅವನ ಗುಣದೊಡನೆ ದೋಷವೂ ಸಮೀಪಕ್ಕೆ ಬರುತ್ತದೆ—ಎಂದರ್ಥ. ಗುಣವನ್ನು ಮಾತ್ರ ಪುರಸ್ಕರಿಸಿ ದೋಷವನ್ನು ತಿರಸ್ಕರಿಸುವ ಶಕ್ತಿಯಿದೆ ಎಂಬುದನ್ನು ತಿಳಿದುಕೊಂಡೇ ನಾವು ಇಂತಹ ಕೂಟವನ್ನು ಪರಿಗ್ರಹಿಸುವುದಿಲ್ಲವೇ ಕಾಮಾಕ್ಷಿ? ನಾಗೇಶನು ಒಂದೆರಡು ತಿಂಗಳ ಹಿಂದೆ ತ್ಯಾಜ್ಯನಾಗಿರದೆ ಅನಂತರ ಅಸ್ಪೃಶ್ಯನಾಗಬೇಕು ಏಕೆ? ಇದೇ ನನಗರ್ಥವಾಗದ ವಿಷಯ.

ಈ ವಿವರಣವನ್ನು ಕೇಳುವಾಗ ಕಾಮಾಕ್ಷಿಯ ಕಣ್ಣಿನಲ್ಲಿ ಮಾತ್ರ ವಲ್ಲ; ಶ್ಯಾಮಣ್ಣನ ಕಣ್ಣುಗಳಲ್ಲಿಯೂ ನೀರೂರಿತು. ಒಬ್ಬರೂ ಪ್ರತ್ಯುತ್ತರ ಕೊಡಲಿಲ್ಲ.

ಪ್ರಭಾಕರ: ಒಳ್ಳೆಯ ನಾಗೇಶನು ಮಾತ್ರವಲ್ಲ; ಕೆಡುಕನಾದ ನಾಗೇಶನೂ ನಮ್ಮ ಸಹವಾಸಕ್ಕೆ ಯೋಗ್ಯನೆಂದು ಭಾವಿಸಿದೆವಲ್ಲವೆ? ಆತನ ಕೆಡುಕಿನ ಸ್ವರೂಪ ಎಂತಹದೆಂದು ಆಗ ಗ್ರಹಿಸಿರಲಿಲ್ಲ; ಎನ್ನ ಬಹುದು; ಅದು ತಿಳಿದ ಮೇಲೆ, ಅದಕ್ಕೆ ನೀನು ಆಹುತಿಯಾಗಲಿಲ್ಲ ಎಂಬ ಸಮಾಧಾನವನ್ನು ಪಡೆದ ಮೇಲೆ, ಅವನ ಸ್ವಭಾವದ ಆಸ್ವರೂಪ ತಿಳಿದು ಪ್ರತೀಕಾರ ಹೂಡುವ ಶಕ್ತಿ ನಮಗಿದೆ ಎಂದು ಖಚಿತವಾದ ಮೇಲೆ, ಅವನನ್ನು ದೂರವಿರಿಸುವುದರಲ್ಲಿ ಏನು ಔಚಿತ್ಯವಿದೆ? ನೋಡು ಕಾಮಾಕ್ಷಿ.. ಇದು ವರೆಗಿನ ನಮ್ಮ ವ್ಯವಹಾರಕ್ಕೂ ಮುಂದಿನದಕ್ಕೂ ಹೊಂದಿಕೆಯಿಲ್ಲ—ಎಂಬಂತೆ ನಡೆಯುವುದರಲ್ಲಿ ಭೂಷಣವುಂಟೆ? ಈ ವ್ಯತ್ಯಾಸವನ್ನು ಕಂಡರೆ

ಜನರೇನೆಂದಾರು? ನಮಗೆ ನೈತಿಕಶಕ್ತಿ ಸಾಲದು ಎನ್ನಲಾರರೆ? ಎಂದರೆ ನಾವು ಎಂದಾದರೂ ಒಮ್ಮೆ ನೀತಿಯ ಮೇರೆಯನ್ನು ತಿಳಿದೂ ತಿಳಿಯದೆಯೊ ದಾಟುವುದಕ್ಕೆ ಮುನ್ನಡೆಯಿಟ್ಟೆವೆಂದು ಧ್ವನಿತವಾಗುವುದಲ್ಲವೆ? ಅಂತಹ ಊಹೆಗಳಿಗೆ ಏಕೆ ಆಸ್ಪದ ಕೊಡಬೇಕು? ನಾವಿಂದು ಅಗ್ನಿಶುದ್ಧರಾಗಿರುವೆವೆಂದು ಭಾವಿಸಿಕೊ....ಇನ್ನು ಯಾವ ರಾವಣ ಏನು ಮಾಡಿಯಾನು? ನಮ್ಮ ಕರ್ತವ್ಯದ ನಾಲ್ಕು ಗೆರೆಗಳನ್ನು ಮೀರದಿದ್ದರೆ, ಯಾವ ಕಪಟ ಸನ್ಯಾಸಿ ಮೋಸಮಾಡಿಯಾನು? ಧೈರ್ಯವೆಂದರೆ ಈ ಮನೋವೃತ್ತಿ. ಏನೋ ತಿಳಿದುಕೊಂಡು ಆ ತಿಳಿವಳಿಕೆಯ ವ್ಯತಿರಿಕ್ತವಾಗಿ ತೋರಿಬಂದುದನ್ನು ಆ ಕಾರಣದಿಂದ ತ್ಯಜಿಸುವುದು ಮೂಢತೆಯ ಲಕ್ಷಣ; ಹೇಡಿತನದ ಲಕ್ಷಣ.

ಈ ವಾದವು ತರ್ಕಬದ್ಧವಾಗಿದ್ದರೂ, ತನ್ನ ದುಡುಕುವ ಸ್ವಭಾವವನ್ನು ಮೆಚ್ಚದೆ ಎದೆಗೆ ನೋವನ್ನುಂಟುಮಾಡುವ ಉದ್ದೇಶದಿಂದಲೆ ಪ್ರಭಾಕರನು ಆಡಿದನೆಂದು ಕಾಮಾಕ್ಷಿ ಎಣಿಸಿದಳು. ಆದುದರಿಂದಲೇ ಅವಳ ನೋವು ಹೆಚ್ಚಿತು.

ಕಾಮಾಕ್ಷಿ: ನಾನು ಹೇಡಿಯೆಂದು ಒಪ್ಪಿಕೊಂಡು ಈ ವ್ಯವಸ್ಥೆಯನ್ನು ವಿರೋಧಿಸುತ್ತೇನೆ.

ಪ್ರಭಾಕರ: ಅನುಭವ ಹೆಚ್ಚಿದಂತೆ ನಾವು ಹೇಡಿಗಳಾಗುವುದಾದರೆ, ಆ ಅನುಭವದ ಪ್ರಯೋಜನವೇನು?

ಕಾಮಾಕ್ಷಿ: ಏನೂ ಇಲ್ಲ. ಹೇಗಾದರೂ ಬದುಕಬೇಕಲ್ಲವೆ?

ಪ್ರಭಾಕರ: ಹೌದು; ಅದೊಂದು ಸಮಸ್ಯೆ! ಎಂದು ನಕ್ಕ. ಆ ನಗುವಿನಲ್ಲಿ ಪ್ರಸನ್ನತೆಯಿರಲಿಲ್ಲ. ಏನೋ ಒಂದು ಛಾಯೆ ಮುಸುಕಿದಂತಿತ್ತು.

ಆಗ ಶ್ಯಾಮಣ್ಣನು ಹೀಗೆಂದ: ಈ ವಾದದಲ್ಲಿ ನಾನು ಪ್ರವೇಶಿಸಬಹುದಾದರೆ, ನನ್ನ ಅಭಿಪ್ರಾಯಗಳನ್ನು ಹೇಳಬೇಕೆಂದಿದ್ದೇನೆ. ಮನುಷ್ಯರ ಸ್ವಭಾವವು ಪದರುಪದರಾಗಿದೆ; ನಿರಿನಿರಿಯಾಗಿದೆ; ಒಂದರೊಳಗೆ ಇನ್ನೊಂದಿದೆ. ಅದರಲ್ಲಿ ಸ್ವಲ್ಪಾಂಶವನ್ನಾದರೂ ಪ್ರತ್ಯಕ್ಷ ಮಾಡಿಕೊಂಡ

ಮೇಲೆ ತಾನೆ ನಮ್ಮ ಅನುಭವ ಪಕ್ವಸ್ಥಿತಿಗೆ ಬರುವುದು. ಆಗ ತಾನೆ ತಾನು ಯಾರು? ಇತರರು ಯಾರು? ಎಂಬ ತಿಳಿವಳಿಕೆ ಮೂಡುವುದು. ಈಗ ನಮಗೆ ಈ ಜ್ಞಾನೋದಯವಾಗಿದೆ; ಇದು ವರೆಗೆ ಕುರುಡರಾಗಿದ್ದೆವು; ಮೂಢರಾಗಿದ್ದೆವು; ಎಂಬ ಸಿದ್ಧಾಂತದಿಂದ ಹೊಸ ದಾರಿಯನ್ನು ಹಿಡಿಯ ಬಾರದೇಕೆ?

ಪ್ರಭಾಕರ: ಎಂದರೆ, ಮನುಷ್ಯರ ಬಹು ಸ್ವರೂಪತೆಯನ್ನು ಸಾರಿ ಹೇಳುವ ನಾಗೇಶ ನಮಗಿಂತ ಎಷ್ಟೋ ಜಾಣನೆಂಬುದನ್ನು ಮೊದಲು ಒಪ್ಪಿ ಕೊಳ್ಳುವುದು; ಅಲ್ಲವೇ?

ಶ್ಯಾಮಣ್ಣ: ಬೇಕಾದರೆ ಹಾಗೆ ಹೇಳಬಹುದು. ವಸ್ತುಸ್ಥಿತಿ ನಾನು ಹೇಳಿದಂತೆ. ಇತರರನ್ನು ನಾವೀಗ ತಿಳಿದಿದ್ದೇವೆ; ತಿಳಿಯಬೇಕಾದಷ್ಟು ತಿಳಿದಿದ್ದೇವೆ—ಎನ್ನಬೇಕಾಗಿಲ್ಲ. ನಮ್ಮ ಕೆಲಸಕ್ಕೆ ಇಷ್ಟೆ ಸಾಕು—ತಕ್ಕ ಮಟ್ಟಿಗೆ ನಮ್ಮನ್ನು ನಾವೆ ತಿಳಿದಿದ್ದೇವೆ ಎಂಬುದು. ಈ ಮಿತಿಮೇರೆಗಳಲ್ಲಿ ಮುಂದುವರಿಯೋಣ....

ಪ್ರಭಾಕರ: ಹಾಗಿದ್ದರೆ ನನ್ನ ಅಭಿಪ್ರಾಯವನ್ನು ಕೇಳಿ. ಮಿತಿ ಮೇರೆಗಳನ್ನು ಹಾಕಿಕೊಳ್ಳುವುದಾದರೆ ಪ್ರತಿಯೊಬ್ಬನ ಶಕ್ತಿಗೂ ಒಂದೊಂದು ಮಿತಿಮೇರೆಯನ್ನು ಹಾಕಿಕೊಳ್ಳಬೇಕಾದೀತು. ಕೂಡಿ ಬಾಳುವ ವ್ಯಕ್ತಿ ಗಳಲ್ಲಿ ಒಬ್ಬರ ಮಿತಿ ಒಬ್ಬರ ಮೇರೆ ಇನ್ನೊಬ್ಬರ ಮಿತಿಮೇರೆಗಳಿಗಿಂತ ಹೆಚ್ಚಿರಬಹುದು; ಕಡಿಮೆಯಾಗಿರಬಹುದು. ಎಂದರೆ ಇಲ್ಲಿಯೂ ಹೊಂದಿಕೆ ತಪ್ಪಿತು ನೋಡು.

ಈ ಮಾತು ಯಾರಿಗೆಲ್ಲ ಅನ್ವಯಿಸುವುದಿಲ್ಲ? ತನ್ನನ್ನೂ ತಾಗದಿರು ವುದೇ? ಶ್ಯಾಮಣ್ಣನ ಹೃದಯದಲ್ಲಿಯೂ ಕತ್ತಲಾಯಿತು. ಸ್ವಲ್ಪಕಾಲ ಮೌನದಲ್ಲಿ ಸಂದಿತು. ಕೊನೆಗೆ ಪ್ರಭಾಕರ; "ಕಾಮಾಕ್ಷಿ! ನಾಗೇಶನ ಯೋಜನೆಗೆ ಒಪ್ಪಿಗೆ ಕೊಟ್ಟಿದ್ದೇನೆ. ಬುದ್ಧಿ ಹೊಳೆದಂತೆ ನೀನು ಮಾಡ ಬಹುದು" ಎಂದು ತನ್ನ ನಿರ್ಣಯವನ್ನು ಕೊಟ್ಟ.

"ಕಾಮಾಕ್ಷಿ ಪ್ರಭಾಕರನ ಹೃದಯಸ್ಥಾನದಿಂದ ಜಾರಿ ಬಿದ್ದಳು! ನಾನೂ ದೂರವಾದ ಹಾಗಿದೆ. ನಾನು ಆ ಸ್ಥಾನಕ್ಕೆ ಏರಬಯಸಿದುದೇ

ತಪ್ಪಾಯಿತೇನೊ........ತಪ್ಪು ಮಾಡದಿದ್ದರೆ ಜೀವನದಲ್ಲಿ ವೈವಿಧ್ಯವುಂಟೆ? ಅನುಭವ ಭಂಡಾರದಲ್ಲಿ ಹಲವು ಒಡವೆಗಳು ಇವೆ; ಇದೂ ಒಂದು" ಎಂದು ಶ್ಯಾಮಣ್ಣ ತನಗೆ ತಾನೆ ಸಮಾಧಾನ ಪಡಿಸಿಕೊಂಡ.

ಪ್ರಭಾಕರನದು ಯಥಾರ್ಥವಾದ ಅಂತಃಕರಣದ ಮಾತೆ? ಅಥವಾ ನೊಂದ ಜೀವದ ಉಸಿರೇ? ಎಂದು ಕಾಮಾಕ್ಷಿ ಪ್ರಶ್ನೆಹಾಕಿದಳು.

೨೪

"ಹೊಸ ವ್ಯವಸ್ಥೆಗೆ ಪ್ರಭಾಕರನ ಸಮ್ಮತಿಯಿದೆ; ಕಾಮಾಕ್ಷಿಯದು ಇಲ್ಲ. ಶ್ಯಾಮಣ್ಣನೊ....ದುಡ್ಡಿನಿಂದ ತನ್ನ ಸೇವೆಯನ್ನು ಮಾತ್ರವಲ್ಲ—ಜೀವವನ್ನೂ ಕೊಂಡುಕೊಳ್ಳಬಹುದು...." ನಾಗೇಶನ ಸಿದ್ಧಾಂತವಿದು.

ಈ ಸಂದರ್ಭದಲ್ಲಿ ಕೇಶವಯ್ಯನವರ ಸಹಾಯ ಅತ್ಯವಶ್ಯವಾಗಿ ಬೇಕಾಗಿತ್ತು. ಇದು ವರೆಗೆ "ತಪ್ಪೊಪ್ಪಿಗೆ"ಯನ್ನು ಇಡದ ಕೇಶವಯ್ಯ ಸುಶೀಲಮ್ಮನ ಕರ್ಣಮಂತ್ರದಿಂದ ತನ್ನವನಾಗಬಹುದೆಂಬ ದೃಢವಿಶ್ವಾಸ ನಾಗೇಶನದು. ಪದೇಪದೇ ಪರಸ್ಪರ ಸಂದರ್ಶನವಾಗದಿರುವುದರಿಂದ ಸಂಬಂಧಸಡಿಲಾಗುತ್ತದೆ. ಆದುದರಿಂದ ಕೇಶವಯ್ಯನವರನ್ನೂ ಸುಶೀಲಮ್ಮನನ್ನೂ ಮಂಗಳೂರಿಗೇ ಬರಮಾಡಬೇಕಿತ್ತು.

ಸುಶೀಲಮ್ಮನಿಗೆ ಹೃದಯವಿಕಾರ ಎಂಬ ರೋಗವಿದ್ದಿತೆಂದು ಹಿಂದೆ ಯಾರೋ ಹೇಳಿದ್ದಾರೆ. ಕೆಲದಿನಗಳಿಗೆ ಹಿಂದೆ ಆಕೆ ಜ್ವರಹಿಡಿದು ಬಿದ್ದಳು. ನಾಗೇಶ ಈ ಜ್ವರದಲ್ಲಿ ಹೃದಯ ರೋಗವನ್ನು ಗುರುತಿಸಿದ.

"ಚೆನ್ನಾಗಿ ಲಾಲನೆ ಬೇಕು. ವಾರಕ್ಕೆರಡು ಬಾರಿಯಾದರೂ ರೋಗ ಪರೀಕ್ಷೆಯಾಗಬೇಕು. ಕೆಲತಿಂಗಳು ಮಂಗಳೂರಲ್ಲಿಯೆ ನೆಲಸುವುದು ಹಿತಕರ" ಎಂದು ಬೋಧನೆ ಕೊಟ್ಟ.

"ಮನೆಮಾಡಿದರಾಯಿತು!" ಎಂದಳು ಸುಶೀಲಮ್ಮ.

"ಅಳಿಯನ ಮನೆ ನಮ್ಮದೇ ಅಲ್ಲವೇ?" ಎಂದ ಕೇಶವಯ್ಯ.

"ಅದು ಅಳಿಯನ ಮನೆ ಮಾತ್ರವೆ? ಗೆಳೆಯನೂ ಇದ್ದಾನಲ್ಲವೆ?"

" ಅದಕ್ಕೇನಾಗಬೇಕು ? ಗೂಡನ್ನು ಒಡೆದುಬಿಟ್ಟರೆ ಗಿಳಿ ಓಡಿಹೋಗು ವುದಲ್ಲಾ!" ಎಂದು ನಾಗೇಶನು ಉದ್ಗರಿಸಿದ.

ಕೇಶವಯ್ಯನಿಗೆ ಇದು ಪ್ರಶಸ್ತವಾದ ಉಪಾಯವಾಗಿ ತೋರಿತು. ಪಾಪ! ಆ ಹೆಣ್ಣು ಮಗಳು ಅಪವಾದದ ಬೆಂಕಿಯಲ್ಲಿ ಸುಟ್ಟು ಹೋಗಿದ್ದಾಳೆ. ಎಲ್ಲ ಆ ಮನುಷ್ಯನಿಂದಾಗಿ....ನಾವೇ ಅವಳೊಡನೆ ಇದ್ದರೆ ಆ ಅನಾಯಿಸ್ನಿಂದ ತಾನೇ ಪಲಾಯನ ಮಾಡುತ್ತದೆ. ನಾಗೇಶನ ಉಪಾಯ ಗ್ರಾಹ್ಯವಲ್ಲವೆ? ಇದರಿಂದ ಕಲಹವಿಲ್ಲದೆ, ಬಿರುಮಾತುಗಳಿಗೆ ಅವಕಾಶವಿಲ್ಲದೆ, ಸುಲಭವಾಗಿ ಉದ್ದೇಶ ಸಾಧನೆಯಾಗುವುದು. ಅಳಿಯನಿಗೆ ಕೂಡಲೇ ತನ್ನ ಆಗಮನವನ್ನು ತಿಳಿಸಬೇಕೆಂದು ಕೇಶವಯ್ಯ ಪತ್ರಬರೆದ.

ಚಿರಂಜೀವಿಗೆ—ಆಶೀರ್ವಾದ....

ನಿನ್ನ ಅತ್ತೆಗೆ ಅಸ್ವಾಸ್ಥ್ಯ. ಹತ್ತು ದಿನಗಳಿಂದ ಹಾಸಿಗೆ ಹಿಡಿದಿದ್ದಾಳೆ. ಕೆಲ ವರ್ಷಗಳ ಹಿಂದೆ ಜಿಲ್ಲಾ ಸರ್ಜನರು ಪರೀಕ್ಷಿಸಿ ಈಕೆಗೆ ಹೃದಯ ವಿಕಾರವಿದೆ ಎಂದು ಹೇಳಿದ್ದರು ಏರುವ ಪ್ರಾಯದೊಂದಿಗೆ ವಿಕಾರವೂ ಏರುವ ಹಾಗೆ ತೋರುತ್ತದೆ. ಅಳಿಯ ನಾಗೇಶನೂ ಇದೇ ಅಭಿಪ್ರಾಯವುಳ್ಳವನಾಗಿದ್ದಾನೆ.

ಮಂಗಳೂರಿನಲ್ಲಿದ್ದು ಔಷಧ ಮಾಡಿಸಬೇಕಂತೆ. ಆಕೆಯನ್ನು ಬೇರೆ ಮನೆಯಲ್ಲಿರಿಸಿದರೆ ಯಾರೇನೆಂದಾರು? ನಾಗೇಶನ ಮನೆಯಿದೆ——ಎಂದು ಬಲ್ಲೆ. ಆದರೆ ಅಲ್ಲಿ ಅವಳನ್ನಿಟ್ಟರೆ ನೀನು ವ್ಯಸನ ಪಡುವೆಯೆಂಬುದನ್ನೂ ಬಲ್ಲೆ. ಮಗಳೊಂದಿಗೇ ಇರಬೇಕೆಂದು ಅವಳಾಸೆ. ನಾಗೇಶನದು ಗಂಡು ಸಂಸಾರ. ಅಲ್ಲಿ ಹೆಂಗುಸರಾರೂ ಇಲ್ಲವಷ್ಟೆ. ನಿನ್ನ ಅತ್ತೆಗೆ ಹೊತ್ತು ಹೋದೀತೆ?

ಇನ್ನೆಂಟು ದಿನಸಗಳಲ್ಲಿ ಬರುತ್ತೇವೆ. ಮನೆಯಲ್ಲಿ ಸ್ಥಳದ ಇಕ್ಕಟ್ಟಿದೆ. ಆದರೆ ಒಂದೇ ಕರುಳಿನ ಸಂಬಂಧವಲ್ಲವೆ? ಹೇಗೂ ಆಗುತ್ತದೆ. ತಾಯಿ ಮಗಳು ಹೇಗೂ ಸುಧಾರಿಸಿ ಕೊಳ್ಳುತ್ತಾರೆ.

ನಿನ್ನ ಸಂಸಾರವೂ ದೊಡ್ಡದಲ್ಲ. ಶಾಂತಮ್ಮನಿದ್ದಾಳೆ. ಸುಶೀಲಮ್ಮನ ಶುಶ್ರೂಷೆಗೆ ಯಾವ ಲೋಪವೂ ಆಗದು. ಕಾಮಾಕ್ಷಿ ದುಡಿಯುವ ಹುಡುಗಿಯಾದರೂ ಮೇಲಿಂದ ಮೇಲೆ ವಿಚಾರಿಸಿಕೊಳ್ಳುವಳು.

ಡಾಕ್ಟರರಲ್ಲಿ ಹೋಗಿ ಬರಬೇಕಾದರೆ ಸೀಸಿರುವೆ. ನಮಗೆ ಇನ್ನೇನು ಬೇಕು?

ಇತ್ತೀಚೆಗೆ ಏಕೋ ಸಿನ್ನತ್ತೆಯ ಸ್ವಭಾವ ಬಲು ವಿಚಿತ್ರವಾಗುತ್ತಾ ಬರುತ್ತಿದೆ. ಪರಪುರುಷರು ಎಂಬವರ ನೆರಳಿರುವಲ್ಲಿಗೆ ಕಣ್ಣೆತ್ತಿ ನೋಡು ವುದಿಲ್ಲ. ಪ್ರಪಂಚದಲ್ಲಿ ಸ್ತ್ರೀಪುರುಷರ ಸಂಖ್ಯೆ ಸಮಾನವಷ್ಟೆ. ಒಬ್ಬ ಗಂಡ ಅವನ ಹೆಂಡತಿಯಾಗಿರುವ ಹೆಣ್ಣು—ಈ ಇಬ್ಬರು ವ್ಯಕ್ತಿಗಳು ಇತರ ಸ್ತ್ರೀಪುರುಷರೆಲ್ಲ ಘೋರಂಗಿಗಳೆಂದು ತಿಳಿಯುವುದಾದರೆ ಪ್ರಪಂಚದಲ್ಲಿ ಹೇಗೆ ಕಾಲಕ್ಷೇಪ ಮಾಡಲಾದೀತು? ಸಿನ್ನತ್ತೆಗೆ ಇದು ಗೊತ್ತಿಲ್ಲ; ಗೊತ್ತು ಮಾಡಿಕೊಳ್ಳುವ ಬಯಕೆಯೂ ಇಲ್ಲ. ಹಟವನ್ನು ಬಿಡುವಹಾಗಿಲ್ಲ.

ಸಿನ್ನತ್ತೆಯೊಡನೆ ನಾನೂ ನುಂಗಳೂರಿಗೆ ಬರುತ್ತೇನೆ. ಅವಳ ಚಿಕಿತ್ಸೆಯನ್ನು ನಾಗೇಶನ ಕೈಗೆ—ಆರೈಕೆಯನ್ನು ನಿಮ್ಮ ಕೈಗೆ, ಒಪ್ಪಿಸಿ ಆಗಿಂದಾಗ ಬರುತ್ತಾ ಹೋಗುತ್ತಾ ಇರುತ್ತೇನೆ.

ಸಿನ್ನತ್ತೆಗೆ ಒಂದೇ ಒಂದು ಆಸೆಯಿತ್ತು. ಅದು ಹೇಗೆ ಈಡೇರು ವುದೋ ಹೇಳಬರುವಂತಿಲ್ಲ. ಕಾವಾಕ್ಷಿಗೆ ತಿಂಗಳು ತುಂಬುವಾಗ ಇಲ್ಲಿಗೇ ಕರೆದುಕೊಂಡು ಬರಬೇಕು. ಚೊಚ್ಚಲ ಮಗವನ್ನು ತಾನೇ ನಿನ್ನ ಕೈಗೆ ಎತ್ತಿಕೊಡಬೇಕು—ಎಂಬ ಲವಲವಿಕೆ....ದೇವರು ಏನನ್ನು ಕಂಡಿದ್ದಾನೋ ತಿಳಿದಿಲ್ಲ....

ಅವಳಿಲ್ಲದೆ ಇಲ್ಲಿಗೆ ಕರೆದುಕೊಂಡು ಬಂದರೆ ನನ್ನಿಂದ ಏನಾದೀತು ಪ್ರಭಾ? ಅವಳಿದ್ದರೆ ಸಕಲವೂ ಇದೆ; ಇಲ್ಲದಿದ್ದರೆ ಏನೂ ಇಲ್ಲ.

ಬಹುಶಃ ಅಲ್ಲಿಯೇ ಇದ್ದು ಬಾಣಂತನವನ್ನು ನೋಡುತ್ತಾಳೆ. ನಲುವತ್ತು ದಿನ ಕಳೆದ ಮೇಲೆ ಇಲ್ಲಿಗೆ ಕರೆದುಕೊಂಡು ಬರುತ್ತಾಳೆ. ಯಾವುದೂ ಆರೋಗ್ಯವು ಸುಧಾರಿಸಿದರೆ....ಇಲ್ಲದಿದ್ದರೆ ಆ ಪುಣ್ಯವೂ ಆಕೆಗಿಲ್ಲ....

ಇತ್ತೀಚೆಗೆ ನೀವು ಹಣದ ಕಷ್ಟದಲ್ಲಿ ಸಿಕ್ಕಿಕೊಂಡಿದ್ದೀರಿ—ಎಂದು ಕೇಳಿದ್ದೇನೆ. ಆ ವಿಷಯದಲ್ಲಿ ಯೋಚನೆ ಬೇಡ. ನಾಗೇಶನೂ ಏನೋ ಹೇಳಿದ್ದಾನೆ. ನಾವಿಬ್ಬರೂ ಕೂಡಿ ನಿಮ್ಮನ್ನು ಮೇಲೆತ್ತುತ್ತೇವೆ. ಇಂದಿ ನಿಂದ ಆ ಯೋಚನೆಯನ್ನು ಬಿಟ್ಟುಬಿಡು.

ಯಾವ ಕಾರಣದಿಂದಲೋ ನನ್ನ ಮಗಳು, ನನ್ನ ಒಬ್ಬಳೇ ಒಬ್ಬಳು ಮಗಳು, ನನ್ನಿಂದ ದೂರಕ್ಕೆ ಓಡುತ್ತಿದ್ದಾಳೆ. ಕಾರಣವನ್ನು ಹುಡುಕಿ ಏನು ಪ್ರಯೋಜನ ? ಇನ್ನು ಮುಂದೆ ಓಡಲಾರಳು. ಓಡುವುದಕ್ಕೆ ಅವಕಾಶ ಕೊಡುವಂತಿಲ್ಲ.

ಅತ್ತೆಯು ನಾಲಗೆಯು ವೇಗ ಹೆಚ್ಚೆಂದು ನಿನಗೇ ಗೊತ್ತಿದೆ. ಸ್ವಲ್ಪ ಹಿಂದಿನ ಕಾಲದವಳು. ಏನಾದರೂ ಬಿರುಮಾತುಗಳನ್ನು ಆಡಬಹುದು. ಕೇಳಿದರೂ ಕೇಳದಂತೆ ಕಿವಿಯನ್ನು ಕೊಡವಿ ನಡೆಯುವ ಶಕ್ತಿ ನಿಮ್ಮಿಬ್ಬರಿಗೂ ಇದೆಯೆಂದು ನಾನು ಚೆನ್ನಾಗಿ ತಿಳಿದಿದ್ದೇನೆ.

ನೀವಿಬ್ಬರೂ ಈ ಪತ್ರವನ್ನು ಚೆನ್ನಾಗಿ ಓದಿ ಮನನ ಮಾಡಬೇಕು. ಉತ್ತರವನ್ನು ನಾನು ನಿರೀಕ್ಷಿಸುವುದಿಲ್ಲ. ಇಂದಿನಿಂದ ಎಂಟನೆಯ ದಿನ ನಿನ್ನ ಮನೆಯಲ್ಲಿ ಬಂದಿಳಿಯುತ್ತೇನೆ.

ಇಂತೀ
ಕೇಶವಯ್ಯ.

ಪತ್ರವು ನಾಗೇಶನ ಮೂಲಕವೇ ಗುರಿಯನ್ನು ಸೇರಿತ್ತು. ಪ್ರಭಾಕರ ಪತ್ರವನ್ನು ಆಮೂಲಾಗ್ರವಾಗಿ ಓದಿದ. ಕೇಶವಯ್ಯನು ಸೂಚಿಸಿದಂತೆ ಮನನ ಮಾಡಿದ. ಪತ್ರದಲ್ಲಿ ಸ್ವಾರಸ್ಯವಿತ್ತು....ಅತ್ತೆಗೆ ಹೃದಯ ವಿಕಾರ ವಂತೆ! ಅಳಿಯನಿಗೇನು ? ಮಗಳಿಗೇನು ? ಇವರಿಗೂ ಒಂದು ವಿಕಾರ ವಲ್ಲವೆ? ಅವಳ ವಿಕಾರಕ್ಕೆ ಡಾಕ್ಟರರ ಔಷಧವಾದರೆ ಇವರದಕ್ಕೆ ಪ್ರತಿ ಕಾರವೇ ಇಲ್ಲ. ಅತ್ತೆಯ ನಾಲಗೆಗೆ ವೇಗ ಹೆಚ್ಚು; ಅವಳು ಏನಾದರೂ ಹೇಳಿದರೆ ಕಿವುಡು ಕಿವಿಯಲ್ಲಿ ಕೇಳಬೇಕು! ಯಾರ ನಾಲಗೆ ಕುಂಟಾಗಿದೆ ? ತಾವು ಈ ವರೆಗೆ ಕಿವುಡರಾಗಿರುವುದಕ್ಕೆ ಅಭ್ಯಾಸ ಮಾಡಿರಲಿಲ್ಲವೆ ? ಕಾಗದದ ನಾಲಗೆಗಳು ಹೇಗೆ ಬೊಗಳಲಿಲ್ಲ ? ಚರ್ಮದ ನಾಲಗೆಗಳು ಹೇಗೆ ಬೀಸಲಿಲ್ಲ ? ಎಲ್ಲವನ್ನೂ ಕೇಳಿ ಮೌನವ್ರತಿಗಳಾದವರಿಗೆ ಅತ್ತೆಯ— ಅಥವಾ——ಚಿಕ್ಕಮ್ಮನ ನಾಲಗೆ ವೇದನೆಯನ್ನುಂಟು ಮಾಡೀತೆ ? ಮಾವಯ್ಯನವರು ಹೇಳಬೇಕಾದುದನ್ನೆಲ್ಲ ಹೇಳಿಬಿಟ್ಟಿದ್ದಾರೆ ಪತ್ರದಲ್ಲಿ....,

ಶ್ಯಾಮಣ್ಣನು ತ್ಯಾಜ್ಯವಸ್ತು......ಅವನನ್ನು ಹೊರಡಿಸಬೇಕು! ನಾಗೇಶನಲ್ಲಿ ವಿಶ್ವಾಸ....ಇದಕ್ಕೆ ಕಾಮಿ ಏನೆನ್ನುತ್ತಾಳೋ....ಏನೆಂದರೂ ಇದು ಅವರ ಮತ್ತು ನಾಗೇಶನ ಮಿತಿಮೀರಿಗಳಿಗೆ ಸೇರಿದುದಲ್ಲದೆ ತನ್ನದಕ್ಕಲ್ಲ. ಕಾಮಿ ದುಡಿಯಬಾರದು; ಅವರು ಧನ ಸಹಾಯ ಮಾಡುತ್ತಾರೆ. ತಂದೆಯು ಕೊಡುವ ಭಿಕ್ಷೆಯಿಂದ ತೃಪ್ತಳಾಗುವ ಹೆಣ್ಣಲ್ಲ ಕಾಮಿಯೆಂದರೆ.....ಅವಳು ಅಭಿಮಾನದ ಮುದ್ದೆ....ತನ್ನನ್ನು ಸಹಾಯದ ಹಗ್ಗದಿಂದ ಕಟ್ಟಿಹಾಕು ತ್ತಾರೆ....ಸಾಧ್ಯವಾಗುವುದೇ ನೋಡಲಿ....ಅಂತೂ ಸಾಮದಿಂದ ಸೆರೆಹಿಡಿ ಯುವುದಕ್ಕೆ ಪ್ರಯತ್ನಿಸುತ್ತಾರೆ. ಆಗಲಿ ಪ್ರಯತ್ನ....ಇತರರು ಭೇದ ದಾನಗಳಿಂದ ಹಿಡಿಯ ಬಯಸುವಾಗ ಇವರಿಗೆ ಸಾಮೋಪಾಯದ ನೆನ ಪಾದರೂ ಆಯಿತಷ್ಟೆ? ಅದೇ ದೊಡ್ಡ ಉಪಕಾರ!

ಪತ್ರವು ವಿನೋದಕರವಾಗಿತ್ತು ಪ್ರಭಾಕರನ ದೃಷ್ಟಿಯಲ್ಲಿ. ಮಾವಯ್ಯ ಉತ್ತರವನ್ನು ಅಪೇಕ್ಷಿಸದಿದ್ದರೂ ಅವನು ಉತ್ತರ ಬರೆದ. "ಬಹಳ ಸಂತೋಷ; ಬೇಗನೆ ಬಂದು ಬಿಡಿ" ಎಂಬೆರಡೇ ವಾಕ್ಯಗಳು ಅದರಲ್ಲಿ ದ್ದುವು. ಕಾಮಾಕ್ಷಿಯ ಮತ್ತು ತನ್ನ ಕೂಡುಕಟ್ಟು ಸಡಿಲಾಗಬೇಕಾ ಗಿತ್ತು. ಅದಕ್ಕೆ ಇದೂ ಕಾರಣವಾಗ ಬಹುದಲ್ಲವೆ?

ಆ ಮೇಲೆ ಕಾಮಾಕ್ಷಿಗೆ ತಂದೆಯ ಪತ್ರವನ್ನು ಕೊಟ್ಟು, ಅವಳು ಅದನ್ನೋದಿ ಯಾವ ವಿಕಾರಕ್ಕೀಡಾಗುವಳು? ಎಂಬುದನ್ನು ತಿಳಿಯ ಲಿಚ್ಛಿಸದೆ ಪತ್ರವನ್ನು ಆಕೆಯ ಕಡೆಗೆ ಎಸೆದು ಪಲಾಯನ ಮಾಡಿದ.

ಕಾಮಾಕ್ಷಿ ಪತ್ರವನ್ನೋದಿದಳು....ಒಮ್ಮೆ ಓದಿದಳು....ಎರಡು ಬಾರಿ ಓದಿದಳು....ಪ್ರತಿಯೊಂದು ವಾಕ್ಯಕ್ಕೆ ಅರ್ಥಮಾಡಿದಳು.....ಆದ ಅರ್ಥ ಒಂದೇ ಒಂದು—ತನ್ನ ನಡತೆ ಆಕ್ಷೇಪಣೀಯವಾಗಿ ತೋರಬಹುದು ಲೋಕದ ಕಣ್ಣಿಗೆ. ಹಾಗೆ ಹೇಳುವುದಕ್ಕೆ ತಂದೆಗೆ ಸಂಕೋಚವಾಗುತ್ತದೆ. ಇದೆಲ್ಲ ಕೇವಲ ನಿರಾಧಾರವಾದ ಅಪವಾದವಾಗಿರಬಹುದು — ಎಂಬ ಸಂದೇಹವೂ ಉಂಟು. ಹೇಗಿದ್ದರೂ, ಮಗಳ — ಅಳಿಯನ ನಡತೆ ಹೇಗಿರ ಬೇಕೆಂಬುದನ್ನು ನುಡಿಯಕೊಂಕುಕೋರಿಗಳಿಂದ ತಿಳಿಸಿಬಿಟ್ಟಿದ್ದಾರೆ.

ಇನ್ನು ಹೆಚ್ಚು ವಿಚಾರಿಸಿದಲ್ಲಿ ಅಳಿಯನಿಗಿಂತಲೂ ಮಗಳೇ ಆಕ್ಷೇಪಣೀಯ ಳಾಗಿದ್ದಾಳೆ. ತಂದೆಗೂ ಅಳಿಯನಿಗೂ ಇರುವ ಅಂತರಕ್ಕಿಂತ ಹೆಚ್ಚಿನ ಅಂತರ ತಂದೆಗೂ ತನಗೂ! ಅಕ್ಷರಗಳಲ್ಲಿ ಅಡಕವಾದ ಅರ್ಥವನ್ನು ಹೆಕ್ಕಿ ನೋಡಿದರೆ ಬೇರೇನು ಅಭಿಪ್ರಾಯವಾದೀತು ?

ಕಾಮಾಕ್ಷಿ ಪತ್ರವನ್ನು ಎದೆಗೆ ಒತ್ತಿಹಿಡಿದು ಧಾರಾಳವಾಗಿ ಅತ್ತಳು; ಅತ್ತು ಕಣ್ಣನ್ನು ಹೊಸೆದಳು....

ಹಿಂದೆ ಅಳುವ ಸಂಪ್ರದಾಯವಿರಲಿಲ್ಲ. ಅತ್ತಿದ್ದರೆ, ತನಗೇನೋ ಮಹಾನರ್ಥವಾಯಿತೆಂದು ಓಡಿಬಂದು ಸಮಾಧಾನ ಪಡಿಸುವುದಕ್ಕೆ ಪ್ರಭಾ ಕರನು ಇರುತ್ತಿದ್ದ. ಇಂದು ಆತನು ಜೀವಂತನಾಗಿದ್ದಾನೆ. ಆದರೆ ಆ ಜೀವಕ್ಕೆ ಈ ಜೀವದ ವೇದನೆ ನಾಟುವಹಾಗಿಲ್ಲ. ಕಾಮಾಕ್ಷಿ ತನ್ನ ಕಣ್ಣೀರನ್ನು ತಾನೇ ಆರಿಸಿಕೊಂಡು---ಆಗಲಿ ಬದುಕುತ್ತೇನೆ---ಎಂದು ಬಾಳುವೆಯ ಸಮೀಪಕ್ಕೆ ಬರಬೇಕಾಗಿದೆ.

೨೫

ಕೇಶವಯ್ಯನವರೂ ಅವರ ಕುಟುಂಬವೂ ನಾಳೆ ಈ ಪ್ರೀತಿಯ ಕ್ಷೇತ್ರಕ್ಕೆ ದಾಳಿಯಿಟ್ಟು ಡೇರೆ ಹೊಡೆಯುತ್ತಾರೆ. ಶ್ಯಾಮಣ್ಣ ಇಂದೇ ಕಾಲು ತೆಗೆಯಬೇಕಾಗಿದೆ.

ಒಂದು ಗೃಹಕೃತ್ಯದಲ್ಲಿ ನೂರಾರು ಕೀಳು ಅಡ್ಡ ಕೆಲಸಗಳಿವೆ. ಅವು ಗಳನ್ನು ಮಾಡುವುದಕ್ಕೆ ಕೀಳುತೊತ್ತುಗಳನ್ನು ನೇಮಿಸುವ ಸಂಪ್ರದಾಯ ವುಂಟು. ಇಂತಹ ಒಂದು ಕೆಲಸವನ್ನಾದರೂ ಮಾಡಿಕೊಂಡು ಈ ಮನೆಯ ಈ ನಾಲ್ಕು ಗೋಡೆಗಳ ಒಳಗೇ ಹೊರಳಾಡಿಕೊಂಡು ಇರಬಹು ದೆಂದರೆ, ಆ ಯೋಗ್ಯತೆ ಕೂಡ ತನಗಿಲ್ಲ—ಎಂಬುದನ್ನು ಕೇಶವಯ್ಯನ ಪತ್ರವು ಸಾರಿ ಹೇಳಿದೆ; ಎಂಬುದು ಅವನಿಗೂ ತಿಳಿದು ಬಂದಿದೆ. ಪ್ರಭಾ ಕರನು ತನ್ನಲ್ಲಿಟ್ಟ ಪ್ರೇಮದಲ್ಲಿ ಬೆಸಿಗೆಯಿರಲಿಲ್ಲ. ಕಾಮಾಕ್ಷಿಯಲ್ಲಿ ಇವ ಳೊಬ್ಬಳು ತಂಗಿಯನ್ನು ಕಂಡಿದ್ದ; ತಾಯಿಯನ್ನು ಕಂಡಿದ್ದ. ದೇವಿ ಯನ್ನು ಕಂಡಿದ್ದನಲ್ಲದೆ ಬೇರೆ ಯಾವ ಮೂರ್ತಿಯೂ ಕಣ್ಣಿಗೆ ಗೋಚರಿಸಿ

ರಲಿಲ್ಲ. ಶ್ಯಾಮಣ್ಣನಿಗೆ ಪ್ರಾಯವಾದರೂ ನಲುವತ್ತೈದು. ಸಕಾಲದಲ್ಲಿ ವಿವಾಹವಾಗಿದ್ದರೆ, ಕಾಮಾಕ್ಷಿಯ ವಯಸ್ಸಿನ ಮಗಳು ಅವನ ಕಣ್ಣುಗಳ ಮುಂದೆ ನಲಿದಾಡುತ್ತಿದ್ದಳು. ಕಾಮಾಕ್ಷಿಯಂತಹ ಮಗಳನ್ನು ಪಡೆಯು ವುದಕ್ಕೆ ಪೂರ್ವ ಸಂಚಿತ ಪುಣ್ಯಾವಿರಬೇಕೆಂಬುದು ನಿಜ. ನಡೆಯದ ಅನೇಕ ಸಂಗತಿಗಳು ನಡೆದಿದ್ದರೆ ಏನಾಗುತ್ತಿದ್ದೀತೆಂದು ಲೆಕ್ಕಹಾಕಿ ಬೆರಳೆ ಣಿಸುವಾಗ, ಸಂಭವನೀಯತೆಗಳಲ್ಲಿ ಕಾಮಾಕ್ಷಿಯಂತಹ ಮಗಳನ್ನು ಪಡೆವ ಸೌಭಾಗ್ಯವನ್ನೂ ಕೂಡಿಸಬೇಕಾಗುತ್ತದೆ. ಅವನು ಈ ಮನೆಯೊಳಗೆ ಕಾಲಿಟ್ಟಂದಿನಿಂದ, ಮನೆಯೊಳಗೆ ಯಾವ ಸವಿಯಿದೆ? ಎಂಬುದನ್ನು ತಿಳಿ ದಿದ್ದಾನೆ. ಸರಳತೆಯಿಂದ ಒಡೆಯುವವರ ಕಾಲಿನೇಟು ಕುಹಕಿಗಳ ಮುದ್ದಾ ಟಕ್ಕಿಂತ ಸುಖಕರ. ಸಾಂತಪ್ಪ ಏನೇನೋ ಬೈದಿದ್ದಾಳೆ. ಅದೊಂದು ಯಂತ್ರ. ಅದಕ್ಕೆ ಮನಸ್ಸೆಂಬುದು ಇದ್ದರೆ, ಅದೇನೋ ಆ ಯಂತ್ರದ ವೇಗದಿಂದುಂಟಾಗುವ ಗಾಳಿಯ ರಭಸವಷ್ಟೆ. ಸ್ಪಷ್ಟವಾಗಿ ಆಡುತ್ತಾಳೆ. ಎದೆಯಲ್ಲಿರುವುದನ್ನೆಲ್ಲ ತೆಗೆದು ಹೊರಗೆ ಚೆಲ್ಲಿಬಿಡುತ್ತಾಳೆ. ನಿರ್ದುಷ್ಟ ಜಂತುವದು....ಪ್ರಭಾಕರನ ಪುರುಷಗುಣದ ಸೌಂದರ್ಯ ಇನ್ನೆಲ್ಲಿಯೂ ಇಲ್ಲ. ಸ್ವತಂತ್ರ ವಿಚಾರ; ಅದರಲ್ಲಿಯೂ ಒಂದು ಬಗೆಯ ಗಂಭೀರತೆ; ಕಷ್ಟವನ್ನು ಸಹಿಸುವ ಗುಣ; ಆದರೆ ಸಹಿಸಿದೆ ಸಹಿಸಿದೆ ಎಂದು ತಂಬಟೆ ಬಾರಿಸದ ವಿನಯ; ಸರಳ ಹೃದಯತೆ: ಉಪಕಾರ ಬುದ್ಧಿ; ಉದಾತ್ತ ಧೋರಣ; ಪ್ರಪಂಚದ ಕಡೆಗೆ ಸಂದೇಹ ದೃಷ್ಟಿಯನ್ನಲ್ಲ—ಸಹೃದಯ ದೃಷ್ಟಿಯನ್ನು ಪಸರಿಸುವ ಮಹಿಮೋನ್ನತನು ಅವನು. ಇಂಥವರ ನೆರಳು ಬೀಳುವಲ್ಲಿಗೆ ಯಾತ್ರೆ ಮಾಡಬೇಕು.

ಶ್ಯಾಮಣ್ಣ ಒಂದು ವರ್ಷ ಈ ಮನೆಯಲ್ಲಿದ್ದನು. ಮನೆಯವನಾಗಿ ದ್ದನು. ಈ ಮನೆಯ ಮಾಡು ಗೋಡೆಗಳಂತೆ ಕಂಬತೊಲೆಗಳಂತೆ ಮನೆಯ ಅಂಗವಾಗಿಯೇ ಇದ್ದನು. ಇದರಿಂದಲೇ ಮನೆ ಎದ್ದು ನಿಂತಿಲ್ಲ. ಆದರೂ ಮನೆಯ ಸಂಪೂರ್ಣತೆಗೆ ಕಾರಣವಾಗಿತ್ತೇನೋ ಯಾರು ಬಲ್ಲ ವರು? "ಇದು ನನ್ನ ಮನೆಯಲ್ಲ" ಎಂದು ಒಮ್ಮೆಯಾದರೂ ಭಾವಿಸು

ವುದಕ್ಕೆ ಅವಕಾಶವಿರಲಿಲ್ಲ. ಪ್ರತಿಯೊಂದು ಮೂಲೆ ಮುಡು ತನ್ನವನೀತ ಎನ್ನುತ್ತದೆ. ಹಿತ್ತಿಲಲ್ಲಿರುವ ಪ್ರತಿಯೊಂದು ಗಿಡ ಮರ ತನ್ನ ಕೈಯ ಜಲಧಾರೆಯನ್ನು ಕುಡಿದು ಕವಲು ರೆಂಬೆಗಳನ್ನು ತೂನೆದಾಡಿಸಿ ಕೃತಜ್ಞತೆ ಯನ್ನು ಸೂಚಿಸುತ್ತದೆ. ಮನೆಯಲ್ಲಿರುವ ದಾಸಿ ದನ ತನ್ನನ್ನು ಕಂಡೊಡನೆ ಅಂಬಾ ಎಂದು ಗುರುತಿಸುತ್ತದೆ. ಮನೆಕಾಯುವ ಬಾಡುನಾಯಿ ಕಿವಿ ಯನ್ನು ಕೊಡವಿ "ಈತ ನನ್ನ ಜನ" ಎಂದು ಒಪ್ಪಿಕೊಳ್ಳುತ್ತದೆ. ಸಾಂತಮ್ಮ ಮಗ ಎಂದು ಕರೆಯುತ್ತಿದ್ದಳು. ಗಂಡ ಹೆಂಡಿರು ಇಬ್ಬರಿಗೂ ಅಣ್ಣನಾಗಿದ್ದ. ಈಗ ಆ ಮನೆಯ ಅಂತರ್ವಾಣಿ "ಇದು ನಿನ್ನದಲ್ಲ" ಎಂದು ಸಾರುತ್ತಿರುವುದಲ್ಲ? ಯಾರ ತಪ್ಪಿನಿಂದ ಹೀಗಾಯಿತು?

ತಪ್ಪು ತನ್ನದೆ; ಪರರದಲ್ಲ; ಹುಟ್ಟಿನ ದೋಷ. ಲೋಕದ ಕಣ್ಣಿಗೆ ದೊಡ್ಡದಾಗಿ ತೋರುವ ದೋಷ. ಇದು ವರೆಗೆ ಲೋಕದ ಕೋಟಿ ಗಣಿತ ದಲ್ಲಿ ತಾನೊಬ್ಬನಾಗಿದ್ದನಲ್ಲದೆ, ಆ ಲೋಕವೇ ತಾನಾಗಿರಲಿಲ್ಲ. ಆ ಲೋಕದ ದೃಷ್ಟಿ ತನಗೆ ಬಂದಾಗ ಹೀಗೆ ತೋರೀತು.

ಪುರಾಣಗಳಲ್ಲಿ ಅಯೋನಿಜರ ಮಾತು ಕೇಳಿಬರುತ್ತದೆ. ಶ್ಯಾಮಣ್ಣ ಅಂತಹವನೊಬ್ಬ. ಬೀದಿಯಿಂದ ಎದ್ದು ಬಂದಾತ. ರಸ್ತೆಯ ಮೇಲೆ, ಗಂಟನ್ನು ಹೆಗಲಲ್ಲೇರಿಸಿ, ಮನೆಮನೆಗೆ ಬಂದು ಸಾಮಾನುಗಳನ್ನು ವಿಕ್ರಯಿ ಸುತ್ತಾರಲ್ಲ? ಅವರಿಗೂ ಶ್ಯಾಮಣ್ಣನಿಗೂ ಈ ಮನೆಯ ಸಂಬಂಧದಲ್ಲಿ ಭೇದವೇನು? ಅವನು ಸತ್ತರೆ ಈ ಮನೆಯೊಳಗೆ ಸೂತಕದ ಸುಳಿವಿಲ್ಲ; ಮನೆಯ ಮುಂಗಡೆಯಲ್ಲಿಯೆ ಅನ್ನವಿಲ್ಲದೆ ಕಣ್ಣುಮುಚ್ಚಿದರೆ, ಪಾತಕದ ಪ್ರಾಪ್ತಿಯಿಲ್ಲ. ಇಲ್ಲಿರುವ ಜೀವಿಗಳನ್ನೆಲ್ಲ ಒಂದೇ ಕುಟುಂಬ ಪುರುಷನ ಅವಯವಗಳೆಂದು ಭಾವಿಸಿದರೆ, ಶ್ಯಾಮಣ್ಣನೆಂಬ ಈ ವ್ಯಕ್ತಿಗೆ ಯಾವ ಹೋಲಿಕೆ? ಇದು ಕಣ್ಣಲ್ಲ; ಕಿವಿಯಲ್ಲ; ಕೊನೆಗೆ ಕಾಲೂ ಅಲ್ಲ; ಏನೂ ಅಲ್ಲ. ಬೆನ್ನಿನ ಡುಬ್ಬವೆ? ಅದೂ ಅಲ್ಲ. ಅದನ್ನು ಕತ್ತರಿಸಿ ಬಿಟ್ಟರೆ ಕೆಲವೇಳೆ ಪ್ರಾಣಾಪಾಯವಾಗುವುದುಂಟು. ಶ್ಯಾಮಣ್ಣನನ್ನೇ ಕತ್ತರಿಸಿ ದರೆ ಏನೂ ಬಾಧಕವಿಲ್ಲ. ಅಥವಾ ರೋಗಕ್ಕೆ ಹೋಲಿಸೋಣವೆ? ಅದೇ ಉಚಿತವಾದ ಉಪಮೆ. ಶ್ಯಾಮಣ್ಣನೆಂದರೆ ಈ ಮನೆಯಲ್ಲಿ ಒಂದು ವರ್ಷ

ಯಾತನೆ ಕೊಟ್ಟ ಘೋರ ವ್ಯಾಧಿ. ಮೊದಮೊದಲು ವ್ಯಾಧಿಯಾಗಿ ತೋರ ಲಿಲ್ಲ. ಮತ್ತೆ ಕಾಣಿಸಿಕೊಂಡಿತು. ಇದರ ದೆಸೆಯಿಂದಲೆ ಕಾಮಾಕ್ಷಿ ಕೆಟ್ಟ ಹೆಸರನ್ನು ಕೇಳಬೇಕಾಯಿತೇನೊ ಯಾರು ಬಲ್ಲರು? ಅಂತೂ ಬಂಧುಗಳು, ಬಾಂಧವರು, ನೆರೆಯುವರು, ಕರೆಯುವರು, ಸ್ನೇಹಿತರು, ಕ್ಷೇಮ ಚಿಂತಕರು, ಎಲ್ಲರೂ ಒಂದಾಗಿ ಇದು ತ್ಯಾಜ್ಯವೆನ್ನುತ್ತಾರೆ. ಇರಬಹುದು.

ತಪ್ಪು ತನ್ನದೆ; ಪ್ರಭಾಕರನದಲ್ಲ; ಕಾಮಾಕ್ಷಿಯುದಲ್ಲ. ತನ್ನಂತೆಯೇ ಇವನೆಂಬ ಭಾವನೆಯಿಂದ ಈ ಸರಳಜೀವಿಗಳು ಶ್ಯಾಮಣ್ಣನೆಂಬ ವಿಪತ್ತನ್ನು ಬರಿಸಿಕೊಂಡಿರಬಹುದು. ಶ್ಯಾಮಣ್ಣನಿಗೆ ಒಳನುಗ್ಗುವ ಅಧಿಕಾರವೇನಿತ್ತು? ಎತ್ತಿದವರ ಕೈಗೂಸಿಗೆ ಏರುವ ಉತ್ಸಾಹವಿದ್ದರೂ ಅದು ದೇಶಕಾಲ ಪಾತ್ರ ಗಳನ್ನು ಅವಲೋಕಿಸದೆ ಇರಬೇಕೆ? ತಾನು ಹೊರಟೇ ಹೋಗಬೇಕು. ಸಮುದ್ರದ ಆಳದಲ್ಲಿ ಅವಿತು ಕುಳಿತಿರಬೇಕು; ಎಂಬ ವ್ಯಸನಾವೇಗವು ಅವನ ಸೆರೆಗಳನ್ನು ಬಿಗಿದುವು.

ಮತ್ತೆ ವಿವೇಕೋದಯುವಾಯಿತು. ಅಜ್ಞಾನದಿಂದಲೋ ಪ್ರಮಾದ ದಿಂದಲೋ ಆಗುವುದೆಲ್ಲ ಆಯಿತು. ಈ ಸ್ಥಿತಿಯಲ್ಲಿ ತಲೆ ಮರೆಸುವುದು ಸರ್ವಥಾ ಯೋಗ್ಯವಲ್ಲ. ಗಂಡಾಗಿ ಹುಟ್ಟಿದ್ದೇನೆ; ಗಂಡಾಗಿ ಬೆಳದಿದ್ದೇನೆ; ಹೆಣ್ಣು ಜೀವವೊಂದು ಅಪಾರ ಸಂಕಟದಲ್ಲಿ ಸಿಲುಕಿಕೊಂಡಿದೆ. ಈ ಸುಖ ಮಯವಾದ ಸಂಸಾರ ಶತಚ್ಛಿದ್ರವಾಗಿ, ಧೂಳಿಯಾಗಿ ಅಣುವಾಗಿ ಗಾಳಿ ಯಲ್ಲಿ ತೂರುವುದೆಂಬ ಭೀತಿಯಿರುವಾಗ—ತಾನು ಹಿಂಜರಿಯುವುದೆ? ಆಗುವ ಕೆಡುಕೆಲ್ಲ ಆಯಿತು. ತನ್ನಿಂದಲೆ ಆಗುವ ಒಳ್ಳಿತು ಇಲ್ಲವೆನ್ನು ವುದು ಹೇಗೆ? ನಾಗೇಶನಿಂದ ಅಪಾಯಬರುವುದೆಂಬ ಶಂಕೆಯಿದೆ; ಅದೀಗ ಸತ್ಯವಾಗಿ ಸಂಭವನೀಯವಾಗಿದೆ. ಅದನ್ನು ಪರಿಹರಿಸುವ ಶಕ್ತಿಯನ್ನು ದೇವರು ತನ್ನಲ್ಲಿ ಇಟ್ಟಿರಲಾರನೆಂದು ಭಾವಿಸುವುದು ಹೇಗೆ?

ನಾನು ಕಸಬರಿಗೆಯಂತೆ ಈ ಮಂದಿರದಲ್ಲಿದ್ದೆ. ಒಳಗಿನ ಕಸವನ್ನು ಜಾಡಿಸುವಾಗ ಹೊರಗಿನ ಕೊಳಕನ್ನು ತಂದೆನೇನೊ? ಇನ್ನು ಹೊರಗೇ ನಿಂತು ಸುತ್ತಲಿನ ಆವರಣಗಳನ್ನು ಜಾಡಿಸಿಬಿಡುತ್ತೇನೆ...ಎಂದು ಶ್ಯಾಮಣ್ಣ ಆ ದಿನ ಹೊರಡುವ ದಿನ ಪ್ರಾತಃಕಾಲ, ಸಂಕಲ್ಪಿಸಿದ.

೨೬

ಅದೇ ದಿನ ಸಾಯಂಕಾಲ ಆರು ಘಂಟೆಯ ಸಮಯಕ್ಕೆ ಶ್ಯಾಮಣ್ಣ ಮನೆಯನ್ನು ಬಿಟ್ಟು ಹೊಟೇಲಿನ ವಾಸವನ್ನು ಸ್ವೀಕರಿಸುವುದೆಂದು ಗೊತ್ತಾಗಿತ್ತು. ಘಂಟೆ ಹೊಡೆಯುವುದಿಲ್ಲವಲ್ಲ—ಎಂದು ಸಾಂತಮ್ಮನ ಚಿಂತೆ. ದಿಬ್ಬಣ ಹೊರಡುವುದೇ? ಮುಹೂರ್ತ ನೋಡಿದ್ದಾರೆಯೋ? ಓಲಗ ಆಗಬೇಕೆ? ಎಂದು ಸಾಂತಮ್ಮ ಕಾಮಾಕ್ಷಿಗೆ ಕೇಳುವಂತೆ ಗೊಣಗುಟ್ಟಿದಳು.

ಆ ದಿನ ಹೊರಡುವುದಕ್ಕೆ ಒಂದು ಘಂಟೆ ಮುಂಚಿತವಾಗಿಯೇ ಕಾಮಾಕ್ಷಿ ಮನೆ ಸೇರಿದ್ದಳು ಪ್ರಭಾಕರನೂ ಹಾಜರಾಗಿದ್ದ. ಶ್ಯಾಮಣ್ಣ ನಂತೂ ತನ್ನದೆನಿಸುವ ವಸ್ತುವೇನಾದರೂ ಇದ್ದಿರಬಹುದಾದರೆ ಅದನ್ನು ತಲೆ ಹೊರೆಯಲ್ಲಿ ಕಚೇರಿಗೆ ಸಾಗಿಸಿ ವೇಳೆಗೆ ಸರಿಯಾಗಿ ಬಂದು ನಿಂತಿದ್ದ. ಘಂಟೆ ಐದುವರೆಯಾಯಿತು; ಮುಕ್ಕಾಲಾಯಿತು; ಆರು ಹೊಡೆಯಿತು.

ಶ್ಯಾಮಣ್ಣನು ಬೆನ್ನು ತಿರುಗಿಸುವ ಶುಭಕಾಲವನ್ನೆ ಕಾಯುತ್ತಿದ್ದ ಸಾಂತಮ್ಮ ಒಳಕೋಣೆಯಿಂದ ಕೈಸಾಲೆಗೆ ಕಾಲಿಟ್ಟಳು. ಶ್ಯಾಮಣ್ಣ ನೇರಾಗಿ ಅವಳ ಬಳಿಗೆ ನಡೆದು ಸಾಷ್ಟಾಂಗ ಅಡ್ಡಬಿದ್ದು "ಹೋಗಿ ಬರುತ್ತೇನೆ ತಾಯಿ ನನ್ನಿಂದ ಅಪರಾಧಗಳೇನಾದರೂ ಆಗಿದ್ದರೆ ಕ್ಷಮಿಸಿ ಬಿಡಮ್ಮ!" ಎಂದು ನಡುಗುವ ನುಡಿಯಲ್ಲಿ ಬೇಡಿಕೊಂಡ.

ಅಪರಾಧವೇನಿದ್ದೀತು? ಒಂದು ವರ್ಷ ತನ್ನ ಬಲಗೈಯಂತಿದ್ದ ಆತನಲ್ಲಿ ಯಾವ ಅಪರಾಧವನ್ನು ಕಂಡಿದ್ದಳು? ಏನೂ ಇಲ್ಲ. ಹೀಗಿದ್ದರೂ ಆಗಬೇಕಾದುದು ಆಗಲೇ ಬೇಕು; ಆತ ಹೋಗಲೇ ಬೇಕು--ಎಂಬ ನಿಷ್ಠುರ ಭಾವವೊಮ್ಮೆ; ಈತ ಹೊರಟು ಹೋದರೆ ತನ್ನ ಕೈಯೇ ಮುರಿದು ಹೋದಂತಾಯಿತು; ಎಂಬ ಮರುಕವೊಮ್ಮೆ. ಅಳದೆ ನಿರ್ವಾಹವಿಲ್ಲದಾಯಿತು. "ನೀನು ಯಾವ ತಪ್ಪನ್ನೂ ಮಾಡಲಿಲ್ಲ ತಮ್ಮ......ನಿನ್ನ ಒಳಗು ಹೊರಗನ್ನೆಲ್ಲ ಬಲ್ಲೆ......ನಿನ್ನಂತಹ ಶುದ್ಧಾತ್ಮರು ಇನ್ನು ಹುಟ್ಟಬೇಕಷ್ಟೆ!" ಎಂದು ಗದ್ಗದ ಕಂಠದಲ್ಲಿ ನುಡಿದಳು.

"ಹಾಗೆ ನೀವು ಭಾವಿಸಿದರೆ ನಾನು ಬದುಕಿದೆ" ಎಂದು ಶ್ಯಾಮಣ್ಣ ನಕ್ಕ. ಅವನ ನಗುವಿನಲ್ಲಿ ಆತ್ಮದ ಯಾತನೆ ಅಂಟಿಕೊಂಡಿತ್ತು ಎಂಬುದು ಸ್ಪಷ್ಟ.

ಅನಂತರ ಹೊರಗೆ ಬಂದು ಮುಖಮಂಟಪದಲ್ಲಿದ್ದ ಆಸನದಲ್ಲಿ ಕುಳಿತ. ದೂರ ದೂರ ನಿಂತಿದ್ದ ಎರಡು ಕುರ್ಚಿಗಳಲ್ಲಿ ಕಾಮಾಕ್ಷಿ-ಪ್ರಭಾಕರರು ಕುಳಿತಿದ್ದರು. ಅವರ ಕುರ್ಚಿಗಳು ಸಹ ದೂರ ದೂರ ನಿಂತಿರುವುದನ್ನು ನೋಡಿ ಶ್ಯಾಮಣ್ಣನ ಎದೆ ಕರಗಿತು.

"ಮತ್ತೇನಣ್ಣ........ಹೋಗಲೇ" ಎಂದು ಶ್ಯಾಮಣ್ಣ ಕೇಳಿದ........

ಪ್ರಭಾಕರ: ಹೌದು; ಹೋಗಬೇಕಾಗಿದೆ.

ಶ್ಯಾಮಣ್ಣ: ಹೋಗಬೇಕಾದುದು ದೊಡ್ಡ ಮಾತಲ್ಲ; ಬಂದೆನಲ್ಲ ಅದೇ ದೊಡ್ಡ ವಿಷಯ....

ಕಾಮಾಕ್ಷಿ: ನೀನು ಬರುವಂತಾದ ಪಾಪ ನನ್ನದು ಶ್ಯಾಮಣ್ಣ....

ಶ್ಯಾಮಣ್ಣ: ಹಾಗೇಕೆ ಹೇಳುವೆ ತಂಗಿ....ನಿಮ್ಮ ಗುಣ ಅಂತಹದು ಅಂದೆ ಒಣಗಿ ಹೋಗಬಹುದಾಗಿದ್ದ ಸಸಿಯನ್ನು ತಂದು ನೆಟ್ಟು ಇಲ್ಲಿ ನೀರೆರೆದಿರಿ....

ಪ್ರಭಾಕರ: ನಾವು ನಿಸ್ವಾರ್ಥ ಭಾವದಿಂದ ಮಾಡಿದೆವೆ ಶ್ಯಾಮು?

ಶ್ಯಾಮಣ್ಣ: ಸ್ವಾರ್ಥವೇನಿದ್ದೀತು? ನಿಮ್ಮ ಕೆಲಸ ಮಾಡುವುದಕ್ಕೆ ಶ್ಯಾಮಣ್ಣನಲ್ಲದಿದ್ದರೆ ಭೀಮಣ್ಣ ಬರುತ್ತಿದ್ದ....

ಪ್ರಭಾಕರ: ನಿನ್ನಂತಹ ಶಕ್ತಿವಂತರು....

ಶ್ಯಾಮಣ್ಣ: ಏನು ಶಕ್ತಿಯೋ ನಾನರಿಯೆ. ಇಷ್ಟು ವರ್ಷಗಳ ವರೆಗೆ ಬೀದಿ ಬೀದಿಗಳಲ್ಲಿ ಅಲೆದಾಡಿದೆ. ಸಿಕ್ಕಿದ ಸರಕುಗಳನ್ನು ಸಂಚಿಯಲ್ಲಿ ತುಂಬಿಸಿಕೊಂಡೆ. ಅದನ್ನು ನಿಮ್ಮ ಮುಂದೆ ವ್ಯಾಪಾರಕ್ಕೆ ಇಟ್ಟೆ....

ಪ್ರಭಾಕರ: ಇನ್ನೆಷ್ಟು ಮುಂದಿಯಲ್ಲಿ ಬೆಲೆಗಾದರೂ ಇಂತಹ ವಸ್ತುಗಳು ದೊರೆತಾವು?

ಶ್ಯಾಮಣ್ಣ: ಏನೋ ನನ್ನ ಸೇವೆಯನ್ನು ನೀವು ಕೈಕೊಂಡಿರಿ; ಮೆಚ್ಚಿದಿರಿ; ದೈವಾನುಗ್ರಹವಿದ್ದರೆ, ಇದುವರೆಗಿನ ಶ್ಯಾಮಣ್ಣನೇ ಆಗಿದ್ದು ಮುಂದೆಯೂ ಸಾಧ್ಯವಾದ ಸೇವೆಯನ್ನು ಮಾಡಲಾರೆನೆ?

ಪ್ರಭಾಕರ: ದೈವ—ದೈವಾನುಗ್ರಹ....ಇವುಗಳಲ್ಲಿ ನಿಜವಾಗಿಯೂ ನಿನಗೆ ವಿಶ್ವಾಸವುಂಟೆ ಶ್ಯಾಮು....

ಶ್ಯಾಮಣ್ಣ: ಇದೆ....

ಪ್ರಭಾಕರ: ಖಂಡಿತವಾಗಿ?

ಶ್ಯಾಮಣ್ಣ: ಸಂದೇಹವಿಲ್ಲ.

ಪ್ರಭಾಕರ: ಹಾಗಿದ್ದರೆ, ಇದುವರೆಗೆ ಬಾಹ್ಯಾಡಂಬರದಿಂದಲ್ಲ ವಾದರೂ ಹೃದಯದ ಮೌನದಿಂದ ದೈವವನ್ನು ನಂಬಿಕೊಂಡಿದ್ದ ನಮ್ಮ ಗತಿ ಹೇಗೇಕೆ ಆಗಬೇಕು ಶ್ಯಾಮು?

ಶ್ಯಾಮಣ್ಣ: ನಿಮಗೆ ಏನಾಗಿದೆ ಪ್ರಭಾಕರರಾಯರೆ....ಹಿಂದಿನಲ್ಲಿ ದೈವವು ನಿಂತು ಬೆನ್ನು ಚಿವುಟಿತು; ಎಚ್ಚರಕೊಟ್ಟಿತು....

ಪ್ರಭಾಕರ: ಎಂತಹ ಎಚ್ಚರ....

ಶ್ಯಾಮಣ್ಣ: ಲೌಕಿಕಾಚಾರ ಎಂಬುದೊಂದು ಬೇರೆ ಇದೆಯೆಂದು.

ಪ್ರಭಾಕರ: ಲೋಕಕ್ಕೂ ಆಚಾರಕ್ಕೂ ಬೆಂಕಿಹಾಕು ಶಾಮಣ್ಣಾ.... ಈ ಹುಚ್ಚುಲೋಕದ ಅನುಸರಣೆಯನ್ನು ಕಲಿಸುವ ದೇವರು, ದೇವರಲ್ಲ ಶ್ಯಾಮು....

ಶ್ಯಾಮಣ್ಣ: ಹಾಗೆನ್ನಬೇಡಿರಿ ರಾಯರೆ...ದೇವರು ಇದ್ದಾರೆ ಎಂದು ಭಾವಿಸುವವರಿಗೆ ಇದ್ದಾನೆ; ಇಲ್ಲವೆನ್ನುವವರಿಗೆ ಹೇಗಿದ್ದಾನು?

ಪ್ರಭಾಕರ: ಇತರರ ಮಾತನ್ನು ಬಿಟ್ಟುಬಿಡು. ನಿನ್ನ ಮಟ್ಟಿಗೆ ದೇವರು ಇದ್ದಾನಲ್ಲವೆ?

ಶ್ಯಾಮಣ್ಣ: ಇದ್ದಾನೆ.

ಪ್ರಭಾಕರ: ನಾಗೇಶನಿಗೂ ದೇವರು!

ಶ್ಯಾಮಣ್ಣ: ಸಂದೇಹವೇನು?

ಪ್ರಭಾಕರ: ಭಾಮೆಗೆ?

ಶ್ಯಾಮಣ್ಣ: ಅವಳಿಗೂ....

ಪ್ರಭಾಕರ: ಕಾಮಾಕ್ಷಿಗೂ ನಮಗೂ ದೇವರು ಇರಲೆ ಬೇಕಲ್ಲವೆ?

ಶ್ಯಾಮಣ್ಣ : ಸಂದೇಹವೇನು ?

ಪ್ರಭಾಕರ : ಸಾಂತಮ್ಮ—ನಮ್ಮ ಚಿಕ್ಕಮ್ಮನವರಿಗೆ ?

ಶ್ಯಾಮಣ್ಣ : ಅವರ ಚಿಕ್ಕ ಹೃದಯ ಮಂದಿರದಲ್ಲಿ ಚಿಕ್ಕ ದೇವರ ಮೂರ್ತಿಯಿದೆ....

ಪ್ರಭಾಕರ : ಇಷ್ಟು ಹೃದಯಗಳಲ್ಲಿಯೂ ದೇವರು ವಾಸವಾಗಿದ್ದು ಹೀಗೆಲ್ಲ ಏಕಾಗಬೇಕು ಶ್ಯಾಮು....ಉತ್ತರ ಕೊಡು ನೋಡೋಣ....ಎನ್ನುವಾಗ ಪ್ರಭಾಕರನು ಗೊಳ್ಳನೆ ಅತ್ತ. ಕಾಮಾಕ್ಷಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು....ಶ್ಯಾಮಣ್ಣನೂ ದಂಗುಬಡಿದವನಂತೆ ನಿಂತುನೋಡುತ್ತಿದ್ದ....

ಶ್ಯಾಮಣ್ಣ : ಪ್ರಭಾಕರರಾಯರೆ ... ಹೀಗೆಲ್ಲ ಆಡುತ್ತಾ ಕುಳಿತರೆ ಸಮಯ ಹರಣವಾಗುತ್ತದೆ. ಅಣ್ಣಾ! ಹೋಗಿಬರುತ್ತೇನೆ; ತಂಗೀ! ಹೋಗಿ ಬರುತ್ತೇನೆ. ನಿಮ್ಮ ನಿಮ್ಮ ದೇವರನ್ನು ಹುಡುಕುವುದಕ್ಕೆ ನೀವು ಪ್ರಯತ್ನಿಸಿರಿ. ನನ್ನ ದೇವರು ಈ ಪೀಠದಲ್ಲಿಯೇ ಕುಳಿತಿದ್ದಾನೆ. ಇಂದು ಹಿಂದೆ ನಿಂತು ಎಚ್ಚರಕೊಡುವ ದೇವರು ಮುಂದೆ ಪ್ರಬಲಶಕ್ತಿ ಸ್ವರೂಪವನ್ನು ಹೊಂದಿ ನಿಮಗೆ ದರ್ಶನಕೊಡುತ್ತಾನೆ. ನೋಡಿ....ಎನ್ನುವಾಗ ಶ್ಯಾಮಣ್ಣ ಓಡು ಕಚ್ಚಿದ; ಇಬ್ಬರ ದೃಷ್ಟಿಗೂ ಅದು ಬೀಳದಿರಲಿಲ್ಲ.

ಪ್ರಭಾಕರ : ಆಯಿತು ಶ್ಯಾಮು ಹೋಗು....ಹೋದರೆ ಎಷ್ಟು ದೂರ ಹೋಗುವೆ ? ಹೊಟೇಲಿಗೆ ತಾನೆ....ಹೃದಯ ಸಮೀಪದಲ್ಲಿಯೇ ಇದ್ದು ದೇಹ ಎಷ್ಟು ದೂರಕ್ಕೆ ಹೋದರೇನು ? ಕಚೇರಿಯಲ್ಲಿ ಕಾಣುವುದಿರಬಹುದಲ್ಲವೆ ?

ಶ್ಯಾಮಣ್ಣ : 'ಬಹುದು' ಎಂದರೇನು ? ಖಂಡಿತ !

ಪ್ರಭಾಕರ : ನಿನ್ನ ಪ್ರತಿಭೆಯ ಫಲವನ್ನು ನಮಗೆ ಹಂಚಿಕೊಡುತ್ತೀಯಲ್ಲ.

ಶ್ಯಾಮಣ್ಣ : ಯಾರ ಪ್ರತಿಭೆಯೊ ಯಾವ ಫಲವೊ ಯಾರು ಬಲ್ಲರು ?

ಪ್ರಭಾಕರ : ನಾಗೇಶನಿಗೆ ಎಲ್ಲರ ಶಕ್ತಿಯೂ ಎಷ್ಟೆಂದು ತಿಳಿದಿದೆ. ಫಲಭೋಕ್ತೃಗಳು ಯಾರೆಂದೂ ತಿಳಿದಿದೆ. ಪ್ರತಿಯೊಬ್ಬರ ಯೋಗ್ಯತೆ

ಯನ್ನು ತಕ್ಕಡಿಯಲ್ಲಿಟ್ಟು ತೂಗಿ ನೋಡುವ ಶಕ್ತಿಯಿದೆ ಶ್ಯಾಮೂ–ನಮ್ಮಲ್ಲಿ ಅದೇನಿದೆ ಹೇಳು!"

ಶ್ಯಾಮಣ್ಣನು "ಅಂತಹ ಮಾತನ್ನು ಹೇಳಬೇಡಿರಿ" ಎಂದು ಬೇಡಿಕೊಂಡು ಅಂಗಳಕ್ಕೆ ಕಾಲಿಟ್ಟನು. ಗಂಡಹೆಂಡಿರಿಬ್ಬರೂ ಒಟ್ಟಾಗಿ ಅವನನ್ನು ಹಿತ್ತಿಲ ತುದಿಯ ವರೆಗೆ ಕಳುಹಿಸಿಕೊಟ್ಟು ಮೌನದಲ್ಲಿಯೇ ಹಿಂದೆ ಬಂದರು. ಹಿಂದೆ–ಒಂದು ವರ್ಷಗಳ ಹಿಂದೆ, ಅತ್ಯುತ್ಸಾಹದಿಂದ ಇಬ್ಬರೂ ಒಂದಾಗಿ ಕರೆತಂದಿದ್ದರು. ಇಂದು ಇಬ್ಬರೂ ಒಂದಾಗಿ ಅತಿ ವಿಷಾದದಿಂದ ಕಳುಹಿಕೊಟ್ಟರು. "ಬಹುಶಃ ಕಾಮಿಗೂ ನನಗೂ ಇದೊಂದೇ ಸಮಾನ ಗುಣ....ಅಂದಿನ ಉತ್ಸಾಹ....ಇಂದಿನ ವಿಷಾದ!" ಎಂದು ಪ್ರಭಾಕರನು ಆತ್ಮಗತದಲ್ಲಿ ಆಡಿದ್ದಿರಬೇಕು. ಬಹಿರಂಗವಾಗಿ ಯಾರೂ ಮಾತಾಡಿರಲಿಲ್ಲ.

೨೭

"ಶಸ್ತ್ರ ಸಾಮಗ್ರಿ ಸಿದ್ಧವಾಗಿದೆ; ಕೋಟೆ ಕೊತ್ತಳಗಳು ಸುರಕ್ಷಿತವಾಗಿವೆ. ರಕ್ಷಣೆಗೆ ಬೇಕಾದಷ್ಟು ಸೇನಾ ಸಂಪತ್ತಿಯಿದೆ; ಅಪಾಯವಿಲ್ಲ" ಎಂದು ದೇಶ ಸಂರಕ್ಷಕರು ಡಂಗುರ ಸಾರುವ ಮಾತಿನಂತೆ ಸುಶೀಲಮ್ಮ ಬಂದು ಸೇರಿದ ಮೇಲೆ ಪ್ರಭಾಕರನ ಗೃಹರಾಜ್ಯಭಾರವು ಭದ್ರತೆಯ ಪರಮಾವಧಿಯ ಸುಖವನ್ನು ಕಂಡಿತು. ಸುಶೀಲಮ್ಮನ ಜೊತೆಯಲ್ಲಿ ಆಕೆಯ ಎರಡು ಮರಿಗಳು ಬಂದಿದ್ದುವು. ಅವುಗಳ ಲಾಲನಾರ್ಥವಾಗಿ ತಿಮ್ಮ; ಅಡಿಗೆಗೆ ಮಾದಪ್ಪ. ಕೇಶವಯ್ಯನು ಒಂದೆರಡು ದಿನ ಇದ್ದು ಕ್ಷೇಮ ಸಮಾಚಾರಗಳನ್ನು ವಿಚಾರಿಸಿ ಹೋಗುತ್ತಿದ್ದ. ನಗರದ ಸುಪ್ರಸಿದ್ಧ ವೈದ್ಯರಿಂದ ಸುಶೀಲಮ್ಮನಿಗೆ ಚಿಕಿತ್ಸೋಪಚಾರ ನಡೆಯುವ ಏರ್ಪಾಡಾಗಿತ್ತು. ನಾಗೇಶನ ಸಹಕಾರ ಇಲ್ಲದಿರಲಿಲ್ಲ. ಅಥವಾ ಅದಿಲ್ಲದೆ ಯಾವುದೂ ನಡೆಯಲೊಲ್ಲದು. ಯಾರನ್ನು ಬರಿಸಬೇಕಾದರೂ ನಾಗೇಶನ ಸೂತ್ರಧಾರತ್ವವಿಲ್ಲದೆ ಸಾಗುತ್ತಿರಲಿಲ್ಲ. ಇದುವರೆಗೆ ಬರಬೇಕೆ? ಬೇಡವೆ? ಎಂಬ ಹೃದಯ ಸಂಕೋಚದಿಂದ ಬರುತ್ತಿದ್ದ ವ್ಯಕ್ತಿ ಇಂದು ಸ್ವಾಭಾವಿಕ

ವಾಗಿ, ಕಿಟಕಿಯೊಳಗಿನಿಂದ ಬರುವ ಗಾಳಿಯಂತೆ, ಬೆಳಕಿನಂತೆ, ನುಗ್ಗಿ ಬರುತ್ತಿದ್ದ.

ಪ್ರಭಾಕರನ ಹಣದ ಅಡಚಣೆಯ ಪ್ರಸ್ತಾಪವನ್ನು ಕೇಶವಯ್ಯ ಪತ್ರದಲ್ಲಿ ಕಾಣಿಸಿದನಷ್ಟೆ. ಈ ಕುರಿತು ಕಾಮಾಕ್ಷಿಯಾಗಲಿ, ಪ್ರಭಾಕರ ನಾಗಲಿ ಒಂದೇ ಒಂದು ಒಣಮಾತನ್ನಾದರೂ ಆಡದ ಕಾರಣ ಅದನ್ನಲ್ಲಿಯೇ ಬಿಡಬೇಕಾಯಿತು. ತಾನೇ ಮಾತನ್ನು ಎತ್ತಿದಲ್ಲಿ ಕಾಮಾಕ್ಷಿಯೇನು ಭಾವಿಸುವಳೊ ಪ್ರಭಾಕರನು ಏನೆಣಿಸುವನೋ ಎಂಬ ಭೀತಿ ಕೇಶವಯ್ಯ ನಿಗೆ. ನಾಗೇಶನು ಈ ಕಷ್ಟವನ್ನು ಪರಿಹರಿಸಿದ. "ಮಾವಯ್ಯ! ಪತ್ರಿಕಾ ಸಂಸ್ಥೆಯೆಂದರೆ ಒಂದು ವ್ಯಾಪಾರ ಸಂಸ್ಥೆ. ಅದಕ್ಕೆ ದಾನಧರ್ಮ ಮಾಡ ಬೇಕಾದ ಪ್ರಸಂಗವಿಲ್ಲ. ವಿನಿಯೋಗಿಸುವ ಹಣ ಬಡ್ಡಿ ಲಾಭಗಳನ್ನು ತಾರದಿದ್ದರೆ ವ್ಯಾಪಾರವೆನ್ನುತ್ತೀವೆಯೆ? ನೀವು ಇನ್ನು ಹತ್ತುಸಾವಿರವನ್ನು ಕೊಟ್ಟಿರೆಂದು ಭಾವಿಸೋಣ. ಅದು ಯಾರ ಬಾಯಿಗೆ ಬಿದ್ದೀತು? ಯೋಚಿಸಿರಿ. ಪ್ರಭಾಕರನಿಗಲ್ಲ—ಕಾಮಿಗಲ್ಲ—ಕಾಗದ ವ್ಯಾಪಾರಿಗೆ—ಬೇಂಕಿಗೆ—ಸಾಹುಕಾರ ಜನ್ನಸ್ಟೆಗೆ....ಅವರ ಹೊಟ್ಟೆತುಂಬಿಸುವುದಕ್ಕಾಗಿ ನಿಮ್ಮ ವಿನಿಯೋಗವೆ? ಹಣ ಪೆಟ್ಟಿಗೆಯೊಳಗೆ ಭದ್ರವಾಗಿರಲಿ. ಪ್ರಭಾಕರ ಕಾಮಿಯರ ಪತ್ರಿಕಾ ವ್ಯವಹಾರವು ಯಾವ ನೆಲೆಯಲ್ಲಿದೆ ಎಂದು ತಿಳಿ ಯೋಣ. ಸಾಲದ ಕೆಸರು ಹೊಂಡದಿಂದ ಮೇಲಕ್ಕೆತ್ತಿ ಇನ್ನಾದರೂ ಲಾಭದಾಯಕ ರೀತಿಯಲ್ಲಿ ಕಾರಭಾರಮಾಡುವುದು ಇವರಿಗೆ ಸಾಧ್ಯವೇ ನೋಡೋಣ. ಇಷ್ಟನ್ನು ವಿಚಾರಿಸದೆ ಹಣವನ್ನು ಹಾಕಿದರೆ ಪರೋಪಕಾರ ವಾದೀತು; ಕಾಮಿಗೆ ಕಾಸಿನ ಲಾಭವಿರದು" ನಾಗೇಶನ ಈ ಬೋಧನೆ ಕೇಶವಯ್ಯನಿಗೆ ಹೌದು ಎಂದು ತೋರಿತು.

ಮಾತ್ರವಲ್ಲ; ಕಾಮಿಗೆ ಯಾರ ಹೇತುವಿನಿಂದ ಅಪವಾದ ಬರು ವಂತಾಯಿತೋ ಅದೀಗ ನಿವಾರಿಸಲ್ಪಟ್ಟಿದೆ. ಆಕೆಯ ನಡತೆಯ ವಿಷಯ ದಲ್ಲಿ ಕೇಶವಯ್ಯನಿಗೆ ಸಂದೇಹವಿಲ್ಲ; ಸಾಂತಮ್ಮನಿಗೆ ಇಲ್ಲ; ತನ್ನ ಮನೆ ತನದಿಂದ ಕೊಟ್ಟ ಹುಡುಗಿ ಅಂಥ ಕೆಲಸಮಾಡಲಾರಳೆಂಬುದರಲ್ಲಿ ಸುಶೀ-ಲಮ್ಮನಿಗಂತೂ ಸಂದೇಹವೇ ಇಲ್ಲ. ಕಾಮಿಯ ಅವಿಚಾರವೆಂದರೆ ಅವ

ಳಿಗೆ ಕೊಡಿಸಿದ ವಿದ್ಯೆಯ ಫಲ. ಸಹಶಿಕ್ಷಣವುಳ್ಳ ಕಾಲೇಜಿಗೆ ಕಳುಹಿಸಿದುದರ ಫಲ. ಔಚಿತ್ಯವೇನೆಂದು ತಿಳಿಯದ ಹಾಗೆ, ಈ ವಿದ್ಯೆಯು ಅವಳ ದೃಷ್ಟಿಯನ್ನು ಕುರುಡಮಾಡಿ ಬಿಟ್ಟಿದೆ....ಇಂಗ್ಲಂಡಿನ ನಾರಿಯರು ಎಂತಹ ಸ್ವತಂತ್ರ ವಾತಾವರಣದಲ್ಲಿ ಹುಟ್ಟಿ ಬೆಳೆದು ವ್ಯವಹರಿಸುತ್ತಾರೋ ಹಾಗೆ, ಹುಟ್ಟದೆ ಬೆಳೆಯದೆ ಬರಿಯ ವ್ಯವಹಾರದಲ್ಲಿ ಸ್ವಾತಂತ್ರ್ಯವನ್ನು ಗಳಿಸಬೇಕೆಂಬ ಅವಿಚಾರವನ್ನು ಇಂಗ್ಲಿಷ್ ಪುಸ್ತಕಗಳು ಇವಳ ತಲೆಯಲ್ಲಿ ತುಂಬಿಸಿಬಿಟ್ಟಿವೆ. ವಿಚಾರವು ಬಲ ಪ್ರಯೋಗದಿಂದ ಬರಲಾಗುವುದಿಲ್ಲ. ಅನುಭವದಿಂದ ಬರಬೇಕು; ಬರಲಿ; ಅದಕ್ಕೆ ಕಾಲಾವಕಾಶವನ್ನು ಕೊಡೋಣ. ಸದ್ಯಕ್ಕೆ ಪರರು ನಿಂದಿಸದಂತಾಗಬೇಕು; ಹಾಗಾಗುವುದು. ಕಾಮಿ ಹೆರುವ ವರೆಗೆ, ಬಾಣಂತನ ಮುಗಿಯುವ ವರೆಗೆ, ಸುಶೀಲಮ್ಮ ಇಲ್ಲಿಯೇ ಇರುತ್ತಾಳೆ. ಮತ್ತೊಂದು ಮಗುವಾಗುವುದು; ಆ ಮೇಲೆ ಮನೆಬಿಟ್ಟು ತಿರುಗಲಾಗುವುದೆ? ಆದುದರಿಂದ ಸಿಂಡ ಮರ್ದನಮಾಡದೆ, ತಣ್ಣಗೆ ಕುಳಿತು ಕಾಮಾಕ್ಷಿಯನ್ನು ಸರಿಯಾದ ಆಚಾರಕ್ರಮದ ಕಡೆಗೆ ತಿರುಗಿಸಬಹುದೆಂದು ಕೇಶವಯ್ಯನಿಗೆ ಹೊಳೆಯಿತು.

ಸಾಂತಮ್ಮನಿಗೆ ಸಹಿಸಲಾರದ ಆನಂದ. ಸುಶೀಲೆ ಬಂದ ಮರುದಿನವೇ ಸಾಂತಮ್ಮ ಕಾಮಾಕ್ಷಿಗೆ ಪಾದರಿಪಾಠವನ್ನು ಕೊಡುವುದಕ್ಕೆ ತೊಡಗಿದಳು. "ನೋಡು ಕಾಮಿ, ಸುಮಂಗಲೆಯರು ಹಣೆಯಲ್ಲಿ ಹೇಗೆ ಬೊಟ್ಟಿಡಬೇಕೆಂಬುದನ್ನು ನಿನ್ನ ಚಿಕ್ಕಮ್ಮನಿಂದ ನೋಡಿ ಕಲಿತುಕೊ...." ಎಂದು ಬೋಧಿಸಿದಳು. "ಹಣೆ ತುಂಬ ಹರಡಿದ ಈ ಕುಂಕುಮ ತಿಲಕವನ್ನು ಕಂಡರೆ ಹೊಟ್ಟೆ ತುಂಬುತ್ತದೆ" ಎಂದಳು.

ಸುಶೀಲಮ್ಮ ತನ್ನ ಮಗಳ ಮನೆ ತನ್ನದೇ ಎಂಬ ಅಧಿಕಾರವನ್ನು ತೋರಿಸಿದಳು. ಮಾಳಿಗೆಯ ಮೇಲಿದ್ದ ಕುರ್ಚಿ-ಮೇಜುಗಳನ್ನು ಕೆಳಗೆ ದೂಡಿದಳು; ಕಪಾಟುಗಳನ್ನು ಬದಿಗೆ ತೆಗೆದಿಡಿಸಿದಳು. ಮಂಚಗಳನ್ನು ವರ್ಗಾಯಿಸಿದಳು. ತನ್ನ ಡೇರೆಯನ್ನು ಅಲ್ಲಿ ಹೊಡೆದಳು. ಕಾಮೀ.... ನಾನೂ ನೀನೂ ರಾತ್ರಿಯಲ್ಲಿ ಇಲ್ಲಿಯೇ ಮಲಗೋಣ....ಎಂದು ಆಜ್ಞೆ ಹೊರಡಿಸಿದಳು. ಅನುಲ್ಲಂಘನೀಯವಾದ ರಾಯಸ!

ಕಾಮಿ ಎಲ್ಲವನ್ನೂ ಸಹಿಸಿದಳು. ಮೂಢ ಪ್ರಾಣಿಗಳು! ಏನನ್ನೋ ಭಾವಿಸಿ ಹೇಗೆ ಹೇಗೋ ಮಾಡುತ್ತಿವೆ....ಎಂದು ಒಂದು ಬಗೆಯ ತಾಳ್ಮೆಯನ್ನು ವಹಿಸಿದಳು. ತಿಳಿದವರು....ಎಲ್ಲವನ್ನೂ ತಿಳಿದವರು....ವಿಚಾರಿಗಳು....ಸುಶಿಕ್ಷಿತರು....ಉಪದೇಶ ಮಾಡುವ ಬುದ್ಧಿವಂತರು....ಲೇಖನ ಮೂಲಕ ಮೂಢ ಪ್ರಾಣಿಗಳನ್ನು ಎಚ್ಚರಿಸುವವರು....ಅಪಾರ್ಥ ಕಲ್ಪಿಸಿಕೊಂಡು ಏನೇನೋ ಮಾಡುತ್ತಾರೆ ಎಂದು ಹೇಳಿದ ಮೇಲೆ, ಹಸಿಯ ಹಳ್ಳಿಯ ಹೆಂಗುಸು ಹೀಗೆಲ್ಲ ಮಾಡಿದರೆ ತಪ್ಪೇನು? ಯೋಚಿಸಿದಾಗ ಕಾಮಿಯ ಕೆನ್ನೆ ಕೆಂಪೇರಿತು.

ಪ್ರಭಾಕರನು ಅಲಿಪ್ತನಾಗಿಯೇ ಇದ್ದ. ಶ್ಯಾಮಣ್ಣಾ ಹೊರನಡೆದ; ಸುಶೀಲಮ್ಮ ಒಳಗೆ ಬಂದಿದ್ದಾಳೆ; ಹೆಚ್ಚುಕಡಿಮೆಯೇನಿದೆ? ಮಾಳಿಗೆಯಲ್ಲಿ ಮಲಗಿದರೂ ಸುಖನಿದ್ರೆ; ಹೊರಚಾವಡಿಯಲ್ಲಿ ಬಿದ್ದರೂ ಅದೆ. ಕಾಮಾಕ್ಷಿಯ ಚಿತ್ತವೃತ್ತಿ ಕವಲಾಗಿ ಒಡೆದುಹೋಗಿದೆ ಎಂದ ಮೇಲೆ ಈ ಮನೆಯೊಳಗೆ ಯ್ಯಾರಿದ್ದರೇನು ಇಲ್ಲದಿದ್ದರೇನು?

ಸಂಗ್ರಾಮ ಪತ್ರಿಕೆಯು ಶಾಶ್ವತವಾಗಿ ನಡೆಯಬೇಕೆಂಬ ವಿಷಯದಲ್ಲಿ ಅವನಿಗೆ ಭಿನ್ನಭಾವವೇ ಇಲ್ಲ. ಇದುವರೆಗಿನ ಅದರ ಅಲ್ಪ ಯಶಸ್ಸಿಗೆ ಶ್ಯಾಮಣ್ಣಾ ಕಾರಣೀ ಭೂತ. ಕಾಮಾಕ್ಷಿ ಕಾರಣೀ ಭೂತಳು. ಕಾರಣಗಳನ್ನು ಹುಡುಕಿದಲ್ಲಿ ತನ್ನ ಸಂಪಾದಕತ್ವವು ನಿರರ್ಥಕವಾಗಿಯೇ ತೋರುತ್ತಿದೆ. ಆದರೆ ಆ ನಾಲ್ಕು ಅಕ್ಷರದ ಹೆಸರು 'ಸಂಪಾದಕ'ನೆಂಬ ನಿರ್ದೇಶದ ಮುಂದೆ ಜೋಡಿಕೊಂಡಿದ್ದುದರಿಂದ ಇದುವರೆಗೆ ಕೆಡುಕಾಗಿರಲಿಲ್ಲ. ಮುಂದೆಯೂ ಕೆಡುಕಾಗದಿದ್ದರೆ ಹಾಗೆಯೇ ಇರಬಹುದು. ಅಥವಾ ಅನವಶ್ಯವೆಂದರೆ ತೆಗೆದುಬಿಡುವುದು ಸುಲಭ. ಮೊಳೆಜೋಡಿಸುವವನ ಕಿವಿಯಲ್ಲಿ ಹೇಳಿದರಾಯಿತು. ತನ್ನ ಮತ್ತು ಸಂಗ್ರಾಮದ ಸಂಬಂಧವನ್ನು ನಿರ್ಣಯಿಸುವುದಕ್ಕೆ ಆತನಿಗೆ ಯಾವ ಕಷ್ಟವೂ ಆಗಲಿಲ್ಲ.

ಇನ್ನು ನಾಗೇಶರಾಯನ ಯೋಜನೆ. ಆತನು ಪಾಪಿಯಾಗಲಿ, ಪುಣ್ಯಾತ್ಮನಾಗಲಿ; ಕೊಡುವ ಹಣಕ್ಕೆ ಪಾಪಪುಣ್ಯಗಳು ಅಂಟಿಕೊಳ್ಳು

ವುದಿಲ್ಲ. ಪಾಲುಗಳನ್ನು ಸಂಗ್ರಹಿಸಲಿ; ಸುವ್ಯವಸ್ಥೆಯನ್ನು ತರಲಿ; ಆರ್ಥಿಕ ರೀತಿಯಲ್ಲಿಯೂ 'ಸಂಗ್ರಾಮ'ವು ಯಶಸ್ವಿಯಾಗಲಿ! ಬೇಡವೆನ್ನುವುದೇಕೆ?

ಕಾಮಾಕ್ಷಿಯು ಮಾತ್ರ ಈ ಏರ್ಪಾಡಿಗೆ ಒಪ್ಪಲಿಲ್ಲ. ಸಂಗ್ರಾಮವು ಸ್ವತಂತ್ರವಾಗಿಯೇ ಹುಟ್ಟಿದುದು; ಸ್ವತಂತ್ರವಾಗಿಯೇ ಇದುವರೆಗೆ ಬಾಳಿದುದು. ಇನ್ನು ಸಾಯುವುದಿದ್ದರೂ ಸ್ವತಂತ್ರವಾಗಿ ಸಾಯಲಿ! ಎಂದು ಹಟತೊಟ್ಟಳು.

"ಇದೇನು ಕಾಮಿ! ಕೆಲವೇ ತಿಂಗಳ ಹಿಂದೆ ಈ ವ್ಯವಸ್ಥೆಗೆ ಒಪ್ಪಿದಂತೆ ನಟಿಸಿದ್ದ ನೀನು ಈಗ ಮುಷ್ಕರಹಿಡಿದಿರುವೆಯಲ್ಲ"? ಎಂದು ಪ್ರಭಾಕರನು ಪ್ರಶ್ನಿಸಬೇಕಾಯಿತು.

"ಹೌದು; ಮುಷ್ಕರವೇ ಇದು!" ಎಂದು ಹಟಮಾರಿಯಾಗಿ ಕಾಮಾಕ್ಷಿ ಉತ್ತರಕೊಟ್ಟಳು.

"ನಾಗೇಶನೆಂದರೆ ಉರಿದು ಬೀಳುತ್ತೀಯಲ್ಲ? ಅಂತಹ ತಪ್ಪನ್ನು ಅವನೇನು ಮಾಡಿದ್ದಾನೆ? ಒಂದು ವೇಳೆ ಮಾಡಿದ್ದರೂ ನಿನ್ನ ಪ್ರತಿಕ್ರಿಯೆಯಿಂದ ಅದು ಅಪರಿಣಾಮಿಯಾಯಿತಲ್ಲವೆ? ಮುಂದೆಯೂ ಆಗುವುದಲ್ಲವೇ? ಅಂತಹ ಎದೆ ಧೈರ್ಯ ನಿನಗಿಲ್ಲವೆ? ನಮ್ಮ ನಿರೀಕ್ಷಣೆಗೆ ಸರಿಯಾಗಿ ಸೂರ್ಯಚಂದ್ರರು ತಿರುಗಾಡುತ್ತಿದ್ದರೆ ಮಾತ್ರ ಈ ಪ್ರಪಂಚದೊಡನೆ ಕೂಡಿ ಬಾಳುತ್ತೇನೆ—ಎಂಬ ಒಪ್ಪಂದದಿಂದ ಮಾನವರು ಬದುಕುತ್ತಾರೊ?"

ಪ್ರಭಾಕರನ ಈ ಪ್ರಶ್ನೆ ಸ್ವಚ್ಛವಾದುದು; ಸರಳವಾದುದು. ಆದರೆ ಕಾಮಿಗೆ ಪ್ರತಿಯೊಂದು ಅಕ್ಷರದಲ್ಲಿಯೂ ನಂಜು—ಮಹಾ ಮತ್ಸರದ ಕಾಲಕೂಟವು, ಸುರಿಯುತ್ತಿದ್ದಂತೆ ಭಾಸವಾಯಿತು!

## ೨೮

ಶ್ಯಾಮಣ್ಣನನ್ನು ಪ್ರಭಾಕರನ ಮನೆಯಿಂದ ಹೊರಗೆ ಹಾಕಿದ ಮೇಲೆ ನಾಗೇಶನಿಗೆ ಅವನಲ್ಲಿರುವ ಅಕ್ಕರೆ ಹೆಚ್ಚುತ್ತಾ ಬಂತು. ಆತನು ಒಂದೇ ಒಂದು ದಿನ ಹೊಟೇಲಿನ ಅನ್ನವನ್ನು ತಿಂದುದಿರಬಹುದು. ನಾಗೇಶ

ಅವನನ್ನು ತನ್ನ ಚಿಕಿತ್ಸಾ ಮಂದಿರಕ್ಕೆ ಬರಮಾಡಿದ. "ಶ್ಯಾಮಣ್ಣ! ಇಳಿದು ಹೋಗಿರುವೆಯಲ್ಲ....ನಿನಗೇನೋ ಆಗುತ್ತಿದೆ...."ಎಂದು ಮುಖಲಕ್ಷಣ ವನ್ನು ಓದಿಹೇಳಿದ.

ನಾಗೇಶ: "ನಿನಗೆ ವಯಸ್ಸೆಷ್ಟು ಶ್ಯಾಮಣ್ಣ...."

ಶ್ಯಾಮಣ್ಣ: 'ನಲವತ್ತೈದು....'

ನಾಗೇಶ: 'ಆ ವಯಸ್ಸು ಮುಖದಲ್ಲಿ ಕಾಣುತ್ತಿರಲಿಲ್ಲ. ಮೂವತ್ತು ವರ್ಷದ ಯೌವನಸ್ಥನಂತಿದ್ದೆ....ಈಗ ಮಾತ್ರ ವರ್ಷ ಇಪ್ಪತ್ತು ಹೆಚ್ಚಾದಂತೆ ತೋರುತ್ತದೆ....'

ಶ್ಯಾಮಣ್ಣ: ಹೆಚ್ಚೋ ಕಡಿಮೆಯೊ....ವಯಸ್ಸು ನಾಯಿಗೂ ಆಗು ತ್ತದಲ್ಲವೆ?

ನಾಗೇಶ: 'ಹಾಗೆಲ್ಲ ಹೇಳಬೇಕೆ ಶ್ಯಾಮು........ನಿನ್ನ ಜೀವನವು ಅಮೂಲ್ಯ.....'ಸಂಗ್ರಾಮ'ಕ್ಕೆ ಅಮೂಲ್ಯ......ಪ್ರಭಾಕರನಿಗೆ ಅಮೂಲ್ಯ..... ಕಾಮಾಕ್ಷಿಗೂ ಅಮೂಲ್ಯ....'

ಕೊನೆಯ ಶಬ್ದಗಳು ಆತನಿಗೆ ರುಚಿಸಲಿಲ್ಲ. ಕುಕ್ಕಿ ಮಾತಾಡು ತ್ತಿದ್ದಾನೆ. ಆದರೆ ಕುಕ್ಕುವುದಕ್ಕೇನಿದೆ? ತಂದೆಯ ಯೋಗಕ್ಷೇಮಗಳು ಮಗಳಿಗೆ ಬೇಕಾಗಿದ್ದರೆ ತಪ್ಪೇನು? ಹೃದಯವನ್ನು ಚಿವುಟಿದಂತಾದರೂ ಮುಖವು ನಿರ್ವಿಕಾರವಾಗಿಯೇ ಇತ್ತು. "ನನ್ನ ಮೇಲೆ ತುಂಬ ಅಭಿ ಮಾನವಿಟ್ಟಿದ್ದಾರೆ" ಎಂದು ಉದ್ಗರಿಸಿದ.

"ಅಭಿಮಾನವನ್ನು ಮಾತ್ರವಲ್ಲ; ಪ್ರೀತಿಯನ್ನೂ!"

"ಹೌದು; ಎರಡನ್ನೂ!"

"ಅದಕ್ಕೀಗ ಲೋಪವಾಗಿದೆ ಎನ್ನುತ್ತೀಯಾ?"

"ಇಲ್ಲ; ಸರ್ವಥಾ ಇಲ್ಲ!"

"ಅನ್ಯರಲ್ಲಿ ಎರಡೆಣಿಕೆಯನ್ನಿಡುವ ವ್ಯಕ್ತಿ ನೀನಲ್ಲ"

"ಅಂತಹ ಎಣಿಕೆ ಏಕಿರಬೇಕು?"

"ಇರಬೇಕಾಗಿಲ್ಲ. ಆದರೆ ಇರುವುದೇ ಹೆಚ್ಚಲ್ಲವೆ?"

"ಆಗಿರಬಹುದು."

" ಸರಿ; ಅಷ್ಟನ್ನಾದರೂ ಒಪ್ಪಿಕೊಂಡೆಯಲ್ಲ....ನಿನ್ನನ್ನು ಮನೆಯಿಂದ ಹೊರಗೆ ಕಳುಹಿಸಿಕೊಟ್ಟರಲ್ಲ....ಅದಕ್ಕೆ ಕಾರಣವೇನೆಂದು ತಿಳಿದಿರಬಹುದಲ್ಲವೆ?"

" ಕಾರಣ ಏನೂ ಇರಬಹುದು; ತಿಳಿದು ಮಾಡುವುದಕ್ಕೇನಿದೆ?"

" ನಾನು ಅಂದೇ ಹೇಳಿದ್ದೆ. ಇಲ್ಲಿಯೇ ನನ್ನ ಜೊತೆಯಲ್ಲಿಯೇ ಇರಬಹುದೆಂದು."

" ಹೇಳಿದ್ದೀರಿ."

" ಅಂದೇ ಬುದ್ಧಿಯಿರುತ್ತಿದ್ದರೆ!"

" ಅವರ ಪ್ರೀತಿಯು ನನ್ನನ್ನು ಆ ಕಡೆಗೆ ಸೆಳೆಯಿತು."

" ಅದರ ಪರಿಣಾಮವೇನಾಯಿತು?"

" ಆಗುವುದೆಲ್ಲ ಆಯಿತು."

" ಈಗಲಾದರೂ ನನ್ನ ಮಾತಿಗೆ ಒಪ್ಪುವೆಯೊ?"

" ಯಾವ ಮಾತದು?"

" ನೀನು ಹೊಟೇಲಿನಲ್ಲಿ ವಾಸಮಾಡುವುದರಿಂದ ನನಗೆ ಆಗುವ ನಷ್ಟವೇನೂ ಇಲ್ಲ...ಆದರೆ ಆರೋಗ್ಯಕ್ಕೆ ಅಪಾಯವನ್ನು ತಂದುಕೊಳ್ಳುವೆ!"

" ಅಪಾಯಕ್ಕೆ ಹೆದರುವ ಜೀವ ಇದಲ್ಲ."

" ಇದೆಂಥ ಪೌರುಷದ ಮಾತು ಶ್ಯಾಮಣ್ಣ........ಪ್ರಪಂಚದಲ್ಲಿ ಡಾಕ್ಟರರ ಸಂಖ್ಯೆ ಕಡಿಮೆಯಲ್ಲ; ಸಾಯುವವರು ಸಾಯದೆಯೂ ಇರುವುದಿಲ್ಲ. ಒಬ್ಬ ಡಾಕ್ಟರನಾದರೂ ಮೃತ್ಯುವನ್ನು ನಿವಾರಿಸುವ ಚಿಕಿತ್ಸಾ ಕ್ರಮವನ್ನು ಕಂಡು ಹಿಡಿದಿದ್ದರೆ—ಸಾಯುವುದು ಒಂದು ಅನಿರೀಕ್ಷಿತ ವಿಪತ್ತು ಎಂದೀಗ ನಾವು ಭಾವಿಸುವುದಕ್ಕೆ ಎಡೆಯಿತ್ತು. ಎಲ್ಲರೂ ಸಾಯುತ್ತಾರೆ; ಸಾಯುವ ಕ್ರಮವೂ ಒಂದೆ; ವಶಕೆಟ್ಟು ನೆಲದ ಮೇಲೆ ಬೀಳುವುದು; ದೀರ್ಘ ಶ್ವಾಸಬಿಡುವುದು; ಕೊನೆಗೆ ಕಣ್ಣುಮುಚ್ಚುವುದು. ಅಥವಾ ಕಣ್ಣು ತೆರೆದುಕೊಂಡೇ "ಇಲ್ಲ" ಎನಿಸುವುದು. ಈ ವಿಷಯವನ್ನು ತಿಳಿದಿದ್ದೂ ಮನುಷ್ಯರು ರಸ್ತೆಯ ಮೇಲೆ ಬಿದ್ದು ಸಾಯುವುದಕ್ಕೆ

ಬಯಸುವುದಿಲ್ಲ ಶಾಮಣ್ಣ....ಸಾವನ್ನು ಆದಷ್ಟು ಮುಂದೆ ದೂಡುವುದಕ್ಕೂ ಪ್ರಯತ್ನಿಸುತ್ತಾರೆ....ಹೋರಾಟಪಡುತ್ತಾರಲ್ಲವೆ? ಎಂದರೆ ಸಾಯುವುದರಲ್ಲಿ ಒಂದು ಕ್ರಮವಿದೆ; ಸಾಹಿತ್ಯ ಭಾಷೆಯಲ್ಲಿ ಹೇಳುವುದಿದ್ದರೆ, ಸಾಯುವ ಶೈಲಿ ಎಂಬುದಿದೆ; ಅದಕ್ಕೆ ಕಾಲವೂ ಇದೆ....ಇವೆರಡನ್ನೂ ಮೀರುವುದು ರೂಢಿಗೆ ವಿರುದ್ಧ ಶ್ಯಾಮು!"

ನಾಗೇಶನ ವಾಗ್ಜಾಲದಲ್ಲಿ ಹಾಸ್ಯರಸವಿದ್ದರೂ ಅಂತಃಕರಣವಿರಲಿಲ್ಲ. ಶ್ಯಾಮಣ್ಣನಿಗೆ ಅವನ ಅಂತಃಕರಣವನ್ನು ಹಿಡಿಯಬೇಕಾಗಿತ್ತು. "ಡಾಕ್ಟರ್ ಸಾಹೇಬರೇ! ಸಾಯುವ ಸರಿಯಾದವಿಧಾನವನ್ನು ಕಲಿಸುವುದಕ್ಕಾಗಿಯೆ ನನ್ನನ್ನು ಒಮ್ಮೆ ಬದುಕಿಸಿದುದಾಗಿ ಇರಬೇಕಲ್ಲವೆ?" ಎಂದ.

ನಾಗೇಶ: "ತಮಾಷೆ ಬೇಡ ಶ್ಯಾಮು....ಪರಿಸ್ಥಿತಿಯೆಲ್ಲ ನಿನಗೆ ತಿಳಿದಿದೆ. 'ಸಂಗ್ರಾಮ' ಪತ್ರಿಕೆಯ ಉಸಿರು ಎಂದು ಆದುದ್ದೋ ತಿಳಿದಿಲ್ಲ. ಅದನ್ನು ಉಳಿಸಬೇಕಲ್ಲವೆ?"

ಶ್ಯಾಮಣ್ಣ: ಹೌದು.

ನಾಗೇಶ: ಹಾಗಿದ್ದರೆ ನೀನೂ ನನ್ನ ವಶದಲ್ಲಿ ಉಳಿಯಬೇಕು.

ಶ್ಯಾಮಣ್ಣ: ನಾನು ಎಲ್ಲಿಯೂ ಉಳಿಯಬಲ್ಲೆ.

ನಾಗೇಶ: ಆ ವಿಷಯ ತಿಳಿದೇ ಹೇಳಿದ ಮಾತಿದು. ಪ್ರಭಾಕರ ನಿಗೆ ಸ್ವಾಸ್ಥ್ಯವಿಲ್ಲ. ಶರೀರದ ಸ್ವಾಸ್ಥ್ಯವೋ ಮನಸ್ಸಿನ ಸ್ವಾಸ್ಥ್ಯವೊ? ಇಲ್ಲದುದು ಯಾವುದೆಂದು ತಿಳಿದಿಲ್ಲ.

ಶ್ಯಾಮಣ್ಣ: ಸರಿ.

ನಾಗೇಶ: ನಮ್ಮ ಆಶೆಯೆಂದರೆ ಕಾಮಾಕ್ಷಿಯೊಬ್ಬಳೆ....

ಶ್ಯಾಮಣ್ಣ: ಒಬ್ಬಳೇ!

ನಾಗೇಶ: ಇಲ್ಲಿ ಒತ್ತಿಹೇಳಬೇಕಾದುದೇನೂ ಇಲ್ಲ. ನನ್ನ ಅತ್ತೆಯ ಮಗಳು....ಆಕೆಯ ಭವಿಷ್ಯ ಹಾಳಾಗುವ ಚಿಹ್ನೆಯಿದೆ.

ಶ್ಯಾಮಣ್ಣ: ಆ ಸಂಭವವನ್ನು ಚೆನ್ನಾಗಿ ತಿಳಿದಿದ್ದೇನೆ.

ನಾಗೇಶ: ಏನೇನೋ ನಿಷ್ಕಾರಣವದಂತಿಗಳನ್ನು ಕೇಳಬೇಕಾಗಿದೆ.

ಶ್ಯಾಮಣ್ಣ: ಹೌದು—ಕೇಳಬೇಕಾಗಿದೆ.

ನಾಗೇಶ: ಅವಳ ಬಗ್ಗಾಗಿ ನೀನು, ನನ್ನೊಡನೆಯೇ ವಾಸಿಸುತ್ತಿರಬೇಕು.

ಶ್ಯಾಮಣ್ಣ: "ಯಾರ ಬಗ್ಗೆ ಆದರೂ ನಿಮ್ಮ ಸಹವಾಸ ತ್ಯಾಜ್ಯವಾಗಿಲ್ಲ." ಹೀಗೆನ್ನುವಾಗ ಶ್ಯಾಮಣ್ಣನ ಮನಸ್ಸು ಉದ್ವೇಗದಿಂದ ಕುದಿಯುತ್ತಿದ್ದಿರಬೇಕು.

ನಾಗೇಶ: ಇದು ನಿಜವಾದರೆ, ನೀನು ನನ್ನ ಮನೆಯಲ್ಲಿಯೇ ವಾಸಮಾಡು. ಲೇಖನ ಬರೆ. ಚಿತ್ರಗಳನ್ನು ಬರೆ; ಇಳಿದುಹೋದ ಪತ್ರಿಕೆಗೆ ಹೊಸಜೀವಕಳೆಯನ್ನು ತುಂಬಿಸು. ಇಷ್ಟು ಕೆಲಸವನ್ನು ನೀನು ಮಾಡುವೆಯಾದರೆ, ಉಳಿದುದನ್ನು ಕಾಮಾಕ್ಷಿ ನೋಡಬಲ್ಲಳಲ್ಲವೆ?

ಶ್ಯಾಮಣ್ಣ: ಸಂದೇಹವಿಲ್ಲ.

ನಾಗೇಶ: ನಿನಗೆ ತಿಳಿಯದ ವಿಷಯವಲ್ಲ; ಅಪವಾದ ಮಧ್ಯದಲ್ಲಿ ಆ ಕೂಸು ಹೇಗೆ ಬದುಕೀತು? ಕಾಮಾಕ್ಷಿಯನ್ನು ಪ್ರಬುದ್ಧ ಸ್ತ್ರೀಯೆಂದು ಕರೆಯುವುದಕ್ಕೆ ಮನಸ್ಸಿಲ್ಲ. ಸಾರ್ವಜನಿಕ ಜೀವನ ಪಥದಲ್ಲಿ ಆಕೆ ದಟ್ಟಡಿಯಿಡುವುದಕ್ಕೂ ಕಲಿತಿಲ್ಲ. ಬದುಕಿಕೊಳ್ಳಲಿ, ದೇವರು ಕೊಟ್ಟ ಆಯುರ್ಮಾನವನ್ನು ಮನೋವೇದನೆಯಿಲ್ಲದೆ ಕಳೆಯಲಿ.

ಶ್ಯಾಮಣ್ಣ: ನನಗೆ ಬೇಕಾದುದೂ ಅಷ್ಟೆ.

ನಾಗೇಶ: ಇದು ನಿಜವಾದರೆ ಮುಂದಿನ ವಿಷಯಗಳನ್ನು ಹೇಳುವುದಕ್ಕೆ ಸಂಕೋಚವೇನೂ ಇಲ್ಲ. ನೀನು ಸಂಗ್ರಾಮ ಕಾರ್ಯಾಲಯದೊಡನೆ ಪ್ರತ್ಯಕ್ಷ ಸಂಬಂಧವನ್ನು ಇಟ್ಟುಕೊಳ್ಳಬೇಕಾಗಿಲ್ಲ. ಬರೆದುಕೊಡು; ಬರೆದು ಕೊಟ್ಟುದು ಅಲ್ಲಿಗೆ ತಲಪುತ್ತದೆ. ನಿನ್ನ ಒಬ್ಬನ ಹೊಟ್ಟೆ ತುಂಬುವುದಕ್ಕೆ ಏನು ಬೇಕು?

ಶ್ಯಾಮಣ್ಣ: ಏನೂ ಆಗಬೇಕಾಗಿಲ್ಲ.

ನಾಗೇಶ: ಪತ್ರಿಕಾ ಲೇಖನ ಮಾತ್ರವಲ್ಲ; ನನ್ನ ಕಾರ್ಯನಿರ್ವಾಹಕನಾಗಿಯೂ ಸಹಾಯಮಾಡು.

ಶ್ಯಾಮಣ್ಣ ಸ್ವಲ್ಪ ಯೋಚನೆ ಗೀಡಾದ. ನಾಗೇಶನ ತಂತ್ರಜಾಲ ಬಹಳ ವಿಶಾಲವಾಗಿ ಹರಡುವಂತೆ ತೋರುತ್ತದೆ. ತಾನು ಹಣದ ದಾಸನೆಂಬ

ಭಾವದಿಂದ ವರ್ತಿಸುವಂತೆ ತೋರುತ್ತದೆ. ಇಂತಹ ಭಾವನೆ ಅವನಲ್ಲಿ ದ್ವರೇ ಲೇಸು. ವಿಧೇಯನಾಗಿ ನಡೆದುಕೊಂಡು ನಾಗೇಶನ ಒಳಗಿನ ವ್ಯಕ್ತಿ ಏನು ಮಾಡುತ್ತದೋ ಅದನ್ನೇಕೆ ಪರೀಕ್ಷಿಸಬಾರದು? ತತ್ಕಾಲಕ್ಕೆ ತಪ್ಪು ತಿಳುವಳಿಕೆಯಾಗಬಹುದು. ಕಾಮಾಕ್ಷಿ ತಪ್ಪಾಗಿ ತಿಳಿಯಬಹುದು. ತಾನು ಸಹಿಸಬೇಕು; ಸಹಿಸಲೇ ಬೇಕು. ಬೇರೆ ಗತಿಯಿಲ್ಲ.

ಶ್ಯಾಮಣ್ಣ, ಅಂದಿನಿಂದ ನಾಗೇಶನ ಮನೆಯಲ್ಲಿ ಡೇರೆಹೊಡೆದ. ಸಂಗ್ರಾಮ ಪತ್ರಿಕೆಯಲ್ಲಿ ಅವನ ಲೇಖನಗಳು ಪ್ರಕಟವಾಗುತ್ತಲೂ ಇದ್ದುವು. ಆದರೆ ಕಾಮಾಕ್ಷಿಯ ದರ್ಶನ ಅಪರೂಪವಾಗಿ ಆಗುತ್ತಿತ್ತು. ಪ್ರಭಾಕರನು ಏಕಾಂತ ಪ್ರಿಯನಾಗಿದ್ದು ಸಂಪರ್ಕವನ್ನು ವರ್ಜಿಸುತ್ತಿದ್ದ.

## ೨೯

ಸುಶೀಲಮ್ಮನು ಮನೆಗೆ ಬಂದು ಎರಡು ತಿಂಗಳಾಯಿತು. ಆಕೆಯ ಮೈಕೂಡಿ ಬಂದಿದೆ. ಆದರೂ "ದೀರ್ಘಕಾಲ ನೋಡಬೇಕು. ಇಲ್ಲಿಯೇ ಇದ್ದು ಡಾಕ್ಟರರಿಂದ ಪರೀಕ್ಷೆಮಾಡಿಸಿ ಮದ್ದು ಕೊಡಿಸಬೇಕು—" ಎಂದು ನಾಗೇಶ ಹೇಳುತ್ತಾನೆ. ಮಾತ್ರವಲ್ಲ ಎರಡು ದಿನಕ್ಕೆ ಒಮ್ಮೆಯಾದರೂ ಬರುತ್ತಾನೆ. ಅರ್ಧಘಂಟೆ ಒಂದು ಘಂಟೆ ಸುಶೀಲಮ್ಮನೊಡನೆ ಚಕ್ಕಂದ ಮಾಡುತ್ತಾನೆ. ಮಧ್ಯದಲ್ಲಿ ಕಾಲ ಸಪ್ಪಳವಾದರೆ, ಕಾಮಾಕ್ಷಿ ಬಂದಳೇ ಎಂದು ಕೋರೆ ನೋಟವನ್ನು ಬೀರುತ್ತಾನೆ.

ಕಾಮಾಕ್ಷಿಗೆ ಇದು ಸಹಿಸದಾಯಿತು. ಆ ಕಾರಣ— ಈ ಕಾರಣ ಎಂದು ನೆವಹೇಳಿ ಕಚೇರಿಗೆ ಬರುತ್ತಿದ್ದ ನಾಗೇಶನನ್ನು ಅಲ್ಲಿಗೆ ಬಾರದಂತೆ ಸುಲಭವಾಗಿ ತಡೆಹಾಕಿದ್ದಳು ಕಾಮಾಕ್ಷಿ. "ಶ್ಯಾಮಣ್ಣನ ಲೇಖನಗಳನ್ನು ತರಿಸುವುದಕ್ಕೆ ಕಚೇರಿಯಿಂದ ಪೇದೆಯನ್ನು ಕಳುಹಿಸಲಾಗುತ್ತದೆ. ಚಿಲ್ಲರೆ ಕೆಲಸಗಳ ಬಗ್ಗಾಗಿ ನಾಗೇಶರಾಯರು ಬರಬೇಕಾಗಿಲ್ಲ. ಅವಶ್ಯ—ಅತ್ಯವಶ್ಯ ಕಾರ್ಯಗಳಿದ್ದರೆ ಮಾತ್ರ ಬಂದರೆ ಸಾಕೆ"ಂಬುದನ್ನು ಹತ್ತುಬಾರಿ ಹೇಳಿದ್ದಾಳೆ. ಇದು ನಾಗೇಶನಿಗೆ ಅರ್ಥವಾಗದೆ ಇರಲಿಲ್ಲ.

ಮನೆಗೆ ಬರುವ ನಾಗೇಶನನ್ನು ತಡೆಯುವುದಾದರೂ ಹೇಗೆ? ಚಿಕ್ಕಮ್ಮನ ರೋಗ ಚಿಕಿತ್ಸೆ ಅವನ ಮೂಲಕವೇ ಆಗಬೇಕಷ್ಟೆ? ಅವನು ಮನೆಯೊಳಗೆ ಕಾಲಿಡಕೂಡದೆಂದು ಸ್ಪಷ್ಟೋಕ್ತಿಯಿಂದ ಹೇಳಿದಲ್ಲಿ, ಚಿಕ್ಕಮ್ಮನೆ ಹೊರಟುಹೋಗಬೇಕೆಂಬ ಧ್ವನಿಹೊರಡುವುದಲ್ಲವೆ?

ಎಲ್ಲದಕ್ಕಿಂತಲೂ ಹೆಚ್ಚಿನ ವ್ಯಸನಾಸ್ಪದ ವಿಷಯವೆಂದರೆ ತನ್ನ ಪ್ರಾಣೇಶ್ವರನದು. ಈಶ್ವರತ್ವವು ಅವನದೇ ಆಗಿದೆ. ಆದರೆ ಅದನ್ನಾತ ಒಪ್ಪಿಕೊಳ್ಳುವುದಿಲ್ಲ. ಮನೆಯಲ್ಲಿ ಏನಾದರೂ ಚಿಂತೆಯಿಲ್ಲ; ಕಚೇರಿಯ ಕೆಲಸಕ್ಕೂ ತನಗೂ ಸಂಬಂಧವಿಲ್ಲ ಎನ್ನುವಂತೆ ಆತನ ನಡತೆಯಿದೆ. ಒಂದು ಧ್ಯೇಯವನ್ನು ಒಟ್ಟಾಗಿ ಸಾಧಿಸಬಹುದು; ಎಂದು ಜೀವನಯಾತ್ರೆಯನ್ನು ತೊಡಗಿದುದಾಯಿತು. ಈಗ ಒಬ್ಬ ಯಾತ್ರಿಕನು ಕುಂಟುತ್ತಾನೆ. ಅಥವಾ ಹೇಸುತ್ತಾನೆ. ಹಾಗಾದರೆ ಧ್ಯೇಯವೆಂಬುದು ತನಗೆ ಮಾತ್ರ..... ಈ ಸಂಗ್ರಾಮ ರಂಗ ತನಗೆ ಮಾತ್ರ.....ಮನೆ ತನಗೆ ಮಾತ್ರ.....ಸಂಸಾರದ ಒಂದು ಕೋಣೆಯಲ್ಲಿರುವ ಒಕ್ಕಲು ತಾನು ಮಾತ್ರ...ಇಂತಹ ಅವಸ್ಥೆಯೂ ಬರಬೇಕೆ?

ಕಾಮಾಕ್ಷಿಗೆ ಆರು ತಿಂಗಳು. ಇನ್ನು ಹೆಚ್ಚೆಂದರೆ ಒಂದೆರಡು ತಿಂಗಳು ಕಚೇರಿಗೆ ಹೋಗಬಹುದು. ಮತ್ತೆ ಪಾರು ಪತ್ಯವನ್ನು ಯಾರು ನೋಡುತ್ತಾರೆ? ಸಂಗ್ರಾಮವು ನಡೆಯುವುದು ಹೇಗೆ? ಅದಕ್ಕೆ ವಾರ ವಾರದ ಗ್ರಾಸವನ್ನು ಕೊಡುವವರು ಯಾರು? ಶ್ಯಾಮಣ್ಣನೂ ಇಲ್ಲ. ಅವನು ಸಂಗ್ರಾಮ ಪತ್ರಿಕೆಯಿರುವ ಭೂಭಾಗವನ್ನೆ ಬಿಟ್ಟಂತಿದೆ. ಅವನ ಭೂಪಟದಲ್ಲಿ—ಸಂಗ್ರಾಮ ಪತ್ರಿಕಾ ಕಾರ್ಯಾಲಯದ ಗುರುತಿನ ಗೆರೆಯೇ ಇಲ್ಲ. ಲೇಖನ ಬರೆಯುತ್ತಾನೆ. ಸುದ್ದಿ ಕಳುಹಿಸುತ್ತಾನೆ....ಇದೆಲ್ಲ ನಾಗೇಶನ ಕೃಪೆಯಿಂದ!

ಪ್ರಭಾಕರನ ಸ್ವಭಾವವಂತೂ ಅತಿ ವಿಚಿತ್ರ. ತನ್ನಲ್ಲಿ ಸಂದೇಹವಿಲ್ಲವಂತೆ. ಆದರೆ ಹಿಂದಿನಂತಹ ಸರಸವೇಕಿಲ್ಲ? ಹಿಂದಿನಂತಹ ಅನುರಕ್ತಿಯೇಕಿಲ್ಲ? ತನ್ನ ಕುರಿತು ಯಾರೋ ಒಬ್ಬಳು ಪರನಾರಿಯೆಂಬ ರೀತಿಯಲ್ಲಿ ವ್ಯವಹರಿಸುತ್ತಾನೆ. ತನ್ನ ಅಚಾತುರ್ಯವನ್ನು ನಿವೇದಿಸಿಕೊಂಡರೆ ಅದು

ಗಮನಾರ್ಹ ವಿಷಯವಲ್ಲ ಎಂಬಂತೆ ನಟಿಸಿ ದೂರ ನಿಂತಿರುತ್ತಾನಲ್ಲದೆ ಸಮೀಪಕ್ಕೆ ಬರುವುದಿಲ್ಲ. ಆಡುವ ಮಾತಿಗೆ ಮೊನೆಯಿದೆ; ಕೊಂಡಿಯಿದೆ; ವಿಷವಿದೆ! "ಜನರ ಹೇಳಿಕೆ ಸತ್ಯ—ನಿನ್ನದು ಸುಳ್ಳು" ಎಂದಿದ್ದರೆ ಕೂಡಲೇ ಆತ್ಮಹತ್ಯೆ ಮಾಡಿಕೊಳ್ಳಬಹುದಾಗಿತ್ತು. ಹಾಗೆ ಒಮ್ಮೆಯೂ ಹೇಳುವುದಿಲ್ಲ. "ನಿನ್ನ ವರ್ತನೆ ನಿರ್ದೋಷ; ಪ್ರವಾದಗಳನ್ನು ನಂಬುವುದಿಲ್ಲ" ಎಂದರೆ ಪೂರ್ಣ ಮನಸ್ಸಿನಿಂದ ಬಾಳಿ ಬದುಕಬಹುದಾಗಿತ್ತು. ಹಾಗೂ ಹೇಳುವುದಿಲ್ಲ. "ಇಲ್ಲಿ ತಪ್ಪಿಬಿದ್ದೆ" ಎಂದು ಎಚ್ಚರಕೊಡುತ್ತಿದ್ದರೆ, ಮುಂದೆ ತಪ್ಪಿ ಬೀಳದಂತೆ ಜಾಗ್ರತೆ ವಹಿಸಿ ಅವನ ಪ್ರೇಮ ಪಾತ್ರಳಾಗಲು ಹವಣಿಸಬಹುದಾಗಿತ್ತು. ಆ ಮಾತು ಇಲ್ಲ. ತನ್ನನ್ನು ಈ ಪ್ರಪಂಚಕ್ಕೆ ಕಟ್ಟಿಹಾಕಿದ ಪ್ರೇಮತಂತು ಕಡಿದೇ ಹೋಗಿರಬಹುದಲ್ಲವೆ? "ಇನ್ನು ಮುಂದೆ ನಿನಗೆ ಏನಾದರೂ ಚಿಂತೆಯಿಲ್ಲ" ಎನ್ನುವಂತೆ ಸ್ಥಾಣುವಾಗಿ ಕುಳಿತಿರುವನಲ್ಲವೆ?

ಇನ್ನೂ ನಾಗೇಶನ ಸಂಬಂಧವಂತೆ. ತಾನು ಒಲ್ಲೆನೆಂದರೂ ಅವನ ಸಹಾಯದಿಂದ ಪತ್ರಿಕೆಯನ್ನು ನಡೆಸುವುದಂತೆ. ಯಾವ ಪುಣ್ಯಕ್ಕಾಗಿ, ಯಾರ ಪುರುಷಾರ್ಥಕ್ಕಾಗಿ ಪತ್ರಿಕೆನಡೆಯಬೇಕು? ಧ್ಯೇಯವೇ ಇಲ್ಲದ ಮೇಲೆ ಬರೆದು ತುಂಬಿಸಬೇಕಾದ ವಿಷಯಗಳೇನು? ಶ್ಯಾಮಣ್ಣನನ್ನು ಕಾಲಿನಿಂದ ಒದೆದು ಬಿಸುಟ ಹಾಗಾಯಿತು. ಈ ವಿಷಯದಲ್ಲಿಯೂ ಪತಿ ದೈವಕ್ಕೆ ಸಂಶಯವೇ? ಸುಶೀಲಮ್ಮನನ್ನು ಬರಮಾಡಿದುದು; ಮನೆಯ ಒಡೆತನವನ್ನು ಅವಳಿಗೊಪ್ಪಿಸಿದುದು; ಸಾಂತಮ್ಮನವರು ಪ್ರತಿದಿನ ತತ್ತ್ವೋಪದೇಶ ಮಾಡುತ್ತಿರುವುದು; ಇದನ್ನೆಲ್ಲ ನೋಡಿ ಕೇಳಿ ಯಜಮಾನರು ಸಹಿಸುತ್ತಿರುವುದು;—ತನ್ನ ಚರ್ಯೆ ಅವರಿಗೂ ಮೆಚ್ಚುವುದಿಲ್ಲವೆನ್ನುವುದಕ್ಕೆ ಬೇರೆ ನಿದರ್ಶನ ಬೇಕೆ? ಹೀಗೆ ಆಲೋಚಿಸುತ್ತಾ ಕುಳಿತುಕೊಳ್ಳುವ ಕಾಮಾಕ್ಷಿಗೆ ರಾತ್ರಿಯಲ್ಲಿ ರೆಪ್ಪೆರೆಪ್ಪೆಕೂಡುವುದೂ ಇಲ್ಲ. ಶರೀರ ಕುಂದುತ್ತಿದೆ. ಏಕೆ ಹೀಗಾಯಿತೆಂದ ಕೇಳುವವರಿಲ್ಲ. ನಾಗೇಶ ಒಮ್ಮೊಮ್ಮೆ ಕೇಳುತ್ತಾನೆ. ಆದರೆ ಕಾಮಾಕ್ಷಿಗೆ ಈ ಯೋಗ ಕ್ಷೇಮಚಿಂತನೆಗೆ ಬೇರೆ ಅರ್ಥವಾಗುತ್ತದೆ. "ನನ್ನಿಂದ ಅಪಮಾನ ಹೊಂದಿದ ಮೇಲೆಯೂ ಬದುಕುವ ಸಾಹಸಮಾಡಿದೆಯಲ್ಲವೆ?

ಇನ್ನೊನ್ಮ್ಮೆ ಹೊಡೆಯುತ್ತೇನೆ. ಮತ್ತೆ ಹೇಗೆ ಬದುಕುವೆಯೊ ನೋಡು ತ್ತೇನೆ" ಎಂದು ಅವನು ಕೇಳಿದನೆಂಬ ವ್ಯಾಖ್ಯಾನ ಮಾಡಿಕೊಳ್ಳುತ್ತಾಳೆ.

ಕಾಮಾಕ್ಷಿಗೆ ಆ ದಿನಗಳು ಶತ್ರುಗಳಾದವು. ಆದರೆ "ಅವರ ಎದೆ ಯಲ್ಲೇನಿದೆಯೊ ಅದನ್ನು ನಾಲಗೆಯಿಂದ ಹೊರಡಿಸದಿರುವುದಿಲ್ಲ" ಎಂದ ವಳ ಅಭಿಮಾನವು ಶಪಥಕೊಟ್ಟಿತ್ತು!

೩೦

ಕೆಲವೇ ದಿನಗಳ ಸಮೀಪ ಸಂಪರ್ಕದಿಂದ ಶ್ಯಾಮಣ್ಣನ ವಿಷಯಹಲ್ಲಿ ಇಷ್ಟು ಅಂಶಗಳು ನಾಗೇಶನಿಗೆ ಹೊಳೆದುತೋರಿದುವು: ಈತ ಉಪಯುಕ್ತ ವ್ಯಕ್ತಿ. ಮನನೆಟ್ಟು ಕೆಲಸ ಮಾಡುತ್ತಾನೆ. ಕಬ್ಬಿಣದ ಚೂರು ಸೂಜಿ ಕಲ್ಲಿಗೆ ಅಂಟುವಂತೆ ತಾನು ಮಾಡಬೇಕಾದ ಕಾರ್ಯಕ್ಕೆ ಅಂಟಿಕೊಳ್ಳು ತ್ತಾನೆ. ಯೋಗ ಶಾಸ್ತ್ರದಲ್ಲಿ ಈ ಗುಣಕ್ಕೂ ಒಂದು ಪರಿಭಾಷೆ ಇರ ಬಹುದು. ಆದರೆ ನಾನು ಅಷ್ಟು ದೊಡ್ಡ ಹೆಸರನ್ನು ದುರುಪಯೋಗ ಪಡಿಸುವುದಿಲ್ಲ. ಇದನ್ನು ಅಂಟುವ ಸ್ವಭಾವ ಎನ್ನಬಹುದು; ತಗಲುವ ಗುಣ ಎನ್ನಬಹುದು; ಅಥವಾ ಸಾಧನೆ ಎನ್ನಲುಬಹುದು. ತಗಲಿಕೊಳ್ಳುವ ವಸ್ತು ಜಿಗುಳಿಯಂತೆ ಹಿಡಿದುಕೊಂಡರೆ ಅದಕ್ಕೆ ಬೇರೆ ಹೆಸರು ಕೊಡ ಬೇಕಾಗುತ್ತದೆ. ಈತನಲ್ಲಿ ಆಸ್ವಭಾವವೂ ಇರುವಂತಿದೆ. ರಕ್ತಹೀರಿ ತನ್ನ ಒಡಲನ್ನು ಉಬ್ಬಿಸಿಕೊಳ್ಳುವ ಜಿಗುಳಿಯು ಕಿತ್ತು ತೆಗೆಯದೆ, ಹಿಡಿದ ಒಡಲನ್ನು ಬಿಡದು. ಪ್ರಭಾಕರನಿಂದ ಇವನನ್ನು ಅಗಲಿಸಿದ ಬಗೆ ಜಿಗುಳಿ ಯನ್ನು ಕಿತ್ತು ಸೆಳೆದಂತೆ. ಈಗ ತನ್ನಲ್ಲಿ ಅಂಟಿಕೊಂಡಿದ್ದಾನೆ. ತನ್ನ ಒಡಲನ್ನು ಕಚ್ಚಿಕೊಂಡಿದ್ದಾನೆ. ಇರಲಿ; ಆ ಗುಣವನ್ನು ಸ್ವಪ್ರಯೋಜನಕ್ಕೆ ಒದಗಿಸಿಕೊಳ್ಳುತ್ತೇನೆ. ಆಗಬಾರದೇಕೆ? ಅವನಿಗೆ ತನ್ನಿಂದಾಗಬೇಕಾದ ಸ್ವಾರ್ಥವಿದೆ; ಅದಾಗುವ ವರೆಗೆ ವಿಧೇಯನಾಗಿರುತ್ತಾನೆ.

ತಾನು ಪರಕೀಯನೆಂಬ ಭಾವನೆ ಅವನಿಗೆ ಬಾರದಂತೆ ನಾಗೇಶನು ಅವನಿಗೆ ಹತ್ತಾರು ಕೆಲಸಗಳನ್ನು ಕೊಡುತ್ತಾನೆ. ಮನಸ್ಸು ಅತ್ತಿತ್ತ ಚಲಿಸ ದಂತೆ ನೋಡಿಕೊಳ್ಳುತ್ತಾನೆ. ಒಂದು ದಿನ "ಶ್ಯಾಮಣ್ಣ! ನನಗೆ ನೂರಾರು

ಪತ್ರಗಳು ಬರುತ್ತವೆ; ಅವುಗಳನ್ನೆಲ್ಲ ನೋಡುವುದಕ್ಕೆ ಅವಕಾಶವಿರುವುದಿಲ್ಲ. ದಯೆಯಿಟ್ಟು ಬಂದ ಪತ್ರಗಳನ್ನು ಬಿಚ್ಚಿನೋಡಿ, ನಾನು ಸ್ವತಃ ನೋಡ ಬೇಕಾದುದನ್ನು ಮಾತ್ರ ನನಗೆ ತೋರಿಸಿ ಉತ್ತರ ಬರೆಯುವೆಯಾ?" ಎಂದು ಪ್ರಶ್ನಿಸಿದನು. ಪತ್ರವನ್ನೋದುವ ಅಧಿಕಾರವೆಂದರೆ ಅಂತರಂಗ ವನ್ನು ಓದುವ ಅಧಿಕಾರ. ಇದರಿಂದ ಶ್ಯಾಮಣ್ಣನ ಆತ್ಮೀಯತೆ ಹೆಚ್ಚು ವುದಲ್ಲವೆ? ಶ್ಯಾಮಣ್ಣ ಕೆಲಸಗಳನ್ನು ಕಾಯುತ್ತಿದ್ದ. "ಕೆಲಸ ಕೊಟ್ಟು ನನ್ನನ್ನು ಗೌರವಿಸಿದ್ದೀರಿ" ಎಂದು ಉತ್ತರಕೊಟ್ಟ.

ತನಗೊಪ್ಪಿಸಿದ ಕೆಲಸವನ್ನು ಶ್ಯಾಮಣ್ಣ ಚೆನ್ನಾಗಿ ಮಾಡುತ್ತಿದ್ದ. ಸಭೆಗಳಿದ್ದುವು; ಭಾಷಣಗಳಿದ್ದುವು; ಬರೆಯುವುದಕ್ಕಿತ್ತು; ಓದುವುದಕ್ಕಿತ್ತು. ಈ ಕಾರ್ಯ ಬಾಹುಲ್ಯದಲ್ಲಿಯೂ ನಾಗೇಶನ ಕಾರ್ಯದರ್ಶಿತ್ವವನ್ನು ಚೆನ್ನಾಗಿಯೇ ಮಾಡುತ್ತಿದ್ದ.

ಒಂದು ದಿನ ಪತ್ರವನ್ನು ಒಡೆದು ನೋಡುತ್ತಾನೆ. ಅಲಹಾಬಾದಿ ನಿಂದ ಮಿಸ್ ಎಸ್. ಭಾಮೆ ಬರೆದಿದ್ದಾಳೆ. ಕ್ಷೇಮ ಸಮಾಚಾರಗಳನ್ನು ಒಳಕೊಳ್ಳದ ಬರಿಯ ಸ್ಪಷ್ಟೋಕ್ತಿಗಳು ಅದರಲ್ಲಿದ್ದುವು.

"ಚುನಾವಣೆಯ ಕಾಲವನ್ನು ನೆನಪುಮಾಡು. ಆಗ ಒಂದು ವ್ಯಕ್ತಿ ನಿನ್ನಿಂದ ಅಪಮಾನ ಹೊಂದಿದೆ. ಅಂಥ ಪರಿಶುದ್ಧ ಜೀವಗಳನ್ನು ನಾನು ಇದು ವರೆಗೆ ಕಂಡಿಲ್ಲ. ನಿನ್ನ ವಿಷಯವಾಗಿ ನನಗೆ ಪತ್ರಬರೆದಿತ್ತು. ಆ ಪತ್ರವನ್ನು ನಿನ್ನ ಹಸ್ತದಲ್ಲಿಯೇ ಸಮರ್ಪಿಸಿದ್ದೆ. ಅದಕ್ಕೆ ಇದುವರೆಗೆ ಉತ್ತರಬಂದಿಲ್ಲ. ಸಾರ್ವಜನಿಕರ ಜೀವನವು ಹೀಗಿದ್ದರೆ ಕೆಲಸ ಹೇಗೆ ಸಾಗೀತು? ಕೂಡಲೆ ಉತ್ತರಕೊಡು; ಕೊಡಲೇ ಬೇಕು."

ಈ ಪತ್ರದಲ್ಲಿ ಉಕ್ತವಾದ ವ್ಯಕ್ತಿ ಕಾಮಾಕ್ಷಿಯಾಗಿರಬಹುದೇ? ಏಕೆ ಇರಬಾರದು? ಶ್ಯಾಮಣ್ಣ ಆ ಪತ್ರವನ್ನು ನಾಗೇಶನ ಕೈಗೆ ಕೊಟ್ಟಿರಲಿಲ್ಲ. ಮಹಾ ಪಾಪ ಮಾಡಿದ. ಆತನ ಜೀವನದಲ್ಲಿ ಇಂತಹ ಪಾಪ ಇದೇ ಮೊದಲು.

ನಾಗೇಶ ಶ್ಯಾಮಣ್ಣನ ಕೈಗೆ ಕೆಲವು ಬೀಗದ ಕೈಗಳನ್ನೂ ಕೊಟ್ಟಿದ್ದ. ಕಪಾಟೊಂದರದಲ್ಲಿ ಆತನ ಪತ್ರವ್ಯವಹಾರದ ಕಟ್ಟುಗಳಿದ್ದುದೂ ಆತನಿಗೆ

ಗೊತ್ತು. ಒಂದು ದಿನ ಒಂದರ ಬಾಗಿಲನ್ನು ತೆಗೆದು ಪತ್ರವ್ಯವಹಾರಗಳ ಕಟ್ಟನ್ನು ಬಿಚ್ಚಿದ. ಕಣ್ಣನ್ನು ತಪ್ಪಿಸಲಾರದ ಕಾಮಾಕ್ಷಿಯ ಕೈಬರಹ ಎದ್ದು ಕಣ್ಣಿಗೆ ಹೊಡೆದಂತಾಯಿತು. ಹೌದು; ತಂಗಿ ಕಾಮಾಕ್ಷಿಯ ಸ್ವಹಸ್ತಾಕ್ಷರ. ಕಾಮಾಕ್ಷಿಯದೆ....ಅನ್ಯರಿಗೆ ಇಷ್ಟು ಚಂದವಾಗಿ ಬರೆಯುವ ಶಕ್ತಿಯಿಲ್ಲ.

ಅದರಲ್ಲಿ ಹೆಚ್ಚೇನೂ ಇರಲಿಲ್ಲ. "ನಿಮ್ಮ ಸಂದೇಶವನ್ನು ಸ್ವೀಕರಿಸಿ ಸಾರ್ವಜನಿಕ ರಂಗಕ್ಕೆ ದುಮುಕಿದ್ದೇನೆ. ಆದರೆ ಸಾರ್ವಜನಿಕ ಸೇವಕರ ವೇಶ ಹಾಕಿಕೊಳ್ಳುವ ವ್ಯಕ್ತಿಗಳಲ್ಲಿ ಎಂತೆಂತಹವರು ಇದ್ದಾರೆ ಎಂಬುದು ತಿಳಿದು ಬಂತು. ನಾಗೇಶರಾಯರು ಮದ್ಯಪಾಯಿಗಳಲ್ಲ ಎಂಬುದು ನನಗೆ ಚೆನ್ನಾಗಿ ಗೊತ್ತು. ಆದರೆ ನಿನ್ನೆ ಗುರುಪುರದ ಪ್ರಯಾಣ ಸಂದರ್ಭದಲ್ಲಿ ಮೋಟಾರನ್ನಿಳಿಸಿ ಅವರು ತೋರಿಸಿದ ಚೇಷ್ಟೆಯಿಂದ ಆ ಅಭಿಪ್ರಾಯವನ್ನು ಬದಲಾಯಿಸಬೇಕು; ಅಥವಾ ಅವರು ದುಷ್ಟರೆಂದು ಭಾವಿಸಬೇಕು. ಇಂತವರ ಜೊತೆಯಲ್ಲಿ ಯಾರೆಷ್ಟು ಮುಂದುವರಿದು ಹೋಗಬಹುದು."— ಇಷ್ಟೆ ಆ ಪತ್ರಸಾರವಾಗಿತ್ತು. ಏಕ ಮುಖವಾದ ಅಭಿಪ್ರಾಯವನ್ನು ನಂಬಿ ಸಿದ್ಧಾಂತ ಹೇಳುವವಳಲ್ಲವಾದುದರಿಂದ ಭಾಮೆ ಆ ಪತ್ರವನ್ನು ನಾಗೇಶರಾಯರ ಹಸ್ತಕ್ಕೆ ತಲುಪಿಸಿದ್ದಳು. ಅಪಜಯದ ನೋವಿನಿಂದ ಊರನ್ನು ಬಿಡುವ ಕಾಲಕ್ಕೆ ಮುಖತಃ ಪ್ರಸ್ತಾವಿಸುವುದು ಆಗಲಿಲ್ಲ. ಆ ಮೇಲೆ ಒಂದಲ್ಲದಿದ್ದರೆ ಇನ್ನೊಂದು ಬಗೆಯ ಚಟುವಟಿಕೆಯಲ್ಲಿ ಅವಳ ಜೀವವು ಹೆಣೆದುಹೋಗಿತ್ತು. ನೆನವಾಗಿ ಇದ್ದಿರಲಾರದು. ಅಥವಾ ಇದೊಂದು ಚಿಕ್ಕ ಪ್ರಸಂಗ. ಆಂಗ್ಲಭಾಷೆಯ ನಾಣ್ನುಡಿಯಂತೆ ಕಾಪಿ ಕುಡಿಕೆಯಲ್ಲಿ ಎದ್ದ ಬಿರುಗಾಳಿ—ಅಲಕ್ಷ್ಯಭಾವವಿದ್ದಿರಲೂ ಬಹುದು.

ಹೇಗೂ ಇರಲಿ; ಶ್ಯಾಮಣ್ಣನಿಗೆ ಅದರ ಪ್ರಯೋಜನ ತಿಳಿದೆ ಇತ್ತು. ಅದನ್ನು ಜತನದಿಂದ ಕಾಪಾಡಿದ. ಸಂದರ್ಭದಲ್ಲಿ ಪ್ರಯೋಗಿಸಬೇಕೆಂದೂ ಭಾವಿಸಿದ.

ಇದು ಸಂದರ್ಭವೆ? ಅಲ್ಲ. ಈಗಲೆ ಅದನ್ನು ಪ್ರಭಾಕರನಿಗೆ ತೋರಿಸಿದರೆ ಅವನು ಏನೆಂದು ಭಾವಿಸುವನೊ? ಅವನ ಕಷ್ಟಕ್ಕೆ—ಅಥವಾ

ಅಪಕೀರ್ತಿಯೆಂದು ಭಾವಿಸುವ ಸಂಗತಿಗೆ ತಾನೂ ಅಪ್ರತ್ಯಕ್ಷ ಕಾರಣ ವಾಗಿರುತ್ತಾ, ಅವನ ಮನೆಯಿಂದ ಹೊರಗೆ ನಡೆಯಬೇಕಾದ ಪ್ರಸಂಗ ಬಂದಿರುತ್ತಾ, ಎದೆಯ ಹುಣ್ಣು ಹಸಿಹಸಿಯಾಗಿ ಸಿಡಿದು ಕೀವಾಗುವ ಸಂದರ್ಭವಿರುತ್ತಾ, ಪತ್ರವನ್ನು ತೋರಿಸಿಬರೆ ಏನು ಫಲವಾದೀತು? ಈ ಕುರಿತು ಅವನಿಗೆ ಸಂದೇಹವೇ ಇತ್ತು.

ಅಂದಿನಿಂದ ಅವನು ಚರ್ಯೆಯಲ್ಲಿ ಸ್ವಲ್ಪ ವ್ಯತ್ಯಾಸವಾಯಿತು. ನಾಗೇಶನ ಹೃದಯಕ್ಕೆ ಅತಿ ಸಮೀಪವರ್ತಿಯಾಗುವ ಸಕಲ ಕಪಟೋಪಾಯಗಳನ್ನೂ ಹೂಡಿದನು.

ಇದನ್ನು ಕಂಡು ನಾಗೇಶ ಆತನ ವಿಷಯದಲ್ಲಿ ತನಗಿದ್ದ ಅಭಿಪ್ರಾಯವು ಸರಿಯೆಂದು ತನ್ನ ವಿವೇಕದಲ್ಲಿರುವ ವಿಶ್ವಾಸವನ್ನು ಹೆಚ್ಚಿಸಿಕೊಂಡ.

"ನಿನ್ನ ಗುಣವನ್ನು ಕಂಡವರು, ಯಾರು ನಿನ್ನನ್ನು ಬಿಟ್ಟಾರು ಶ್ಯಾಮಣ್ಣ! ಪ್ರಭಾಕರನ ಮನೆಯ ಜನವಾಗಿ ಸೇರಿದ್ದುದರಲ್ಲಿ ಆಶ್ಚರ್ಯವೇನು?" ಒಂದು ನಕ್ಕ.

"ನನಗೆ ಅದೊಂದೂ ತಿಳಿಯದು; ಕಣ್ಣ ಮುಂದೆ ಇರುವ ಕಾರ್ಯದ ಕಡೆಗೇ ನನ್ನ ದೃಷ್ಟಿ!" ಎಂದು ಶ್ಯಾಮಣ್ಣನ ಉತ್ತರ.

## ೩೧

ಕಾಮಾಕ್ಷಿಯೂ ಪ್ರಭಾಕರನೂ "ತನುವೆರಡು; ಜೀವವೊಂದು" ಎಂಬಂತೆ ಇದ್ದಾಗ ಪ್ರಭಾಕರನಿಗೆ ಕಾಮಾಕ್ಷಿಯಿಂದ ಭಿನ್ನವಾದ ಅಸ್ತಿತ್ವ ವಿರಲಿಲ್ಲ. ಆಡುವ ಮಾತು ತನ್ನದೂ ಅವಳದೂ; ಮಾಡುವ ಯೋಚನೆ ತನ್ನದೂ ಅವಳದೂ; ನಾನು ಎಂಬುದರಲ್ಲಿ ಅವಳೂ ಅಡಿದ್ದಾಳೆ. ಈ ಏಕೀಭಾವದ ಎರಕದಲ್ಲಿ ತನ್ನ ಭಿನ್ನತೆ ಮರೆತುಹೋದಂತಿತ್ತು. ಈಗ ಅವನಿಗೆ ಬೇರೆ ಅಸ್ತಿತ್ವವಿದೆ; ಬೇರೆ ಜೀವವಿದೆ; ಭಾವವಿದೆ; ವಿಚಾರವಿದೆ. ಹಿಂದೆ ಮುಂದೆ ಕಣ್ಣು ತಿರುಗಿಸಿದರೆ ಕೇವಲ ಸ್ತ್ರೀಯೆನಿಸಿದ ಕಾಮಾಕ್ಷಿ ಗೋಚರಿಸುತ್ತಾಳೆ; ತನ್ನನ್ನೂ ಅವಳನ್ನೂ ಬೇರೆ ಬೇರೆ ದೃಷ್ಟಿಗಳಿಂದ ಅವಲೋಕಿಸುವ ಮನುಷ್ಯ ವ್ಯಕ್ತಿಗಳು ಗೋಚರಿಸುತ್ತವೆ.

ಕಾಮಾಕ್ಷಿ ಕಾಮಾಕ್ಷಿಯಾಗಿ, ತಾನು ತಾನೇ ಆಗಿ ಎಂದಿನಿಂದ ತೋರ ತೊಡಗಿತು? ಎಂದು ಸಂಶೋಧಿಸಿದ್ದಾಗ ಕೆಲ ಹೆಗ್ಗುರುತುಗಳು ತೋರಿಬಂದುವು. ಶ್ಯಾಮಣ್ಣ ಮನೆಯೊಳಗೆ ಸೇರಿಕೊಂಡಂದಿನಿಂದ ಕಾಮಾಕ್ಷಿಗೂ ತನಗೂ ಇರತಕ್ಕ ಭಿನ್ನತ್ವವು ಪ್ರಕಟವಾಗ ತೊಡಗಿದ್ದಿತು. ಹಿಂದೆ ತಮ್ಮ ತಮ್ಮ ಗ್ರಂಥಿಗಳನ್ನು ತಾವೇ ಕರಗಿಸಿಕೊಂಡವರು, ಶ್ಯಾಮಣ್ಣ ಬಂದ ಮೇಲೆ ಅವನ ಸಾಕ್ಷಿಯಾಗಿ ಉಜ್ಜಾಟ ಒಡನಾಟಗಳನ್ನು ಮಾಡಿದರು. ಒಮ್ಮೆಯಲ್ಲ—ಹಲಬಾರಿ ಶ್ಯಾಮಣ್ಣ—ಕಾಮಾಕ್ಷಿಯರ ಭಾವನೆಗಳಲ್ಲಿ ಸಾಮೀಪ್ಯ; ಪ್ರಭಾಕರನು ದೂರದ ಪ್ರೇಕ್ಷಕನಾಗಿ ನಿಲ್ಲಬೇಕಾಗಿತ್ತು. ನಾಗೇಶನ ಸಂಪರ್ಕವು ಬೆಳೆದು ಚಳವಳದಲ್ಲಿ ಮುಮ್ಮುಕಿದಾಗ ಶ್ಯಾಮಣ್ಣ—ನಾಗೇಶ—ಕಾಮಾಕ್ಷಿಯರು ಮೂವರೂ ಒಂದಾಗಿ ತನ್ನನ್ನು ಎತ್ತಿ ದೂರದಲ್ಲಿ ಕುಳ್ಳಿರಿಸಿಬಿಟ್ಟರು. ಇನ್ನು ಪರಕೀಯನಾದ ಮೂರನೆಯವನ ಸನ್ನಿಧಿಯಲ್ಲಿ ಏನಾಗದು? ಕಾಮಾಕ್ಷಿಯ ಹೃದಯದೃಷ್ಟಿ ವಿಸ್ತಾರವಾದಂತೆ ತನಗೂ ಅವಳಿಗೂ ಇರುವ ಅಂತರವು ಹೆಚ್ಚಾಗಬಾರದೆಂದೇನು?

ಇನ್ನೊಂದು ಸೋಜಿಗವಿದೆ. ನಾಗೇಶನು ಎಂತಹ ಹೀನವ್ಯಕ್ತಿಯಾಗಿದ್ದರೂ, ಅವನ ನಡತೆ ಊರಸುದ್ದಿಯಾಗಿದ್ದರೂ, ಹೆದರದೆ ಮುನ್ನಡೆದ ದಿಟ್ಟೆ, ಅವನಿಂದ ತನಗಾದ ಅಥವಾ ಆಯಿತೆಂದು ಮತ್ತೆ ಭಾವಿಸಿದ ಅಪಮರ್ಯಾದೆಯನ್ನು ಸ್ವಲ್ಪ ಕಾಲವಾದರೂ ಮುಚ್ಚಿಟ್ಟಳು. ತಾನು ಕೇಳಲಿಲ್ಲ; ಕೇಳುವ ಕುತೂಹಲವನ್ನು ಪ್ರಕಟಿಸಲಿಲ್ಲ. ಅವಳಾಗಿ ಹೇಳಿದಳೇಕೆ? ಹೇಳದಿರುತ್ತಿದ್ದರೆ ತಾನು ಅನ್ಯಥಾ ಕಲ್ಪನೆಮಾಡುತ್ತಿದ್ದೇನೆ? ಸ್ವಲ್ಪಕಾಲದ ರಹಸ್ಯವನ್ನು ಅನಂತರ ಬಿಚ್ಚಿಹೇಳುವುದರಲ್ಲಿ, ಎಲ್ಲರೂ ಕೇಳಿ ಓದಿ ನಕ್ಕ ಮೇಲೆ, ತನಗೆ ತಿಳಿಸುವುದರಲ್ಲೇನು ಜಾಣತನ? ಕಾಮಾಕ್ಷಿ ಕೆಟ್ಟವಳಲ್ಲ. ಇದುವರೆಗೆ ಅಂಥ ಸಂದೇಹದ ನೆರಳೂ ತನ್ನ ಮನಸ್ಸಿನ ಮೇಲೆ ಬೀಳಲಿಲ್ಲ. ಹೇಗಾದರೂ ತನ್ನ ಕಿವಿಗೆ ಆ ವಿಷಯವನ್ನು ಕೇಳಿಸಿದಳಲ್ಲ? ಏಕೆ? ಇದೊಂದು ಪ್ರಮೇಯ.

ಶ್ಯಾಮಣ್ಣನು ಶುದ್ಧಾತ್ಮ; ಇದಕ್ಕೆ ಪ್ರತ್ಯಕ್ಷ ಪ್ರಮಾಣ ಎನ್ನುವಂತಹ ಕಾರಣಗಳನ್ನು ಕೊಡಬಹುದು. ಹೀಗಿದ್ದರೂ ಲೋಕದ ಜನ ಏನೇನೋ

ಆಡುತ್ತಿತ್ತು. ಇದು ಕಾಮಿಗೂ ಗೊತ್ತು; ತನಗೂ ಗೊತ್ತು. ತನ್ನ ಮತ್ತು ಶ್ಯಾಮಣ್ಣನ ಪರಸ್ಪರ ವರ್ತನೆಯ ಕುರಿತು ಒಮ್ಮೆಯಾದರೂ ಏನನ್ನೂ ಕೇಳಿಸಲಿಲ್ಲವಲ್ಲ ಕಾಮಾಕ್ಷಿ. ಇದೂ ಒಂದು ಪ್ರಮೇಯ ಇದನ್ನು ಹೇಳದಂತೆ ಅದನ್ನೂ ಹೇಳದಿರುತ್ತಿದ್ದರೆ, ಪ್ರಭಾಕರನ ವಿವೇಕದಲ್ಲಿ ಪೂರ್ಣ ಭಕ್ತಿಯನ್ನಿಕೆ ಇಟ್ಟಿದ್ದಾಳೆಂದು ಊಹಿಸಬಹುದಾಗಿತ್ತು. ಈಗ? ಇದು ಅವಳ ನಡತೆಯನ್ನು ನಿಂದಿಸುವ ಮಾತಲ್ಲ. ಹಾರ್ದಿಕ ಸಂಬಂಧದ ಪರೀಕ್ಷೆ—ಅಷ್ಟೆ!

ಪ್ರಮೇಯಗಳನ್ನು ಹುಡುಕುತ್ತಾ ಹೋದರೆ ಸರ್ವತ್ರವೂ ಅವುಗಳೆ.... ಅವುಗಳಲ್ಲಿ ಅಸತ್ಯ—ಅಥವಾ ಸತ್ಯ ಇರಲೇ ಬೇಕಷ್ಟೆ. ಅಸತ್ಯವಿದ್ದರೆ ಅವುಗಳನ್ನು ಬೆಂಬತ್ತಿ ಹೋಗುವುದು ಹುಚ್ಚಾಟ. ಸತ್ಯವಿದ್ದರೆ ಅದು ಘೋರ! ಅದರಿಂದ ಹೃದಯವನ್ನು ಕುಟ್ಟಿ ಪುಡಿಮಾಡುವ ಭೀಕರ ಸಂಭವ ವಾಗುವುದು. ಆದುದರಿಂದ ಆ ವಿಚಾರವನ್ನು ಬಿಟ್ಟುಬಿಡುವುದರಲ್ಲಿಯೇ ಶ್ರೇಯಸ್ಸಲ್ಲವೆ?

ಪ್ರಭಾಕರನು ಆ ಶ್ರೇಯಸ್ಸನ್ನೇ ಸಾಧಿಸಿದ. ಕಾಮಾಕ್ಷಿಯ ಜೀವನ ದಿಂದ ಬೇರಾದ ಜೀವನ, ಅದರ ದೃಷ್ಟಿಪಥಕ್ಕೆ ಅಗೋಚರವಾಗಬಯಸಿತು. ನನ್ನಿಂದ ಏನಾಗುತ್ತದೆ? ನನ್ನ ದಾರಿ ಬೇರೆ. ಕೈಗೊಂಡ ಕೆಲಸ ಕೆಡ ದಂತೆ ಮಾಡೋಣ....ಮತ್ತೆ ತನ್ನ ಮೂಟೆ ತನ್ನ ಬೆನ್ನಿನ ಮೇಲೆ....ಈ ಬಗೆಯ ಮನೋಭಾವದಿಂದಲೆ ಪ್ರಭಾಕರ ತನ್ನ ಸಂಸ್ಥೆಯನ್ನು ನಾಗೇಶನ ಸೂತ್ರಧಾರಕ್ಕೆ ಒಪ್ಪಿಸಲು ಸಿದ್ಧನಾದುದು. ಕಾಮಾಕ್ಷಿ ವಿರೋಧಿಸುತ್ತಾಳೆ. ಅವಳಿಗೆ ವಿರೋಧಿಸುವ ಸ್ವಾತಂತ್ರ್ಯವಾದರೆ, ಅವಳಿಂದ ಭಿನ್ನನಾದ ತನಗೆ ಸಮ್ಮತಿಸುವ ಅಧಿಕಾರವಿಲ್ಲವೆ?

ಅವನು ಸಮ್ಮತಿಸಿದ್ದ. ಹೊಸ ಮುದ್ರಣ ಯಂತ್ರವಾಗಬೇಕು; ಮೊಳೆಗಳಾಗಬೇಕು; ಬೇರೆ ಉಪಕರಣಗಳಾಗಬೇಕು. ಇದೆಲ್ಲ ಇನ್ನು ನಾಲ್ಕಾರು ತಿಂಗಳಲ್ಲಿಯೇ ಸಿದ್ಧವಾಗಬೇಕು. ಪಾಲುಗಳು ಸಂಗ್ರಹ ವಾಗುತ್ತಿವೆ. ಕೇಶವಯ್ಯ ಹತ್ತು ಸಾವಿರ; ನಾಗೇಶನದೂ ಹತ್ತು ಸಾವಿರ.

ಇತರ ಸ್ನೇಹಿತರೂ ಧಾರಾಳ ಸಹಾಯಮಾಡುತ್ತಾರೆ. ಏಕೆ ಆಗಬಾರದು? ಕಾಮಾಕ್ಷಿ ಒಲ್ಲೆನೆಂದರೆ ತಾನೂ ಪ್ರತಿಧ್ವನಿಗೊಡಬೇಕೆ? ತಾನು ಒಲ್ಲೆನೆಂದಾಗ ಅವಳು ಪ್ರತಿಧ್ವನಿಕೊಟ್ಟಿದ್ದಾಳೆ? ಧ್ವನಿಗಳು ಅಂದೇ ಬೇರಾಗಿರಲು ಈಗ ಭಯವೇನು?

"ಒಮ್ಮೆ ಬೆಂಗಳೂರಿಗೆ ಪಯಣಮಾಡಿ ಬರುತ್ತೇನೆ; ನಮಗೆ ಬೇಕಾದುದು ದೊರೆಯುವುದೋ ವಿಚಾರಿಸುತ್ತೇನೆ—" ಎಂದು ಪ್ರಭಾಕರನು ನಾಗೇಶನಲ್ಲಿ ಹೇಳಿದ್ದ. "ಅವಶ್ಯ....ನೀವು ಕಂಡುದು, ನಿಮಗೆ ಬೇಕಾದುದು ನಿಮ್ಮದಾಗುವುದು" ಎಂದು ಅಭಿವಚನ ದೊರೆತಿತ್ತು.

ಹೊರಡುವ ಮುಂಚಿನ ದಿನದ ವರೆಗೆ ಕಾಮಾಕ್ಷಿಗದು ತಿಳಿದಿರಲಿಲ್ಲ. ಮನೆಯಲ್ಲಿರುವ ಜನಕ್ಕೂ ತಿಳಿದಿರಲಿಲ್ಲ. ಪ್ರಭಾಕರನಿಗೆ ಅವನ ಮನಸ್ಸೆ ಮನೆ—ಬೇರೆ ಮನೆಯಲ್ಲಿ?

ಮುಂಚಿನ ದಿನ ಬೆಳಿಗ್ಗೆ ಕಾಮಾಕ್ಷಿ ಕಚೇರಿಗೆ ಹೊರಡುವಾಗ ಸ್ವಲ್ಪ ವಿಲಂಭವಾಗಿತ್ತು. ಏನೋ ಸ್ವಲ್ಪ ಆಯಾಸ; ಬೇಸರು. ಪಕ್ಕದಲ್ಲಿ ವಿರಾಮಾಸನದ ಮೇಲೆ ಭಾರವಾಗಿ ಬಿದ್ದಿದ್ದಾಳೆ. ಪ್ರಭಾಕರನು ಕರೆದು "ಕಾಮಿ! ನಾಳೆಗೆ ಬೆಂಗಳೂರಿಗೆ ಹೋಗುತ್ತೇನೆ" ಎಂದ.

"ಬೆಂಗಳೂರಿಗೆ! ಎಂದು ಕಾಮಿ ಬೆಚ್ಚಿಬಿದ್ದಳು.

"ಹೌದು; ಬೆಂಗಳೂರಿಗೆ!"

"ಯಾವ ಕಾರ್ಯಾರ್ಥವಾಗಿ?"

"ಮುದ್ರಣದ ಉಪಕರಣಗಳನ್ನು ಹುಡುಕುವುದಕ್ಕಾಗಿ"

"ಇದ್ದುದರಲ್ಲಿ ಏನು ಲೋಪ ಬಂದಿದೆ"

"ಲೋಪ ಸರ್ವತ್ರ ಕಾಣುತ್ತಿದೆಯಲ್ಲ!"

"ಎಂತಹ ಮಾತಾಡುತ್ತೀರಿ?"

"ಮಾತು ಸ್ಪಷ್ಟ........ನಾಗೇಶನಿಗೆ ಮಾತುಕೊಟ್ಟಿದ್ದೇನೆ. ಪತ್ರಿಕೆ ಬಹುಜನರ ಅಧಿಕಾರಕ್ಕೆ ಒಳಪಡಿಸುವುದು. ಮುದ್ರಾಣಾಲಯ ಬೆಳೆಯುವುದು; ಬೆಳಗುವುದು."

"ಇದ್ದುದರಲ್ಲಿ ತೃಪ್ತಿಯಿರಬಾರದೇಕೆ?"

"ಬಾರದೇಕೆ? ಎಂಬ ಪ್ರಶ್ನೆಯಿಲ್ಲ; ಇರಬೇಕೇಕೆ ಎಂಬುದು ಪ್ರಶ್ನೆ. ಹ್ರಸ್ವಮೂರ್ತಿಯಾಗಿರುವ ಪ್ರಭಾಕರ ಮಹಾಮೂರ್ತಿಯಾಗಿ ಬೆಳೆದರೆ ನಿನಗೆ ಸಂತೋಷವೆ. ದುಃಖವೆ? ಚಿಕ್ಕ ಅಚ್ಚು ಕೂಟವಿದು ಬೃಹದ್ರೂಪ ಹೊಂದಿದರೆ—ನಮ್ಮ ಧ್ಯೇಯವಾಣಿ ಜಗಜ್ಜನಿತವಾಗುವಷ್ಟು ಭವ್ಯತೆಯನ್ನು ಈ ಪತ್ರಿಕೆ ಹೊಂದಿದರೆ, ತೃಪ್ತಿಯೋ ಅಸಂತುಷ್ಟಿಯೆ?"

ಕಾಮಾಕ್ಷಿಗೆ ಮಾತು ಬರಲಿಲ್ಲ. ಗಂಟಲು ಕಟ್ಟಿತು. ಕುರ್ಚಿಯಲ್ಲಿಯೇ ಕುಳಿತಿದ್ದು ಸೆರಗಿನಿಂದ ಮುಖವನ್ನು ಮುಸುಕಿ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಸುಶೀಲಮ್ಮ ಈ ಸಂಭಾಷಣೆಯನ್ನು ಕೇಳುತ್ತಾ ಕೈಸಾಲೆಯಲ್ಲಿ ನಿಂತಿದ್ದಳು. "ಏನಿದು ಅವತಾರ? ಹೋದಾತ ಹೋಗಿಯೇ ಬಿಡುತ್ತಾನೆಯೆ? ಬರುವುದೇ ಇಲ್ಲವೆ? ಅಥವಾ ಎಂದು ಬರುವಿರಿ? ಎಂಬ ಒಂದು ಮಾತಾದರೂ ಬಾಯಿಂದ ಬರಬೇಕೆ? ಅದರ ಬದಲು ಕಣ್ಣೀರು.... ಇಡೀ ಶರೀರದಲ್ಲಿ ಕಣ್ಣೀರು ಮಾತ್ರ ಇರುವುದೆಂದು ತೋರುತ್ತದೆ!" ಎಂದು ಮೆಣಸು ಸುರಿದಂತೆ ಕಾರಕಾರವಾಗಿ ಆಡಿದಳು.

ಕಾಮಾಕ್ಷಿಗೆ ಈ ಮಾತು ಕೇಳಿಸಿತೋ ಇಲ್ಲವೊ....ಆಕೆಯ ಶರೀರದಲ್ಲಿ ಕಣ್ಣೀರು ಮಾತ್ರ ಇರುವುದಲ್ಲ. ರಕ್ತವೂ ಇದೆ, ಮಾಂಸವೂ ಇದೆ, ಜೀವವೂ ಇದೆ. ಕಣ್ಣೀರಿನೊಂದಿಗೆ ಅವು ಹರಿದುಹೋಗಲಿಲ್ಲ; ಏಕೆಂದರೆ ಉತ್ತರಕೊಡಬೇಕಾದುದು ಅವಳಲ್ಲ.

ಶಾಂತಮ್ಮ ಹೊರಗೆ ಬಂದು "ಏಕೆ ಮಗು ಚಿಕ್ಕ ಮಕ್ಕಳಂತೆ ಅಳುತ್ತಿ....ಒಂದು ಪಿಂಡದೊಳಗೆ ಇನ್ನೊಂದು ಪಿಂಡವಿದೆಯಲ್ಲ, ದೇವರು ಒಲಿದರೆ ಬರುವ ತಿಂಗಳೊಳಗೆ ತಿಂಗಳು ತುಂಬುತ್ತದೆ. ಮಾಸೆ ಹೊರುವ ಕೂಸು ಇಳಿದುಬರುತ್ತದೆ. ಯಾಕೆ ದೇಹಕ್ಕೆ ಕಷ್ಟಕೊಡುತ್ತಿ? ಸೀಮಂತ ಆಗಬೇಕಿತ್ತು. ನಿಮಗೆ ಅವಕಾಶವಿರಲಿಲ್ಲ. ನಿನ್ನ ಬಯಕೆಗೆ ಬೇಕಾದುದನೆಲ್ಲ ಮಾಡಿಕೊಡಲಿಲ್ಲವೆ? ಏಳು; ಹಾಗೆ ಅಳುತ್ತಾ ಬೀಳಬೇಡ—" ಎಂದು ಲಲ್ಲೈಸತೊಡಗಿದಳು.

ಕಾಮಾಕ್ಷಿ ಸಾಂತಮ್ಮನ ಪೀಡೆಯಿಂದ ಎದ್ದಳು; ಎದ್ದು ನೋಡಿದಳು....ಆತನಿರಲಿಲ್ಲ. ತನ್ನವನೇ ಆದ ವ್ಯಕ್ತಿ ಅಲ್ಲಿರಲಿಲ್ಲ. ಈಗ ಹೊರಗೆ ಹೋದ; ನಾಳೆ ಊರುಬಿಟ್ಟು ಹೋಗುತ್ತಾನೆ. ಇದುವರೆಗೆ ಬಾಳಿನಲ್ಲಿ ಒಂದಾಗಿ ಸೇರಿದ್ದ. ತನ್ನ ತಪ್ಪಿನ ಕಾರಣದಿಂದ ಬಾಳಿನ ಹೊರಗೆ ಕಾಲಿಟ್ಟ. ಬಳಿಯಲ್ಲಾದರೂ ಇರಲಾರನೆ? ಏಕೆ ಇರಬಾರದು? ಏಕೆ ಇರಲಾರ? ತನ್ನ ತನುಮನೋಧನವೆಲ್ಲ ಅವನದಾಗಿಯೇ ಇತ್ತು. ಬೇಡವೆಂದು ಬಿಸುಡುತ್ತಾನೆ. ಅವನೊಡನೆ ಇನ್ನೊಂದು ತನ್ನಲ್ಲಿದೆ. ಅದನ್ನು ಆತನ ಪಾದಕ್ಕೊಪ್ಪಿಸಿದ ಮೇಲೆ ತಾನೆ ಬೀಳ್ಕೊಡುತ್ತಿದ್ದನಲ್ಲವೆ? ಅದುವರೆಗೆ ವಿಲಂಬಿಸಲಾರನೆ? ನೂರಾರು ದೇವರಲ್ಲಿ ಯಾರಾದರೊಬ್ಬನು ಎಲ್ಲಾದರೂ ಅಡಗಿ ನಿಂತಿದ್ದರೆ ಈಗ ಆವಿಷ್ಕರಿಸಿ ಆ ಸೊತ್ತನ್ನು ಅವನಿಗೊಪ್ಪಿಸುವ ವರೆಗೆ ಪ್ರಭಾಕರನನ್ನು ತಡೆಯಲಾರನೆ? ಕಾಮಾಕ್ಷಿಯ ಹೃದಯದಲ್ಲಿ ನರಕ ಜ್ವಾಲೆಗಳು ದಳ್ಳಿಸುತ್ತಿದ್ದುವು. ಆರಿಸುವುದಕ್ಕೆ ಬೇಕಾದ ನೀರು ಸಪ್ತಸಮುದ್ರಗಳಲ್ಲಿಯೂ ಇಲ್ಲ.

ಮರುದಿನ ಬೆಳಗ್ಗೆ ಐದು ಘಂಟೆಗೆ ಪ್ರಭಾಕರ ಹೊರಟ. "ಕಾಮಾಕ್ಷಿ! ಹೋಗುತ್ತೇನೆ! ನಿನ್ನ ಆತ್ಮದ ಗಾತ್ರಕ್ಕೆ ಒಪ್ಪುವ ಆತ್ಮವನ್ನು ಸಂಪಾದಿಸಿಕೊಂಡು ಬರುತ್ತೇನೆ!" ಎಂದು ಹಿಂದೆಮುಂದೆ ನೋಡದೆ ಇಳಿದುಹೋದ.

ದೀಪದ ನಸುಬೆಳಕಿನಲ್ಲಿ ತನ್ನ ದೈವದ ಇಡೀ ಶರೀರ ಕ್ಷಣಕಾಲ ಕಂಡಿತು. ಆ ಮುಖ—ಆಹಾವ—ಭಾವ—ಆನುಡಿ—ನೋಟ—ಎಲ್ಲ ತನ್ನದೇ ಆಗಿದ್ದ ತನ್ನದೇ ಒಂದು ರೂಪವನ್ನು ಶರೀರದಲ್ಲಿ ಒಳಕೊಂಡು ನಡೆದೇ ಹೋಯಿತು. ಕಾಮಾಕ್ಷಿ ನಿನ್ನ ರೂಪ–ನಿನ್ನ ಗುಣ ಇವೆರಡರಲ್ಲಿ ಅಭೇದವನ್ನು ಕಂಡಿದ್ದೇನೆ. ಒಂದು ಗೋಚರಿಸಿದರೆ ಇನ್ನೊಂದು ಗೋಚರಿಸುತ್ತದೆ. ಒಂದು ಕಾಣದಲ್ಲಿ ಇನ್ನೊಂದನ್ನು ಕಾಣೆನಲ್ಲ ಎಂದು ಸರಸದಲ್ಲಿ ಹೇಳುತ್ತಿದ್ದ ತನ್ನ ರೂಪವು ಕಣ್ಣುಮರೆಯಿಂದ ಮಾಸಿತು; ಇಂದು ಅವಳಿಗೆ ಆ ಅನುಭವವಾಯಿತು. ಆ ರೂಪ ಕಾಣಿಸದಾಯಿತು. ಇನ್ನು ಆ ಗುಣದರ್ಶನವೆಲ್ಲಿ? ಆ ಭವ್ಯ ಪೌರುಷ ಮೂರ್ತಿಯೆಲ್ಲಿ ?

ಛಾಯಾ ಶರೀರವೂ ಮಾಸಿತು. ಇನ್ನು ಎಂದಾದರೂ ತನ್ನವನಾಗುವನೆ? ಎಂಬ ನಿರೀಕ್ಷಣೆಯಿಂದ, ಹಾರೈಕೆಯಿಂದ, ಅವನ ದಾರಿಯಲ್ಲಿಯೇ ಕಣ್ಣು ನೆಟ್ಟಿತು; ಲಂಬಿಸಿತು; ಅವನ ಹಿಂದೆಯೇ ಮನಸ್ಸು ಓಡಿತು. ಹೃದಯಸ್ಪಂದನವು ಅವನ ಹೆಜ್ಜೆಗೆ ತಾಳಕೊಟ್ಟಿತು. ಎಂದು ಬರುವಿರಿ? ಎಂದು ಕೇಳಿರಲಿಲ್ಲ. "ಎಂದಾದರೂ" ಅಥವಾ "ಎಂದೂ ಇಲ್ಲ" ಎಂಬ ಉತ್ತರ ಬಂದಿದ್ದರೆ ಯಾವ ಕಿವಿಗಳಲ್ಲಿ ಕೇಳಬೇಕಿತ್ತು?

## ೩೨

ಆ ದಿನ ಹಾಸಿಗೆ ಹಿಡಿದ ಕಾಮಾಕ್ಷಿ ಮತ್ತೆ ಏಳಲಿಲ್ಲ. ವಾರಕ್ಕೆ ಎರಡು ಬಾರಿ ಮೂರ್ಛೆ; ಆಯಾಸ. ಹಗಲಿರುಳು ನರಳುತ್ತಿದ್ದಳು. ಸ್ಮೃತಿ ಬಂದಾಗ ಅವರೆಲ್ಲಿ? ಎಂದು ಕೇಳುತ್ತಿದ್ದಳು. "ಬೆಂಗಳೂರಿಗೆ!" ಎಂಬ ಸಾಂತಮ್ಮನ ಉತ್ತರ ಕೇಳಿದೊಡನೆ "ನನ್ನ ಋಣ ಸಂದಾಯವಾಗಲಿಲ್ಲ. ಒಂದು ಬಾಕಿ ಇದೆ; ಅದನ್ನು ಕೊಂಡುಹೋಗಬಾರದಿತ್ತೆ?" ಎನ್ನುವಳು.

ಒಮ್ಮೆ ಸಾಂತಮ್ಮ "ಋಣಋಣ ಎನ್ನುತ್ತೀಯಲ್ಲ ಮಗು! ನಿನಗೆ ಆತನು ಋಣಿಯಾಗಿದ್ದಾನೆ. ಅವನೇ ನಿನಗೆ ಕೊಡಬೇಕಾದ ಸಾಲ ಬಾಕಿಯಿದೆ"—ಎಂದಳು.

"ಅವರಿಗೇ ನಾನು ಕೊಡಬೇಕಾದುದು ಬಾಕಿಯಾಗಿದೆ; ಪ್ರಾಣವನ್ನು ಕೊಡಬೇಕಾಗಿತ್ತು; ಅದಕ್ಕೆ ಸೋಡಚೀಟು ಕೊಟ್ಟು ಬೇಡವೆಂದರು. ಬಸಿರಿನ ಬೇನೆಯೊಳಗೆ ಇನ್ನೊಂದು ಒಡವೆಯಿದೆ; ಅದನ್ನು ಬೇಡವೆಂದರೆ ಬಿಡುವೆನೇ!" ಎಂದು ಅಭಿಮಾನದಿಂದ ಹಲ್ಲು ಕಚ್ಚಿಕೇಳಿದಳು.

"ನಿನಗೇನು ಚಿತ್ತಭ್ರಮೆಯೇ ಮಗು! ಹೋಗಿ ಹೆಚ್ಚುದಿನಗಳಾಗಲಿಲ್ಲ. ಇಷ್ಟು ಗದ್ದಲಮಾಡುವುದೇಕೆ?"

"ದಿನಗಳು ಆಗುತ್ತವೆ—ಅಥವಾ ಆಗುವುದಿಲ್ಲ. ಹೋದವರು ಬರುವ ಸಂಭವ ತೋರುವುದಿಲ್ಲ. ಎದೆಯುಳ್ಳ ಗಂಡಿನಂತೆ ಹೋಗಲಿಲ್ಲ. ಸಿಕ್ಕಿಬಿದ್ದ ಕಳ್ಳ ತಪ್ಪಿಸುವಂತೆ ಓಡಿಬಿಟ್ಟರಲ್ಲ?"

"ಹೀಗೆಲ್ಲ ಏಕೆ ಯೋಚಿಸುತ್ತಿ ಮಗು....ನಿನ್ನ ಗಂಡ ಎಷ್ಟು ಕಲಿತು ಬುದ್ಧಿ ಕೆಡಿಸಿಕೊಂಡಿದ್ದರೂ, ನನ್ನ ಸುಶೀಲಮ್ಮನ ಮಾತನ್ನು ಮೀರುವನಲ್ಲ. ಒಮ್ಮೆ ಬರಲಿ! ಬುದ್ಧಿ ಹೇಳಿ ಸರಿ ಮಾಡುತ್ತೇನೆ."

"ಹೇಳಿ ತಿಳಿಸಬೇಕಾದ ಬುದ್ಧಿಯ ಅವಶ್ಯತೆಯೆ ಇಲ್ಲ ಅವರಿಗೆ. ಅದು ಸರಿಯಾಗಿಯೇ ಇದೆ. ಇಲ್ಲದುದು ಮನಸ್ಸು...."

"ಹೆಂಡತಿ ಗಂಡನನ್ನು ಹೀಗೂ ಜರೆದಾಡುವುದೇ ಮಗು....ಬೇಡ ಹೆಚ್ಚು ಮಾತಾಡಬೇಡ. ನಿತ್ರಾಣವಾಗುತ್ತದೆ. ಮತ್ತೆ ಸ್ಮೃತಿ ತಪ್ಪುತ್ತದೆ. ಸುಖವಾಗಿ ಹೆತ್ತು ಗಂಡುಮಗುವನ್ನು ಪಡೆಯುವವರೆಗೆ ಈ ಒಡಲು ತನ್ನದಲ್ಲ. ಅನ್ಯರು ನಿಕ್ಷೇಪವಾಗಿ ಇಟ್ಟ ಒಡವೆ ಎಂಬ ಭಾವದಿಂದ ಕಾಪಾಡಿಕೊ."

"ಅದು ವರೆಗೆ ಕಾಯುತ್ತಿದ್ದು ಮತ್ತೆ ಈ ಮಣ್ಣಿನಲ್ಲಿಯೇ ಬಿಸಾಟರೆ ಆಕ್ಷೇಪವಿಲ್ಲವಷ್ಟೆ?"

"ಆಡಿದ ಮಾತಿಗೆ ಹೀಗೂ ವಿಕಲ್ಪಾರ್ಥಮಾಡುವುದೇ ಕಾಮಿ? ನನ್ನ ಬಾಯಿಯಿಂದ ಇಂಥ ಮಾತು ಹೊರಟೀತೆ ಕಾಮಿ? ಗಂಡ ಹೆಂಡತಿ ಮಕ್ಕಳು ಮರಿಗಳಿಂದ ತುಂಬಿ ಸೌಭಾಗ್ಯದಿಂದ ತುಳುಕುತ್ತಿರುವ ಒಂದು ಮನೆಯನ್ನು ಕಣ್ಣಾರೆ ಕಂಡು ಸಾಯುತ್ತೇನೆಂದಲ್ಲವೆ ಈ ಜೀವವನ್ನು ಇದು ವರೆಗೆ ಹಿಡಿದುಕೊಂಡಿದ್ದೇನೆ!"

ಮುಂದಿನ ಮಾತುಗಳು ಕಾಮಾಕ್ಷಿಗೆ ಕೇಳಿರಲಿಲ್ಲ. ಯಥಾಪ್ರಕಾರ ಮೂರ್ಛೆ. ಅನುದಿನ ಬರುತ್ತಿದ್ದ ಡಾಕ್ಟರರು ನಾಗೇಶನೊಂದಿಗೆ ಇಂದೂ ಬಂದರು; ಅರ್ಧ ಘಂಟೆ ಪರೀಕ್ಷಿಸಿದರು. ಜೊತೆಯಲ್ಲಿ ಕೇಶವಯ್ಯನವರೂ ಇದ್ದರು. ಹುಬ್ಬು ಗಂಟಿಕ್ಕಿಕೊಂಡು "ಕೇಶವಯ್ಯನವರೇ ಈಕೆಗೆ ಹೃದಯಕ್ಕೇನೋ ದೊಡ್ಡ ಆವೇಗವಾಗಿದೆ. ಅದರ ಪರಿಣಾಮವಿದು. ಕುಂದುತ್ತಿದ್ದಾಳೆ; ಒಣಗುತ್ತಿದ್ದಾಳೆ; ಜಾಗ್ರತೆ....ಗರ್ಭಿಣಿಯಲ್ಲದಿರುತ್ತಿದ್ದರೆ ತೀಕ್ಷ್ಣವಾದ ಔಷಧಗಳನ್ನು ಕೊಡಬಹುದಾಗಿತ್ತು. ಈಗ ಮಾಡುವುದಕ್ಕೇನೂ ಇಲ್ಲ. ಶರೀರಕ್ಕೆ ಶಕ್ತಿಕೊಡುವ ಆಹಾರ—ಅನುಪಾನ—ಔಷಧ

ಗಳನ್ನು ಕೊಡುತ್ತಿದ್ದು ಆ ಕಾಲದಲ್ಲಿ ಕಷ್ಟವಾಗದಂತೆ ನೋಡಿಕೊಳ್ಳು ವುದು" ಎಂದರು.

ಕೇಶವಯ್ಯನಿಗೆ ಭಾವಾರ್ಥವಾಯಿತು. "ಪ್ರತಿಕಾರವೆ ಇಲ್ಲವೆ?" ಎಂದು ಪ್ರಶ್ನಿಸಿದ.

"ಯಾವುದೋ ಒಂದು ಕಾರಣದಿಂದ ಹೃದಯದಲ್ಲಿ ಪ್ರಚಂಡ ಕ್ಷೋಭೆಯಾಗಿದೆ. ಅವನ್ನು ಇನ್ನು ತಡೆಯಲಾಗುವುದೇ? ಇದು ವ್ಯಾಧಿ ಯಲ್ಲ; ಆಧಿ ಎಂದು ತೋರುತ್ತದೆ."

"ಗಂಡಹೆಂಡಿರೊಳಗೆ ಏನೋ ಕಚ್ಚಾಟ ಬಂದು ಹೀಗಾಯಿತು ಡಾಕ್ಟರರೆ....ವಿಷಯವೇನೆಂದು ಕೇಳಿದರೆ ಒಬ್ಬರೂ ಉತ್ತರಕೊಡುವುದಿಲ್ಲ. ನಾನೇನು ಮಾಡಬಹುದು ಡಾಕ್ಟರರೆ....ಈಗ ಆ ತಲೆಕೆಟ್ಟ ಹುಡುಗನಂತೂ ಎಲ್ಲಿಗೋ ಹೋಗಿದ್ದಾನೆ...."

"ಅವರನ್ನು ಬರಮಾಡಿ."

"ಹೇಗೆ ಸಾಧ್ಯ? ಕೈದುಮಾಡಿ ಕರೆತರುವುದಕ್ಕಾಗುವುದೇ?"

"ಸಾಂಸಾರಿಕ ವಿಷಯಗಳಿವು; ನಾವೇನು ಸೂಚನೆ ಕೊಡಬಹುದು ಕೇಶವಯ್ಯನವರೇ? ಒಂದು ಮಾತನ್ನು ತಿಳಿಸಿಬಿಡುತ್ತೇನೆ. ಇವಳ ಚಿತ್ತ ಕ್ಷೋಭೆಯನ್ನು ಕಡಿಮೆ ಮಾಡುವುದಕ್ಕೆ ಏನೆಲ್ಲ ಆಗಬೇಕೋ ಅದನ್ನೆಲ್ಲ ಮಾಡಿ....ಇದಕ್ಕಿಂತ ಹೆಚ್ಚಿನದು ನಮ್ಮ ಬಾಯಿಯಿಂದ ಬಂದೀತೆ? ಹಗ ಲಿರುಳು ಕಾವಲಾಗಿ ನಿಲ್ಲುವುದು ನನ್ನ ಕರ್ತವ್ಯ; ಅದನ್ನು ಮಾಡಿಯೇ ಬಿಡುತ್ತೇನೆ."

ಈ ಅಭಿಪ್ರಾಯವನ್ನು ಕೊಟ್ಟು ಡಾಕ್ಟರರೂ ನಾಗೇಶನೂ ಬೀಳ್ಕೊಂಡರು. ಕೇಶವಯ್ಯ ಪತ್ರಬರೆಯುವುದಂತೆ. ಬೆಂಗಳೂರಿಗೆ ಹೋಗಿ ಹದಿನೈದು ದಿನಗಳಾಗಿದ್ದರೂ ಮನೆಯವರು ಸತ್ತಿರುವರೋ ಬದುಕಿರು ವರೋ ಎಂದು ತಿಳಿವ ಗೊಡವೆಗೆ ಆತ ಹೋಗಿರಲಿಲ್ಲ. ತನ್ನ ವಿಳಾಸವನ್ನು ತಿಳಿಸಿರಲಿಲ್ಲ. ನಾಗೇಶನು ಏನೋ ಒಂದು ವಿಳಾಸವನ್ನು ಕೊಟ್ಟಿದ್ದ. ಅದಕ್ಕೆ ಪತ್ರಹಾಕಿದರೆ ಉತ್ತರ ಮಾತ್ರ ದೊರೆಯುವುದಿಲ್ಲ ಎಂದೂ ಹೇಳಿದ್ದ. ಇನ್ನು ಕಾಮಾಕ್ಷಿಯಿಂದಲೆ ಬರೆಯಿಸಬೇಕೆಂದು ತೋರಿತು. ಸ್ಮೃತಿ

ಬಂದ ಮೇಲೆ ಈ ಪ್ರಸ್ತಾಪವನ್ನು ಎತ್ತಿದುದೇ ತಡ; ಸ್ಮೃತಿ ತಪ್ಪಿ ಹೋಯಿತು. ಅಂತೂ ಪ್ರಭಾಕರನ ವಾರ್ತೆ ಕಿವಿಗೆ ಬಿದ್ದೊಡನೆ ಅದು ವಿಷದಂತೆ ಪ್ರವೇಶಿಸಿ ಮೂರ್ಛೆ ತಪ್ಪಿಸುತ್ತದೆ—ಎಂದು ತಿಳಿದ ಹಾಗಾಯಿತು.

೩೩

ನಾಗೇಶನ ಪಾರುಪತ್ಯಗಾರನಾಗಿ ಸೇರಿಕೊಂಡಿದ್ದ ಶ್ಯಾಮಣ್ಣನ ಹೃದಯವು ಹೇಗೆ ಕುದಿಯುತ್ತಿದ್ದಿತೆಂಬುದನ್ನು ಹೇಳಬರುವುದಿಲ್ಲ. ಆತನು ಇಂದು ಮತ್ತೊಮ್ಮೆ ಶುದ್ಧನಟನಾಗಿದ್ದ. ನಾಟಕ ಮಂಡಲಿಯಲ್ಲಿ ವೇಷ ಧಾರಣಮಾಡಿದ ಅನುಭವವು ಈಗ ಸಹಾಯಮಾಡಿತು. ಪ್ರಭಾಕರ ಕಾಮಾಕ್ಷಿಯರ ಸಾಂಸಾರಿಕ ಜೀವನಕ್ಕೂ ತನಗೂ ಸಂಬಂಧವಿಲ್ಲ ಎಂಬಂತೆ, ಕಾಮಾಕ್ಷಿಗೆ ವಿಪನ್ನಾವಸ್ಥೆ ಬಂದರೆ, ಆ ಸಮಾಚಾರವನ್ನು ಕೇಳಿದಾಗ ಒಂದು ನಿಟ್ಟುಸಿರು ಕರೆದರಾಯಿತು, ಎನ್ನುವ ಹಾಗೆ ವ್ಯವಹರಿಸಿದರೆ ಮಾತ್ರ ನಾಗೇಶನಿಂದ ಅನುಗ್ರಹಲಾಭವಾಗುವುದೆಂದು ಸಹಜವಾಗಿ ಊಹಿಸಿದ. ಆದರೆ ಹೃದಯವು ರೌರವ ಸಮಾನವಾಗಿತ್ತು. "ನನ್ನ ತಂಗಿಗೆ ಇಂಥ ಅವಸ್ಥೆ ಬರುವುದಕ್ಕೆ ನಾನು ಕಾರಣನಲ್ಲವೆ? ಆಕೆಯ ಆಯುಸ್ಸಿನ ಒಂದೊಂದೇ ದಿನಗಳನ್ನು ಕಡಿದು ಕಳೆಯುವುದಕ್ಕೆ ನಾನೂ ಸಹಾಯ ಮಾಡಿದ್ದೆನಲ್ಲವೆ? ಇಂತಹ ಹೀನ ಮನುಷ್ಯ ಇದ್ದರೇನು? ಸತ್ತರೇನು?" ಎಂದು ತನ್ನನ್ನು ತಾನೆ ಕೇಳುತ್ತಿದ್ದನು.

ಕಾಮಾಕ್ಷಿಯ ಈ ಲೋಕದ ನೀರು ಮುಗಿಯುತ್ತಾ ಬಂದಿರಬಹುದು; ಎಂದು ನಾಗೇಶನಿಗೆ ಬಲವಾದ ಭಯವಾಯಿತು. ಶ್ಯಾಮಣ್ಣನಂತೆ ಅವನು ಸಂಶಯಾತ್ಮನಲ್ಲ. ಆಗುವುದೆಲ್ಲ ಆಗಿ ಹೋಯಿತು. ಅದನ್ನು ಯೋಚಿಸಿ ಮಾಡುವುದೇನು? ಹಿಂದಿನದನ್ನೆಲ್ಲ ಮರೆತುಬಿಡೋಣ. ಡಾಕ್ಟರರ ಚಿಕಿತ್ಸೆಗೆ ಒಳಗಾಗದಂತೆ ತೋರುವ ಈ ವ್ಯಾಧಿಯನ್ನು ಪ್ರೇಮಮಯ ಹೃದಯ ಚಿಕಿತ್ಸೆಯಿಂದ ಸಾಧ್ಯವಾದರೆ ಹಿಮ್ಮೆಟ್ಟಿಸೋಣ; ಎಂದು ತೋರಿತು. ಆದರೆ ಅಂಥ ಹೃದಯವೆಲ್ಲಿ? ಅದೂ ಇಲ್ಲವಾಗಿದೆ!

ನಾಗೇಶನ ಎದೆ ಕರಗಿತೆಂದರೆ ಅವನಿಗೆ ಅಪಮಾನ. ಕಾಮಾಕ್ಷಿ ಹೇಗೂ ಬದುಕಬೇಕು. ಬದುಕುವುದಿದ್ದರೆ ಪ್ರಭಾಕರನನ್ನು ಬರಿಸಬೇಕು.

ಇದಕ್ಕೇನು ಉಪಾಯವೆಂದು ಹುಡುಕಲಾಗಿ ಒಂದೇ ಒಂದು ದಾರಿ—ಶ್ಯಾಮಣ್ಣನಿಂದ ಬರೆಯಿಸುವುದು; ನಿಜವಾದ ವಿಳಾಸಕ್ಕೆ ಬರೆಯಿಸುವುದು. ಕೇಶವಯ್ಯನವರಿಗೆ ಕೊಟ್ಟಿದ್ದ ವಿಳಾಸ ಎಲ್ಲಿಯದೊ ಯಾರದೊ ನಾಗೇಶನಿಗೂ ತಿಳಿದಿರಲಿಲ್ಲ.

"ಶ್ಯಾಮಣ್ಣ! ಹೇಗಾದರೂ ಆ ಹುಡುಗಿಯ ಜೀವವನ್ನುಳಿಸಬೇಕಾಯಿತಲ್ಲ!" ಎಂದು ನಾಗೇಶನು ಉದ್ಗರಿಸಿದ.

"ಹೌದು; ಸಾಧ್ಯವಾದರೆ ಉಳಿಸಲೇ ಬೇಕು!"

"ನಿನ್ನಿಂದ ಅದು ಸಾಧ್ಯ."

"ಸಾಧ್ಯವಾದರೆ ಅವಶ್ಯವಾಗಿ ಉಳಿಸುತ್ತೇನೆ."

"ಕೂಡಲೇ ಹೊರಟುಬರಬೇಕೆಂದು ನೀನೇ ಬರೆಯಬೇಕು."

"ತಂತಿ ಕೊಡಬಾರದೇಕೆ?"

"ಅದನ್ನಾತ ನಂಬಲಾರ; ನಿನ್ನ ಸ್ವಹಸ್ತಾಕ್ಷರವನ್ನು ಕಾಣದಿದ್ದರೆ ಯಾವುದನ್ನೂ ನಂಬಲಾರ."

"ಏನೆಂದು ಬರೆಯಲಿ?"

"ಹೇಗೆ ಬೇಕೋ ಹಾಗೆ ಬರೆ. ಆಕೆಯ ಶೋಚನೀಯ ಸ್ಥಿತಿಯನ್ನು ವಿವರಿಸು; ವರ್ಣಿಸು; ಭಾವನಾತ್ಮಕವಾಗಿ ಬರೆ; ಆಕೆಯ ಕುರಿತಾದ ಪ್ರೇಮದ ಒಂದು ಅಣು ಹೃದಯದ ಯಾವ ಮೂಲೆಯಲ್ಲಾದರೂ ಅಂಟಿಕೊಂಡಿದ್ದರೆ, ಅದು ಹೇಗಾದರೂ ಮೇಲೆ ಬರುವ ರೀತಿಯಲ್ಲಿ ಬೇಕಾದ ಭಾಷೆಯಲ್ಲಿ ಬರೆ!"

"ಆಗಲಿ; ಬರೆಯುತ್ತೇನೆ."

ನಾಗೇಶನು ಸರಿಯಾದ ವಿಳಾಸವನ್ನು ಕೊಟ್ಟು "ಶ್ಯಾಮಣ್ಣ! ವಿಲಂಬಿಸುವ ಸಮಯವಿಲ್ಲ ನೋಡು!" ಎಂದು ಎಚ್ಚರಕೊಟ್ಟು ಮಾಯವಾದ!

ಶ್ಯಾಮಣ್ಣನ ಮುಖ ಬಿದ್ದುಹೋಯಿತು. ಪ್ರಭಾಕರ ಪ್ರಪಂಚವನ್ನೆ ನಂಬಲಾರ; ತನ್ನನ್ನು ಮಾತ್ರ ನಂಬುತ್ತಾನೆ. ನಾಗೇಶನ ಈ ಮಾತಿ

ನಲ್ಲಿ ಮುಳ್ಳಿದೆಯೆ? ಮುಳ್ಳಿದ್ದರೇನು? ಹಾಲಾಹಲವೆ ಇದ್ದರೇನು? ಪತ್ರ ಬರೆಯಲೇ ಬೇಕು. ಅವನು ಅದಕ್ಕೆ ಬೆಲೆಕೊಡುತ್ತಾನೊ ಇಲ್ಲವೊ.... ಕೊಟ್ಟನೆಂದರೆ ಒಣಗಿ ಸಾಯಲಾದ ಎಳೆಯ ಸಸಿಯೊಂದರ ಬುಡಕ್ಕೆ ನೀರೆರೆದ ಪುಣ್ಯ! ಬೆಲೆ ಕೊಡದಿದ್ದರೇನು? ಕಸದ ಬುಟ್ಟಿಯಿಂದ ಬಚ್ಚಲಿನ ಒಲೆಗೆ ಪ್ರಯಾಣಮಾಡುವುದು.

ಶ್ಯಾಮಣ್ಣನ ಸುಮಾರು ಅರ್ಧ ಶತಮಾನದ ಆಯುಸ್ಸಿನಲ್ಲಿ ಕಪಟಕ್ಕೆ ಬಲಿಯಾದ ಅನುಭವವೇ ಜಾಸ್ತಿ. ಇಂದು ಅವನಿಗೂ ಕಪಟ ಸ್ವಭಾವ ತಗಲಿದಂತಿದೆ. ನಾಗೇಶ ನಂಬಿಕೆಟ್ಟ. ಶ್ಯಾಮಣ್ಣ ನಂಬಿಗೆದ್ದ. ಕಪಟ ಎಂದೆಂದಿಗೂ ಕಪಟವೆ. ಆದರೆ ಔಷಧಕ್ಕಾಗಿ ಪ್ರಯೋಗಿಸಿದ ಶಂಖ ಪಾಷಾಣ ಅಮೃತ ಸಮಾನವಾಗುವಂತೆ ಅವನ ಠಕ್ಕು ಧರ್ಮವೆ ಅಲ್ಲವೆ? ಇಂತಹ ಚಿಕ್ಕ ವಿಷಯಗಳನ್ನು ಚರ್ಚಿಸುತ್ತಾ ಜಟಿಲ ವಿಚಾರಗಳಲ್ಲಿ ಸಿಕ್ಕಿ ತೊಳಲುವ ಸ್ವಭಾವವುಳ್ಳ ಶ್ಯಾಮಣ್ಣ ಆ ದಿನ "ನನ್ನ ಜೀವನ ಸಾರ್ಥಕವಾಯಿತು. ನನ್ನ ದೇವರು ಈ ಪೀಠದಲ್ಲಿ ಎದ್ದು ಕುಳಿತಿದ್ದಾನೆ" ಎಂದು ಆತ್ಮಗತವಾಗಿ ಉದ್ಗರಿಸಿದ!

## ೩೪

ಪ್ರಭಾಕರನು ಬೆಂಗಳೂರಿಗೆ ಹೊರಟಾಗ ಅವನಲ್ಲಿ ಏನಾದರೊಂದು ಉದ್ದೇಶವಿದ್ದಿತೆಂದು ಸರ್ವಥಾ ಹೇಳಬರುವುದಿಲ್ಲ. ಏನಾದರೂ ಇದ್ದರೆ ಒಂದೇ ಒಂದು—ಕಾಮಾಕ್ಷಿಯ ಒಡನಾಟವನ್ನು ಬಿಡುವುದು! ಅದನ್ನು ಬಿಟ್ಟುದಾಯಿತು. ಪ್ರಭಾಕರನಿಂದು ಸ್ವತಂತ್ರನಾಗಿದ್ದಾನೆ! ಹೆಂಡತಿ—ಅಥವಾ ಕಾಮಾಕ್ಷಿ ಎಂಬ ಗಂಡಾಂತರ ತನ್ನ ಸಮೀಪದಲ್ಲಿ ಇಲ್ಲ. ದೂರವಾಗಿದೆ. ಹೀಗಿರುವುದರಿಂದ ವಿಚಾರಕ್ಕೆ ಸ್ವತಂತ್ರ ಚೋದನೆ ಸಿಕ್ಕಿದೆ. ನಿರ್ವಿಕಾರವಾಗಿ ಆಲೋಚಿಸುವುದಕ್ಕೆ ಪ್ರಯತ್ನಿಸುತ್ತಿದ್ದಾನೆ. ವಿವೇಕವು ಕುಂಟುಗಾಲಿಕ್ಕುವುದೂ ಕಂಡುಬರುತ್ತದೆ. ಅಂತೂ ತಾನೇ ತಾನಾಗಿರಬೇಕೆಂದು ಬಯಸಿದವನಿಗೆ ಆತ್ಮಶಕ್ತಿಯಲ್ಲಿ ಸಂಪೂರ್ಣ

ವಿಶ್ವಾಸವುಂಟಾಯಿತೆಂದು ಹೇಳಬರುವುದಿಲ್ಲ. ಕಾಮಾಕ್ಷಿಯ — ತನ್ನ, ದಾಂಪತ್ಯಚಿತ್ರ, ಕಾಮಾಕ್ಷಿಯ ಬಹಿರಂಗ ಜೀವನ, ಡಾ। ನಾಗೇಶ, ಶ್ಯಾಮಣ್ಣ.....ಇವರ ವ್ಯಕ್ತಿಸ್ವಭಾವ, ಮೊದಲಾದುವನ್ನು ಒಟ್ಟೊಟ್ಟಾಗಿ, ಬೇರೆಬೇರೆಯಾಗಿ ಪರಿಶೀಲಿಸಿದಾಗ, ತನ್ನೊಂದು ಜೀವನವು ಯಾವು ದಕ್ಕೂ ಸೇರದೆ, ಯಾವ ವೈಶಿಷ್ಟ್ಯವೂ ಇಲ್ಲದೆ, ಹುಟ್ಟಿ ಸಾಯುವ ಕೋಟಿ ಸಂಖ್ಯೆಯ ಮಾನವ ಜೀವಿತದಂತೆ ಸಾಮಾನ್ಯ— ಅತಿ ಸಾಮಾನ್ಯ! ತಾನು ಕಾಮಿಗೆ ತಕ್ಕವರನಾಗಿರಲಿಲ್ಲ. ಕಾಮಿಯ ಜೀವನದೊಳಗೆ ತಾನು ಕಾಲಿಟ್ಟುದು ತಪ್ಪು; ಆಕೆದಿಟ್ಟೆ; ಸಾಹಸ ಪ್ರಿಯೆ; ಧೈರ್ಯಶಾಲಿನಿ. ಇದಿ ಲೋಕವನ್ನು ಇದಿರಿಸಬಲ್ಲ ಗಂಡೆದೆಯುವಳು. ಈ ಗುಣದಲ್ಲಿ ಆಕೆಗೂ ಭಾಮೆಗೂ ವ್ಯತ್ಯಾಸವೇನೂ ಇಲ್ಲ. ಭಾಮೆ ಮಾತ್ರ ಎಲ್ಲಿಯೋ ಹೇಗೊ ತಪ್ಪಿಬಿದ್ದಳು. ಆ ಮೇಲೆ ಅವಳ ಸ್ವಭಾವವೇ ಬೇರೆ ಬಗೆಯಲ್ಲಿ ವಿಕಾಸ ಹೊಂದಿತು. ಕಾಮಿಯನ್ನು ಅಂತಹ ಸಂದರ್ಭ ಸಂನಿವೇಶಗಳು ಇದಿರಿಸಿ ದ್ದರೆ ಏನಾಗುತ್ತಿದ್ದಳೇನೋ ಯಾರು ಬಲ್ಲರು? ಭಾಮೆಯಾದರೂ ಕಾಮಿಯಂತೆ ಕುಲೀನಳಾಗಿ ಹುಟ್ಟಿ ಆಚಾರ ಸಂಪನ್ನರ ಮನೆಮಗಳಾಗಿ ಬೆಳೆದು, ಅನುಕೂಲ ದಾಂಪತ್ಯ ಸುಖವನ್ನು ಅಲ್ಪಕಾಲವಾದರೂ ಅನು ಭವಿಸಿದ್ದರೆ, ಕಾಮಿಯ ಗಂಡನಂತಹ, ಒಂದು ಗಂಡು ಮೃಗದ ಹಿಂದೆ ತಿರುಗುವಂತಾಗುತ್ತಿದ್ದರೆ, ಕಾಮಿಯಂತೆಯೋ ವ್ಯವಹರಿಸುತ್ತಿದ್ದಳೇನೋ ಯಾರು ಬಲ್ಲರು? ಹಾಗಿದ್ದರೆ, ಹೀಗಾಗಿದ್ದರೆ ಏನಾಗುತ್ತಿತ್ತು? ಎಂಬ ಊಹೆಗಳ ರಾಜ್ಯವಿದು.

ವಸ್ತುಸ್ಥಿತಿ ಮಾತ್ರ ಹಾಗಲ್ಲ. ಕಾಮಾಕ್ಷಿಯ ವ್ಯವಹಾರ ಕ್ರಮ ದಲ್ಲಿ ದೋಷಾರೋಪಣೆ ಮಾಡಬಹುದಾದ ಪ್ರಬಲ ಲೋಪಾತಿಕ್ರಮ ಗಳು ಪ್ರಭಾಕರನ ದೃಷ್ಟಿಗೆ ಬೀಳಲಿಲ್ಲ. ಇಲ್ಲಿಯೂ ಅವನಿಗೆ ಆತ್ಮದಲ್ಲಿ ಅವಿಶ್ವಾಸವೆ. ದೃಷ್ಟಿ—ದೃಷ್ಟಿ ಎಂದು ಜನರು ಹೇಳುತ್ತಾರಲ್ಲ? ಇದರ ಪರಿಧಿ ಅತಿಸಂಕುಚಿತವಲ್ಲವೆ? ಒಬ್ಬನಿಗೆ ಕಂಡುದು ಇನ್ನೊಬ್ಬನಿಗೆ ಕಾಣದಿರಬಹುದು; ಅಥವಾ ಅವನು ಹೆಚ್ಚನ್ನು ಕಂಡಿರಬಹುದು; ಕಂಡ ವಸ್ತುಗಳ ಗಾತ್ರಪ್ರಮಾಣಗಳಲ್ಲಿ ಅಂತರವಿರಬಹುದು; ಅನೇಕ ವೇಳೆ

ದೃಷ್ಟಿಯಲ್ಲಿ ಭ್ರಮೆಯೂ ಬೆರಸಿರಬಹುದು. ಹೀಗಿರಲಾಗಿ ಹೋಲಿಕೆ ಗಳಿಂದ ಪ್ರಯೋಜನವಾಗುವ ಹಾಗಿಲ್ಲ. ಕಾಮಾಕ್ಷಿಯನ್ನು ಹಲವರು ಹಿಂದಿನಿಂದ ನಿಂದಿಸುತ್ತಾರೆ; ಹಲವರು ಕನಿಕರ ಪಡುತ್ತಾರೆ; ಕೆಲವರು ಅಪಹಾಸ್ಯದ ಸಂತೋಷದಲ್ಲಿ ಹಿಗ್ಗಲೂಬಹುದು. ಈ ಎಲ್ಲ ಭಾವಗಳಿಗೆ ಕಾರಣವುಂಟೆಂದೂ ಅಲ್ಲ; ಇಲ್ಲದಿದ್ದುದನ್ನು ತಾನು ಭ್ರಮೆಯಿಂದ ಕಲ್ಪಿಸ ಬಾರದೆಂದೂ ಅಲ್ಲ. ಹೀಗಿರುತ್ತಾ ಕಾಮಾಕ್ಷಿಯೆಂದರೆ ಒಂದು ಸ್ತ್ರೀ ವ್ಯಕ್ತಿ; ಅವಳ ಹೃದಯ ಸಂಶೋಧನೆ ಆಗಬೇಕಾದಷ್ಟು ಆಗಲಿಲ್ಲ....ಎಂದು ಸ್ವಲ್ಪಕಾಲ ತಟಸ್ಥವಾಗಿ ಜಡವಸ್ತುವಾಗಿ ಕುಳಿತುಬಿಡೋಣವೆ? ಎಂದು ಯೋಚನೆ ಬಂತು.

ಹೆಚ್ಚುಕಾಲ ಇದೂ ಸಾಧ್ಯವಾಗಲಿಲ್ಲ. ಹೃದಯವೇದನೆಯ ಮಧ್ಯ ದಲ್ಲಿ ಅಂದಿನ ಆ ಮುಗ್ಧೆ ಕಾಮಾಕ್ಷಿಯ ಪ್ರಸನ್ನ ಮುಖ ಗೋಚರ ವಾಗುತ್ತಿತ್ತು. ಆಕೆಯ ಅಕೃತ್ರಿಮ ಮಂದಹಾಸವು ಹೃದಯದ ಎಡಕ್ಕೆ ಬಲಕ್ಕೆ, ಒಳಗೆ, ಹೊರಗೆ, ಸರ್ವತ್ರ ಸದಾಕಾಲ ಮಿಂಚುತ್ತಿತ್ತು ಅದನ್ನು ಕಾಣದಿರುವುದಕ್ಕೆ ಪ್ರಯತ್ನಿಸುತ್ತಾನೆ. ಸಾಧ್ಯವಾಗುವುದಿಲ್ಲ. ಕಂಡ ಮೇಲೆ ಕಾಣದಿರಲಾಗುವುದಿಲ್ಲ. ಆಕೆಯ ಹತ್ತು ವರ್ಷದ ಸಹವಾಸದ ಪ್ರತಿನಿಮಿಷದ ಆಗುಹೋಗುಗಳನ್ನು ಪುನರ್ವಿಮರ್ಶೆ ಮಾಡಿ ತೀರ್ಮಾನಿಸ ಬಹುದಾಗಿದ್ದರೂ, ಇಂದಿಗೆ ಒಂದು ವರ್ಷದಿಂದ ಹಿಂದಿನ ವೃತ್ತಗಳನ್ನೆಲ್ಲ ಆಧಾರವಾಗಿ ಇಟ್ಟುಕೊಳ್ಳುವುದು ಅಸಾಧ್ಯ. ಅಂದು ಆಕೆ ಪ್ರಭಾ ಕರನಿಂದ ಭಿನ್ನಳಾಗಿದ್ದಳು. ಎಂದರೆ ಆಕೆಯಲ್ಲಿ ಆಕ್ಷೇಪಾರ್ಹ ಗುಣ ವೇನಾದರೂ ಇದ್ದರೆ, ಅದು ತನ್ನದರ ಪ್ರತಿಫಲನವಲ್ಲದೆ ಮತ್ತೇನು? ಒಂದು ವರ್ಷದಿಂದಿತ್ತ ಏನೋ ಆಯಿತು; ಏನೋ ಹೋಯಿತು. ಈ ಅವಧಿಯಲ್ಲಿಯೂ ಕಾಮಾಕ್ಷಿ ಸ್ವಭಾವಾಂತರ ಹೊಂದಿರುವಳೇ? ಇಲ್ಲ. ವ್ಯತ್ಯಾಸವಿದ್ದರೆ ತನ್ನ ಗುಣದಲ್ಲಿ; ತನ್ನ ಬುದ್ಧಿಯಲ್ಲಿ. ಹಿಂದಿನ ಕಾಲದಲ್ಲಿ ಗಂಡಹೆಂಡಿರು ಅನ್ಯೋನ್ಯ ಮನಸ್ಕರಾಗಿದ್ದಾಗ, ಯಾವ ಒಡನಾಟವೋ ಸಲಿಗೆಯೋ ಸರಸವೋ ಅದೆಲ್ಲ ಈ ಅವಧಿಯಲ್ಲಿಯೂ ಇತ್ತು. ಮತ್ತೇಕೆ ಕಾಮಾಕ್ಷಿ ತನ್ನವಳಾಗಿರದೆ, ಒಬ್ಬಳು ಸ್ತ್ರೀವ್ಯಕ್ತಿ ಮಾತ್ರ ಆಗಿರುವಳು?

ಅಕೆಯ ಸವಿಕನಸುಗಳನ್ನು ಮನಸ್ಸಿನಿಂದ ಉಜ್ಜಿ ಒರಸಿಬಿಡುವುದಕ್ಕೆ ಆಗಲಿಲ್ಲ. ಒರಸದೆ ಇರುವುದೂ ಕಷ್ಟವಾಯಿತು. ಅವಳ ನೆನಪು ಬಂದೊಡನೆಯೇ ಏನೋ ಒಂದು ಭಾವನೆ......ಅದೂ ನಿಜವಲ್ಲವೆಂಬ ಚಿಂತೆ ಮನಸ್ಸನ್ನು ಪೀಡಿಸಿತು.

ಮುದ್ರಣ ಯಂತ್ರವನ್ನಲ್ಲ; ತನ್ನನ್ನು ತಾನೇ ಹುಡುಕುವುದಕ್ಕಾಗಿ ಪ್ರಭಾಕರನು ಊರನ್ನು ಬಿಟ್ಟದ್ದು! ಆ ಪ್ರಯತ್ನದಲ್ಲಿ ಅತ್ಯಲ್ಪ ಯಶಸ್ಸು ಸಿಕ್ಕಿದಾಗ ಈ ಬಗೆಯ ಅರಿವಾಯಿತು: ಕೇಶವಯ್ಯ, ಸುಶೀಲಮ್ಮ, ಶಾಂತಮ್ಮ......ಇಂತಹ ವ್ಯಕ್ತಿಗಳಿಗೆ ಸುಧಾರಿತ ಪ್ರಪಂಚದಲ್ಲಿ ಸ್ಥಾನವಿಲ್ಲ. ಜನಗಣನೆಯಲ್ಲಿ ಮಾತ್ರ ಇವರಿಗೆ ಸ್ಥಾನ. ಹೊರಗಿನ ಜನ ತಮ್ಮ ಸುಖವನ್ನು ಕಂಡು ಮತ್ಸರಿಸಬಹುದು. ದುಃಖದಲ್ಲಿ ಹಿಗ್ಗಬಹುದು. ಶ್ಯಾಮಣ್ಣ ಪರಿಶುದ್ಧ ಜೀವಿ. ಕಹಿನೋವುಗಳನ್ನು ಸವಿ ಎಂದು ಸೇವಿಸಬಲ್ಲ ಸ್ಥಿರಚಿತ್ತನು. ನಾಗೇಶನೆಂದರೆ ಬಾಹ್ಯದ ಸಭ್ಯ. ಅವನಿಗೆ ಅವನೇ ವ್ಯಾಖ್ಯಾನ ಬರೆದಿದ್ದಾನೆ; ಒಳಗೊಂದು ವ್ಯಕ್ತಿಯಿದೆ; ಹೊರಗೊಂದು ಇದೆ—ಎಂದು. ಕಾಮಾಕ್ಷಿಯೂ ತಾನೂ ಅಥವಾ ತಾನಾದರೂ ಒಂದು ಬಗೆಯ ಅವಿವೇಕಿ. ಮಿಸ್ ಭಾಮೆಯಲ್ಲಿ ರೂಕ್ಷಗುಣವಿದೆ; ಅದೇ ವೇಳೆಯಲ್ಲಿ ಕ್ಷುದ್ರ ವಿಷಯಗಳ ವಿಚಾರ ಸಂಕಟಗಳಲ್ಲಿ ಸಿಲುಕದ, ಧೀರವೆನ್ನಬಹುದಾದ ಗುಣಗಳೂ ಇವೆ. ಅವಳ ಧೀರ ಗುಣಗಳು ಕಾಮಾಕ್ಷಿಯಲ್ಲಾಗಲಿ, ತನ್ನಲ್ಲಾಗಲಿ, ಇರುತ್ತಿದ್ದರೆ, ಇಂತಹ ಅವಸ್ಥೆಯಾಗುತ್ತಿರಲಿಲ್ಲ. ಛಾಯರೂಪಗಳನ್ನು ನೋಡಿ ತಾಪಿಬ್ಬರೂ ತತ್ತರಿಸುತ್ತಿರಲಿಲ್ಲ.

ಈ ಹೃದಯ ಗ್ರಂಥಿಯನ್ನು ಹೀಗೆಯೇ ಬಿಡಬಾರದು; ತನ್ನ ಹೃದಯ ಪ್ರಾಂತದ ಒಳಗಿನ ಠಾವಿನಲ್ಲಿಯೇ ಇದು ವರೆಗೆ ಕುಳಿತಿದ್ದ, ತನ್ನವಳೆ ಎನಿಸಿದ್ದ, ಆ ಹೆಣ್ಣು ಜೀವವನ್ನು ಮುಖವೆತ್ತಿ ನೋಡಬಾರದೇಕೆ? ಎದೆ ಬಿಚ್ಚಿ ಕೇಳಬಾರದೇಕೆ? ಸಂಶಯ ರಾಜ್ಯದಲ್ಲಿ ತೊಳಲಾಡಿ ಎಷ್ಟುಕಾಲ ಬದುಕಿಕೊಂಡಿರಬಹುದು? ಬದುಕುವುದೇಕೆ? ಎಂದು ಕೇಳಬೇಕಾಗಿಲ್ಲ. ಬದುಕದಿರುವುದು ಅಸಾಧ್ಯ; ಎಂದಾದ ಮೇಲೆ, ತನ್ನ ಲೋಕಕ್ಕೆ ಪ್ರಳ

ಯುವೇ ಬರಲಿ; ಧೀರ ಪುರುಷನಾಗಿ ಕಾಮಾಕ್ಷಿಯನ್ನು ಎದುರಿಸಿ "ಹೆಣ್ಣೆ! ನಿನ್ನ ಹೃದಯದಲ್ಲಿ ಏನೆಲ್ಲ ಇದೆ? ಬಿಚ್ಚಿತೋರು!" ಎಂದೇಕೆ ಕೇಳ ಬಾರದು? ಇದಲ್ಲದೆ ಬೇರೆ ಉಪಾಯವೇ ಇರಲಿಲ್ಲ. ಅವಳು ತನ್ನ ಹೃದಯವನ್ನು ಬಿಚ್ಚಿತೋರಿಸುವಾಗ, ತನ್ನದನ್ನು ತಾನೂ ತೋರಿಸಬೇಕಾ ದೀತು. ಆಗ ಪ್ರಳಯವಾಗಲೂ ಬಹುದು; ನೂತನ ಸೃಷ್ಟಿಯಾಗಲೂ ಬಹುದು. ಏನಾದರೂ ನಷ್ಟವಿಲ್ಲ. ಕೆಲದಿನಗಳ ಏಕಾಂತವಾಸದ ಫಲ ವಾಗಿ, ಕುಸಿದು ಹೋಗಿದ್ದ ಅವನ ಮನಸ್ಸು ಎದ್ದು ಕಾಲೂರಿ ನಿಲ್ಲಲು ತವಕ ಪಡುತ್ತಿತ್ತು.

೩೫

ಹೈದರಾಬಾದಿನಲ್ಲಿ ಜರಗಲಿದ್ದ ಮಹಿಳಾ ಸಮ್ಮೇಲನಕ್ಕಾಗಿ ಹೋಗ ಲಿದ್ದ ಶ್ರೀಮತಿ ಭಾಮೆ ಒಂದು ದಿನದ ಮಟ್ಟಿಗೆ ಬೆಂಗಳೂರಿನಲ್ಲಿ ಇಳಿಯ ಬೇಕಾಗಿತ್ತು; ಜರೂರಿನ ಕೆಲಸ! ಅದನ್ನು ಮುಗಿಸಿ, ಪ್ರಭಾಕರನು ಉಳಿದು ಕೊಂಡಿದ್ದ ಭವನಕ್ಕೇ ಬಂದಳು.

ಭಾಮೆಗೆ ಆಶ್ಚರ್ಯವಾಯಿತು; ನೋಡಿದರೆ ಫಕ್ಕನೆ ಗುರುತುಸಿಕ ದಷ್ಟು ಪ್ರಭಾಕರ ಇಳಿದು ಹೋಗಿದ್ದಾನೆ. "ಏನು ಪ್ರಭಾಕರರಾಯರೆ? ಇಲ್ಲಿ ನಿಮ್ಮನ್ನು ಕಾಣುವುದಾಯಿತೆ? ಮಂಗಳೂರನ್ನು ಬಿಟ್ಟು ಬಂದ ಮೇಲೆ ಇದೇ ಮೊದಲ ಸಂದರ್ಶನ!" ಎಂದು ಮಾತಿಗೆ ತೊಡಗಿ, "ಮಿಸ್ಟರ್ ಪ್ರಭಾಕರ್! ನನ್ನ ಕೋಣೆಗೆ ಬರುವಿರಾ? ಒಂದು ವಿಷಯವಾಗಿ ಮಾತಾ ಡಬೇಕಾಗಿತ್ತು. ಪತ್ರ ಬರೆಯಬೇಕೆಂದಿದ್ದೆ. ಪತ್ರದಿಂದ ಆಗುವ ಕೆಲಸ ವಿದಲ್ಲ; ಎಂದು ಬರೆಯಲಿಲ್ಲ. ನಿಮ್ಮ ಸಮಯದ ಹತ್ತು ನಿಮಿಷ ಗಳನ್ನು ನನಗೆ ಕೊಡುವಿರಾ?" ಎಂದು ಕೇಳಿದಳು. "ಓಹೋ! ಅದಕ್ಕೆ ಏನು?" ಎಂದು ಪ್ರಭಾಕರ ಅವಳ ಹಿಂದೆಯೇ ನಡೆದ.

ಭವನದ ಮೂರನೆಯ ನೆಲೆಯಲ್ಲಿ ಅಚ್ಚು ಕಟ್ಟಿನ ಒಂದೇ ಒಂದು ಕೋಣೆಯಿದೆ. ಸೌಕರ್ಯಕ್ಕೆ ಬೇಕಾದ ಸಕಲಸನ್ನಾಹಗಳೂ ಅಲ್ಲಿವೆ. ಭಾಮೆ ಅಲ್ಲಿಗೆ ಪ್ರಭಾಕರನನ್ನು ಕರೆದೊಯಿದು, ತನ್ನ ಮಂಚದ ಹಾಸಿ

ಗೆಯ ಮೇಲೆ ದಢ್ಡನೆ ಕುಳಿತುಕೊಂಡಳು. ಮತ್ತೆ ಕುರ್ಚಿಯೊಂದನ್ನು ಪ್ರಭಾಕರನಿಗೆ ತೋರಿಸಿದಳು.

"ಹತ್ತು ನಿಮಿಷವೆಂದರೆ ಹತ್ತೇ ನಿಮಿಷ ಪ್ರಭಾಕರರಾಯರೆ.... ಇನ್ನು ಅರ್ಧ ಘಂಟೆಯಲ್ಲಿ ಧನುರ್ರತ್ನಾಕರ ಭಯಂಕರಾಚಾರ್ಯರಲ್ಲಿ ನನಗೆ ಚಹವಸತ್ಕಾರವಿದೆ; ಹೋಗಬೇಕಾಗಿದೆ. ಈಗ ನಿಮ್ಮನ್ನು ಯಾವುದಕ್ಕಾಗಿ ಕರೆಸಿದೆನೋ ಅದನ್ನು ಚುಟುಕಾಗಿ ತಿಳಿಸಿಬಿಡುತ್ತೇನೆ"

"ಸಿದ್ಧನಾಗಿದ್ದೇನೆ"

"ಸಿದ್ಧರಾಗಿ ಕಿವಿಯನ್ನೂ ತೆರೆದು ಎದೆಯನ್ನೂ ತೆರೆದುಕೇಳಿರಿ"

"ಕೇಳುತ್ತಿದ್ದೇನೆ"

"ಬೇರೆ ಬೇರೆ ಉದ್ದೇಶಗಳಿಂದ ನಾವಿಬ್ಬರೂ ಇಲ್ಲಿಗೆ ಸೇರಿದ್ದೇವೆ; ಅಲ್ಲವೆ?"

"ಹೌದು"

"ನೀವು ಪುರುಷರು, ನಾನು ಸ್ತ್ರೀ; ಅಲ್ಲವೆ?"

ಪ್ರಭಾಕರ ನಕ್ಕ.

"ನೀವು ಇಲ್ಲಿಂದ ನಿಮ್ಮೂರಿಗೆ ಪ್ರಯಾಣ ಮಾಡುತ್ತೀರಿ"

"ಹೌದು"

"ಹೋದ ಮೇಲೆ ನಿಮ್ಮ ಅರ್ಧಾಂಗಿಯಲ್ಲಿ ನಮ್ಮ ಈ ಹತ್ತು ನಿಮಿಷದ ಭೇಟ್ಟಿಯ ಕುರಿತು ಏನೆನ್ನುತ್ತೀರಿ?"

ಪ್ರಭಾಕರನಿಗಿದು ಉತ್ತರಿಸಲಾರದ ಪ್ರಶ್ನೆ.

"ಈಗ ನಾನು ಅತಿರೇಕಿಸಿ ವರ್ತಿಸುತ್ತೇನೆಂದು ಭಾವಿಸಿರಿ; ಆಗ ಏನೆನ್ನುತ್ತೀರಿ?"

ಉತ್ತರವಿಲ್ಲ.

"ನೀವು ನಿಮ್ಮ ಬೆಂಗಳೂರಿನ ಪ್ರಯಾಣ ಕಥೆಯನ್ನು ನಿಮ್ಮ ಪ್ರೀತಿಯ ಕಾಮಿಗೆ ವರ್ಣಿಸಿ ಹೇಳುವಾಗ, ಪ್ರಭಾಕರ ಭಾಮೆಯರ ಹತ್ತು ನಿಮಿಷದ ಏಕಾಂತ ಸಂಗತಿಯನ್ನು ಹೇಳುವುದೇ ಇಲ್ಲ—ಎಂದು ಭಾವಿಸಿರಿ.

ಹೇಳದಿದ್ದರೆ ಮಹಾಪರಾಧವೇ?"—ಪ್ರಭಾಕರನ ಎದೆಗೆ ಬರ್ಚಿಯಿಂದ ತಿವಿದಹಾಗಾಯಿತು.

"ನಿಮಗೂ ಆತ್ಮವಿದೆ; ನನಗೂ ಇದೆ. ನನ್ನದು ಆತ್ಮವನ್ನು ನಿಮ್ಮ ಸದಾತ್ಮವು ಇದಿರಿಸಿ ಮರ್ಕಿಸಿತೆಂದು ಭಾವಿಸಿಕೊಳ್ಳಿ. ಇಂತಹ ಒಂದು ಘಟನೆಯುನ್ನು ನೀವು ನಿಮ್ಮ ಅರ್ಧದೇಹಕ್ಕೆ ತಿಳಿಸುವುದಿಲ್ಲ; ಇದು ಮಹಾಪರಾಧವಾಗುವುದೇ?"

ಪ್ರಭಾಕರ ಮತ್ತೂ ಉತ್ತರಕೊಡುವ ಗೊಡವೆಗೆ ಹೋಗಲಿಲ್ಲ.

ಉತ್ತರಕೊಡಿ ಪ್ರಭಾಕರ ರಾವ್! ನೀವು ತಿಳಿದವರು; ಪದವೀಧರರು; ಸಂಪಾದಕರು; ಉತ್ತಮಾದರ್ಶ ಸಾಧನೆಯ ಪಥದಲ್ಲಿ ಹಜ್ಜೆಯಿಟ್ಟವರು; ನಾಲಗೆಯುನ್ನು ಕಚ್ಚಿ ಕುಳಿತಿರುವಿರೇಕೆ?"

ನಾಲಗೆಯುನ್ನು ಕಚ್ಚಿದುದು ಮಾತ್ರವಲ್ಲ; ಪ್ರಭಾಕರ ಮುಖವನ್ನು ಬಾಗಿಸಿದ.

"ನೀವು ಈ ಸಂಗತಿಯುನ್ನು ಕಾವನಾಕ್ಷಿಗೆ ತಿಳಿಸದೆ ಕೆಲದಿನಗಳನ್ನು ಕಳೆಯುತ್ತೀರಿ; ನಿರುದ್ಯೋಗಿಗಳಾದ ವಾರ್ತಾ ಲೇಖಕರಿಗೆ ಕೆಲಸ ಸಿಕ್ಕುತ್ತದೆ. ಅವರು ಮಾರ್ಮಿಕವಾಗಿ ಹೆಸರೆತ್ತದೆ, ನಮಗೆ ಅಪಮಾನವಾಗುವಂತೆ ಪತ್ರಿಕೆಗಳಲ್ಲಿ ಬರೆಯುತ್ತಾರೆ........ಎಂದು ಭಾವಿಸಿರಿ. ಇದರಿಂದ ನನ್ನ ನಿಮ್ಮ ಮಾನವು, ನಿಜವಾದ ಮಾನದ ಅರಿವು ನಮಗಿದ್ದರೆ ಅದು, ಭಂಗಹೋದುವುದೇ?

"ಇಲ್ಲ."

"ಹಾಗೆನ್ನಿ. ಉತ್ತರ ಕೊಡಲು ಅಭ್ಯಾಸಿಸಿರಿ. ಹೀಗೆ ಅದುವರೆಗೆ ಹೇಳುವುದು ಅವಶ್ಯವಾಗಿ ತೋರದ ಸಮಾಚಾರವನ್ನು ಮತ್ತೆ ನೀವು ಆ ಕಾಮಿಗೆ ತಿಳಿಸುತ್ತೀರಿ; ಇದರಲ್ಲಿ ಅಪರಾಧವುಂಟೇ?"

"ಇಲ್ಲ!"

"ಮೊದಲು ಹೇಳಲಿಲ್ಲ; ಮತ್ತೆ ಹೇಳಿದರು—ಎಂಬ ಕಾರಣದಿಂದ ನಿವಮ್ಮಾಕೆ ನಿಮ್ಮಿಂದ ದೂರಪಾಗಬೇಕೆ?"

"ಕೂಡದು!"

"ಕಾಮಾಕ್ಷಿ ಅನ್ಯಥಾ ಕಲ್ಪನೆಗೆ ಎಡೆಕೊಡಲಾರಳೆಂದು ನೀವು ಮೊತ್ತಮೊದಲು ಹೇಳಲಿಲ್ಲ. ಕೆಡುಕರು ಏನೇನೋ ಹೇಳುತ್ತಿದ್ದಾರೆ; ಸತ್ಯ ಸಂಗತಿಯನ್ನು ಯಥಾವತ್ತಾಗಿ ಮತ್ತೆ ತಿಳಿಸುತ್ತೀರಿ; ಮೊದಲು ತಿಳಿಸ ಲಿಲ್ಲ; ಮತ್ತೆ ತಿಳಿಸಿದರು; ತನ್ನು ಗುಟ್ಟು ರಟ್ಟಾದ ಮೇಲೆ ತಿಳಿಸಿದರು— ಎಂದು ಯೋಚಿಸಿಕೊಂಡು ಆಕೆ ತನ್ನ ಮನಸ್ಸನ್ನು ಕಷಾಯಗೊಳಿಸ ಬೇಕೇ?"

"ಕೂಡದು!"—ಪ್ರಭಾಕರನ ಮುಂದೆ ಹೊಸ ಲೋಕವೊಂದು ಗೋಚರಿಸಿದಂತಾಯಿತು.

"ಹಾಗೆನ್ನಿ! ಕೂಡದು. ಕಾಮಿ ಮಾಡಬಾರದಾಗಿದ್ದುದನ್ನು ನೀವೂ ಮಾಡಬಾರದಷ್ಟೆ!"

"ಬಾರದು!"

"ಇನ್ನೊಂದು ಪ್ರಶ್ನೆಯನ್ನು ಕೇಳುತ್ತೇನೆ. ಗಂಡಹೆಂಡಿರು ಪರಸ್ಪರ ವಿಶ್ವಾಸದಲ್ಲಿಯೇ ಇದ್ದು ಪರಸ್ಪರವಾಗಿ ವಂಚಿಸಬಹುದು ಎಂಬ ಸಂಭವ ವನ್ನು ಒಪ್ಪಿಕೊಳ್ಳುತ್ತೀರಾ?"

"ಒಪ್ಪಿಕೊಳ್ಳುತ್ತೇನೆ!" ಒಪ್ಪಿಕೊಳ್ಳದಿರುವುದಾದರೂ ಹೇಗೆ?

"ಆದುದರಿಂದ, ಮಾತಿನಲ್ಲಿ ಏನೂ ಇಲ್ಲ. ಕೃತಿಯೇ ಸರ್ವಸ್ವ ಎಂಬುದನ್ನು ನೀವೂ ಒಪ್ಪಿಕೊಳ್ಳುತ್ತೀರಲ್ಲ?"

"ಹೌದು!"

"ಈಗ ನಾವು ಸುಲಭವಾಗಿ ಈ ತರ್ಕದ ಕೊನೆ ಮುಟ್ಟುವೆವು. ಕಾಮಾಕ್ಷಿಯ ನಡತೆಯಲ್ಲಿ ಯಾವ ಲೋಪ ದೋಷಗಳನ್ನು ಕಂಡಿದ್ದೀರಿ?"

"ಏನೂ ಇಲ್ಲ!"

"ಕೇವಲ ತರ್ಕ ಸೌಕರ್ಯಕ್ಕಾಗಿ ಇನ್ನೊಂದು ಪ್ರಶ್ನೆ ಕೇಳುತ್ತೇನೆ. ಕಾಮಿಯೂ ನೀವೂ ಅಭೇದತೆಯಿಂದ ಬಾಳುತ್ತಿದ್ದಾಗಲೂ, ನಿಮ್ಮಲ್ಲಿ ಒಬ್ಬ ರಿಗೆ ದುರ್ಮನಸ್ಸು ಇರುತ್ತಿದ್ದರೆ, ನೀವು ಅನೀತಿಗೆ ಇಳಿದು ಇನ್ನೊಬ್ಬರನ್ನು ಠಕ್ಕಿಸುವುದು ಸಾಧ್ಯವಾಗಿದ್ದಿತಲ್ಲವೆ?"

"ಹೌದು!"

"ನಿಮ್ಮಲ್ಲಿ ಒಬ್ಬರು ಶುದ್ಧರಾಗಿಯೇ ಇದ್ದು ಇನ್ನೊಬ್ಬರ ಅಲ್ಪ ಬುದ್ಧಿಯ ದೆಸೆಯಿಂದ ಸಂದೇಹ ಪಾತ್ರರಾಗಲೂ ಬಹುದು ?"

"ಬಹುದು !"

"ಇಂದು ತರ್ಕದ ಸರಣಿಯನ್ನು ಹಿಡಿಯಬಲ್ಲ ಬುದ್ಧಿ ಅಂದೇಕೆ ಇರಲಿಲ್ಲ—ಪ್ರಭಾಕರ....ಆ ಹೆಣ್ಣಿದೆಗೆ ಏನು ಯಾತನೆ ಕೊಟ್ಟೆ? ರಾತ್ರಿ ಮಲಗಿದ್ದಾಗ ಕೊರಳು ಹಿಸುಕಿ ಕೊಂದುಬಿಡಬಹುದಾಗಿತ್ತು. ಅನ್ನಕ್ಕೆ ವಿಷಹಾಕಬಹುದಾಗಿತ್ತು. ಹಾಗೇನೂ ಮಾಡದೆ ನಿನ್ನ ಅಲಕ್ಷ್ಯ—ಅಲ್ಲ ಸಂದೇಹದಿಂದ ಅವಳನ್ನು ಹೆಣವಾಗಿ ಮಾಡುವೆಯಲ್ಲ ?"

ಪ್ರಭಾಕರನ ಕಣ್ಣುಗಳಲ್ಲಿ ನೀರು—ಕತ್ತಲೆ.

"ಪ್ರಪಂಚವನ್ನು ನೋಡು. ಜನ ಕೋಟಿಯನ್ನು ನೋಡು; ಎದೆ ಎದೆಗಳನ್ನು ಹುಡುಕು....ಎಷ್ಟು ದುರಾಶೆಗಳು! ಎಷ್ಟು ದುರ್ವಾಸನೆಗಳು. ಎಷ್ಟು ಸತ್ಯಾಭಾಸಗಳು....ಒಳ್ಳೆಯದೆನೋ ಚಿನ್ನದಗಣಿಯ ಅದುರು; ಕಂಡುಹಿಡಿಯಬೇಕು; ಎತ್ತಿ ತೆಗೆಯಬೇಕು; ಚಿನ್ನದ ರೂಪಕ್ಕೆ ತರಬೇಕು. ನಿನ್ನ ಕಾಮಾಕ್ಷಿ ಚಿನ್ನ....ಅದರ ಬೆಲೆಯನ್ನು ನಾನು ಕಂಡಿದ್ದೇನೆ."

"ತಾಯಿ ! ಹೆಚ್ಚು ಮಾತಾಡಬೇಡ ! ನನ್ನ ತಲೆ ತಿರುಗುತ್ತದೆ !"

"ತಿರುಗಬೇಕು ಪ್ರಭಾಕರ ! ತಲೆಯಾದರೂ ತಿರುಗಬೇಕು; ಬುದ್ಧಿ ಬಲು ದೂರ ತಿರುಗಾಡಿ ಪ್ರಪಂಚದ ಏರುತಗ್ಗುಗಳನ್ನೂ ಸೊಗಸು ಕೆಡುಕುಗಳನ್ನೂ ಅದರದರ ನೆಲೆಯಲ್ಲಿ ನಿಂತು ನಿರುಕಿಸುವುದಕ್ಕೆ ಕಲಿಯಲಿಲ್ಲ. ತಲೆಯಾದರೂ ತಿರುಗಿ ಲೋಕದ ಅಲ್ಪ ಜ್ಞಾನ ಪಡೆಯಲಿ !"

ಪ್ರಭಾಕರನು ಕಣ್ಣಿಗೆ ಕೈಮುಚ್ಚಿ ಅಳುತ್ತಿದ್ದ........

"ಪ್ರಭಾಕರರಾಯರೆ ! ಹತ್ತು ನಿಮಿಷ ಕಳೆದುಹೋಯಿತು; ಗಂಡ ಹೆಂಡಿರ ಸಂಬಂಧದಲ್ಲಿ ಅಧಿಕ ಪ್ರಸಂಗ ಮಾಡಿದೆನೆಂದು ಭಾವಿಸಬೇಡಿರಿ. ಒಂದು ವೇಳೆ ಭಾವಿಸಿದರೆ ನನಗೆ ಯಾವ ಭಯವೂ ಇಲ್ಲ. ನಿನ್ನ ಕಾಮಿಯಂತಹ ಹತ್ತು ಮಂದಿ ಪುತ್ರಿಯರನ್ನು ಪಡೆಯುವ ಭಾಗ್ಯ ಈ ಭರತ ಭೂಮಿಗೆ ಇಲ್ಲದೆ ಹೋಯಿತು !" ಎನ್ನುತ್ತ ಭಾಮೆ ಹೊರಡುವುದಕ್ಕೆ

ಸಿದ್ಧಳಾದಳು. ಕೋಣೆಯ ಹೊರಗೆ ಕಾಲಿಟ್ಟಳು ಸೇವಕನು ಬೀಗ ಹಾಕುವುದಕ್ಕೆ ಬಂದಾಗಲೆ ಪ್ರಭಾಕರ ಮರವೆಯನ್ನು ಬಿಟ್ಟು ಸುತ್ತಲೂ ನೋಡಿದನು. ಭಾಮೆ ಮಾಯವಾಗಿದ್ದಳು. ಮಿಂಚಿನಂತೆ ಹೊಡೆದು ಮಾಯವಾದಳು! ಮಿಂಚುಹೊಡೆದ ಸ್ಥಳ ಸುಟ್ಟು ಕರಿಕಿಹೋಗಿತ್ತು. ತಾನೆಂತಹ ಅಪರಾಧಿ! ಎಂತಹ ಪಾಪಿ! ಇನ್ನು ಮುಂದೆ ತಪ್ಪಿಬೀಳು ವುದಿಲ್ಲ ಎಂದು ಎದೆಯ ಕಿಚ್ಚನ್ನು ಊದಿನಂದಿಸುವುದಕ್ಕಾಗಿ ಪೇಚಾಡುತ್ತಾ ತನ್ನ ಕೋಣೆಯೊಳಗೆ ನುಗ್ಗಿ ಹಾಸಿಗೆ ಹಿಡಿಯುವುದರಲ್ಲಿದ್ದ. ಆಗ ಅವನ ಮೇಜಿನ ಮೇಲೆ ಪರಿಚಿತವಾದ ಅಕ್ಷರಗಳಲ್ಲಿ ವಿಳಾಸವನ್ನು ಕಾಣಿಸುತ್ತಿದ್ದ ಪತ್ರವೊಂದು ಬಿದ್ದಿತ್ತು. ಕಣ್ಣು ಅಕ್ಷರಗಳ ಮೇಲೆ ಬೀಳುವ ಮುಂಚೆ ಹೃದಯವು ಒಳಗೆ ಪ್ರವೇಶಿಸಿ ಊಹೆಯನ್ನು ಓದತೊಡಗಿತು. "ಕಾಮಿಗೆ ಕ್ಷೇಮವಷ್ಟೆ? ತನ್ನ ತಿರಸ್ಕಾರದಿಂದ ಪ್ರಾಣವನ್ನು ಬಿಡಲಿಲ್ಲವಷ್ಟೆ?"

ಪತ್ರವನ್ನು ಓದಿದ: ಆಕಾಶವು ಒಡೆದು ಭೂಮಿಯು ಬಾಯಿತೆರೆದು ಎಲ್ಲ ಕಡೆಗಳಿಂದಲೂ ಅಗ್ನಿಜ್ವಾಲೆಗಳು ತನ್ನ ಒಬ್ಬನ ಮೇಲೆ ಗುರಿಹಿಡಿದು ಬೀಳುವಂತಾಯಿತು....

"ನನ್ನ ಆ ಕಾಮಸಾಕ್ಷಿ ಇನ್ನೆಲ್ಲಿ? ಇಷ್ಟರಲ್ಲಿಯೋ ಅವಳು ಭೂತ ಕಾಲದ ಒಡೆತನಕ್ಕೆ ಸೇರಿರಬಹುದು....ಅಥವಾ ಶ್ಯಾಮಣ್ಣ ಬರೆದ ವರ್ಣನೆ ಯಿದು. ಇದರಲ್ಲಿ ಕಾವ್ಯಭಾಷೆ ಹೆಚ್ಚಿರಬಾರದೇಕೆ? ಪರಿಸ್ಥಿತಿ ಇಷ್ಟು ಘೋರವಾಗಿರಬಹುದೆ? ನಮ್ಮ ಸಹೋದರನಂತೆ ಬಾಳಿಬಂದಾತ ನಮ್ಮಿಬ್ಬರ ಸಮಾಗಮವನ್ನಪೇಕ್ಷಿಸಿ, ಕಲ್ಲಾದ ನನ್ನೆದೆಯನ್ನು ಕರಗಿಸು ವುದಕ್ಕಾಗಿ ಈ ಹಿಡಿಮದ್ದಿನ ಪ್ರಯೋಗವನ್ನು ಮಾಡಿರಬಾರದೇಕೆ?" ಎಂದೂ ತೋರಿತು. ಆದರೆ ಅಂತರಾತ್ಮವು ದುರಂತದ ಕಡೆಗೆ ಬೆಟ್ಟು ತೋರಿಸಿ, "ಪ್ರಭಾಕರ....ಕಾಮಿ ಎಂದರೆ ಬರಿಯ ನೆನಪಾಗಿ ಹೋದಳು. ನಿನ್ನ ದೌರ್ಜನ್ಯಕ್ಕೆ ಆಹುತಿಯಾದಳು; ನಿನ್ನನ್ನೂ ಒಳಕೊಂಡ ಲೋಕದ ಕಣ್ಣಿನ ಸೋಂಕಿನಿಂದ ನಿನ್ನ ಕಾಮಿ ಬಾಡಿಹೋದಳು" ಎಂದು ಸಾರಿ ಹೇಳುತ್ತಿತ್ತು.

೩೩

ಕಾಮಾಕ್ಷಿಯದು ಬರಿಯ ಮೂರ್ಛಾರೋಗವಲ್ಲ; ವಿರಹ ಮೂರ್ಛೆಯದು. ಅದಕ್ಕೆ ಔಷಧೋಪಚಾರ ಮಾಡುವ ಶಕ್ತಿ ಒಬ್ಬನೇ ಒಬ್ಬನಲ್ಲಿತ್ತು; ಪ್ರಭಾಕರನಲ್ಲಿ! ಅವನು ಸಮೀಪದಲ್ಲಿಲ್ಲ; ಅವಳೊಪ್ಪಿಸಲಿದ್ದ ತನ್ನ ಒಡವೆಯನ್ನು ಒಪ್ಪಿಕೊಳ್ಳುವ ವರೆಗಾದರೂ ಆ ವೈದ್ಯನು ಅಲ್ಲಿರುತ್ತಿದ್ದರೆ, ಅದುವರೆಗೂ ಬಾಳಿ, ತಮ್ಮಿಬ್ಬರ ನಿಧಿಯಾದ ಆ ಮುದ್ದು ಮಗುವಿನ ನಗುವನ್ನು ನೋಡುವುದಕ್ಕಾದರೂ ಬದುಕುತ್ತಿದ್ದಳೇನೋ....ಸಮೀಪದಲ್ಲಿ ಇರದಿದ್ದರೂ ಒಂದೆರಡು ಪ್ರೇಮದ ಅಕ್ಷರಗಳನ್ನು ಪತ್ರದಲ್ಲಿಟ್ಟು ಕಳುಹಿಸಿದ್ದರೆ ಬದುಕುತ್ತಿದ್ದಳೇನೋ....ಅಷ್ಟೂ ಬೇಕಾಗಿರಲಿಲ್ಲ....ಕಾಮಿ ಹೇಗಿದ್ದಾಳೆ? ಎಂಬ ಎರಡೇ ಪದಗಳನ್ನು— ಶುಷ್ಕಪದಗಳನ್ನು— ಹರುಕು ಕಾಗದದಲ್ಲಿ ಗೀಚಿ ಕಳುಹಿಸಿದ್ದರೆ, ಅವುಗಳನ್ನೋದಿ "ಹೀಗಿದ್ದೇನೆ" ಎಂದು ತೋರಿಸುವುದಕ್ಕಾದರೂ ಅವನು ಬರುವವರೆಗೆ ಜೀವಕ್ಕೆ ಅಂಟಿಕೊಳ್ಳುತ್ತಿದ್ದಳೇನೊ....ಅಂತಹ ಯಾವ ಚಿಕಿತ್ಸೆಯೂ ಆಗಲಿಲ್ಲ. ಅಷ್ಟನ್ನಾದರೂ ಕೊಡಬೇಕೆಂದು ಪ್ರಭಾಕರನಿಗೆ ತೋರಲಿಲ್ಲ. ಕಾಮಾಕ್ಷಿ ಮತ್ತೇನೂ ಆಗಿರಬಹುದು; ಅಥವಾ ಅಲ್ಲದಿರಬಹುದು; ಅಭಿಮಾನದ ಪಿಂಡ; ಈ ಸ್ಥಿತಿಯಲ್ಲಿ ಬದುಕುತ್ತಿರಲಿಲ್ಲ. ಜೀವಜ್ಯೋತಿ ಮಿಣಮಿಣನೆ ಉರಿದು ಆರದಿರುವ ಲಕ್ಷಣವನ್ನು ತೋರಿಸಿದ್ದರೆ 'ಉಪ್ಪೆ'ಂದು ಊದಿ ನಂದಿಸಿ ಬಿಡುತ್ತಿದ್ದಳು. ಅವನ ಸೊತ್ತನ್ನು ಅವನಿಗೆ ಒಪ್ಪಿಸುವವರೆಗೆ, ಹಿಂದೆ ಹಿಂದೆ ಕಾಲು ಕೀಳುತ್ತಿದ್ದ ಜೀವವನ್ನು ಮುಂದೆ, ಮುಂದೆ ದೂಡಬೇಕಾಯಿತು. ಕೊನೆಗೂ ಅವನು ಬರಲಿಲ್ಲ. ಪ್ರಸೂತಿ ವೇದನೆಯ ಮಧ್ಯದಲ್ಲಿಯೂ ಅವರು ಬರಲಿಲ್ಲವೆ? ತಮ್ಮದಕ್ಕೆ ಕೈನೀಡುವುದಿಲ್ಲವೇ ಎಂದು ಕೇಳಿದಳಂತೆ. ಮತ್ತೆ ಒಂದು ದಿನ ನಿರೀಕ್ಷಿಸಿದಳಂತೆ. ಮಗುವನ್ನು ಎತ್ತುವುದಕ್ಕಾಗಲಿಲ್ಲ. ಹೇಗೂ ಪ್ರಯಾಸದಿಂದ ಎತ್ತಿ ಒಮ್ಮೆ ಮೊಲೆಯೂಡಿ "ಮಗೂ ಈ ಪ್ರಪಂಚದಲ್ಲಿ ನನಗೂ ನಿನಗೂ ಇರುವ ಋಣಾನುಬಂಧ ಇಷ್ಟೆ!" ಎಂದಳಂತೆ. ಮಗು ಅತ್ತಾಗ....ನಗುವುದಕ್ಕಿಂತ ಮುಂಚೆ

ಅಳುವುದಕ್ಕೆ ಕಲಿತಿಯಲ್ಲ....ಎಂದು ತಾನು ನಕ್ಕಳಂತೆ. ಇಷ್ಟು ನಡೆ ದುದು ಅವಳ ವೇದನೆಯ ಮಧ್ಯದಲ್ಲಿ. ಮತ್ತೊಮ್ಮೆ ಮೂರ್ಛೆ; ಅದು ಅವಳನ್ನು ಬಿಡಲಿಲ್ಲ; ಅಥವಾ ಅವಳು ಆ ಮೂರ್ಛೆಯನ್ನು ಬಿಟ್ಟು ಎದ್ದು ಬರಲು ಒಪ್ಪಲಿಲ್ಲ.

ಆಗ ಅಲ್ಲಿಯೇ ಇದ್ದ ಕೇಶವಯ್ಯನವರ ಬಾಯಿಯಿಂದ ಮಾತುಗಳು ಮಾಯವಾಗಿದ್ದುವು. ಮೌನದ ಭಾರವು ಕುಳಿತಲ್ಲಿಂದ ಏಳದಂತೆ ಮಾಡಿತ್ತು. ಸುಶೀಲಮ್ಮನಿಗೆ ಕಾಮಿ ಎತ್ತಿಹಿಡಿದ ಕೂಸಿನ ಭಾವಚಿತ್ರ ವನ್ನು ನೋಡುವ ಆಶೆಯಿತ್ತು. ಅದು ಫಲಿಸಲಿಲ್ಲ—ಎಂದು ಗೋಳಿ ಟ್ಟಳು. "ಅಯ್ಯೊ ಮಗು! ನನ್ನ ಕೈಗೆ ಈ ಎಳೆ ಮೊಗ್ಗೆಯನ್ನು ಕಿತ್ತು ಬಿಸಾಡಿ ಹೋದೆಯಲ್ಲವೇ?" ಎಂದು ನಾನಾ ಧ್ವನಿಭಂಗಗಳಲ್ಲಿ, ತನ್ನ ಹೊಣೆಗಾರಿಕೆಯ ಭಾರದ ಘೋರತೆಯನ್ನು ವರ್ಣಿಸುತ್ತಾ ದೀರ್ಘಕಾಲ ಹಲುಬಿದಳು. ಕೆಲವರು ಅಧಿಕ ಪ್ರಸಂಗ ಎಂದಿರಬಹುದು. ನಿರ್ಜೀವ ವಾದ ಮಾಂಸ ಮೂರ್ತಿಯಲ್ಲವೆ? ಈಕೆ ಜೀವಂತಳಾಗಿದ್ದಾಗ, ಬಿಡ ದವರು ಸತ್ತಮೇಲೇಕೆ ಅಪಹಾಸ್ಯ ಮಾಡದಿರಬೇಕು? ಮಾಡಲಿ; ಅದರ ನೋವು ಅವಳಿಗೂ ತಾಗದು—ನನಗೂ ತಾಗದು ಎಂದು ಶ್ಯಾಮಣ್ಣ ಅವಳ ಕಾಲಿಗೆ ಅಡ್ಡ ಬಿದ್ದು "ತಾಯಿ! ನನಗೆ ಹೆತ್ತತಾಯಿಯನ್ನು ಕಳೆದುಕೊಂಡ ಯಾತನೆಯ ಅನುಭವವಿರಲಿಲ್ಲ; ಇಂದಾಯಿತು!" ಎಂದು ಪ್ರಣಾಮ ಮಾಡಿದನಂತೆ. ಡಾ. ನಾಗೇಶರಾಯನು ನಾನು ಸಾಧ್ಯವಾದುದನ್ನೆಲ್ಲ ಮಾಡಿದೆ. ದೇವರು ಅಡ್ಡಬಂದ—ಎಂದು ಬರಿಯ ನಿಟ್ಟುಸಿರನ್ನು ಕರೆದ; ದೂರಿಲ್ಲ ದೇವರ ಮೇಲೆ!

ಸ್ಥಳೀಯ ಪತ್ರಿಕೆಗಳು—ನಗರದ ಆದರ್ಶ ಮಹಿಳೆಯ ಅಕಾಲ ನಿಧನಕ್ಕಾಗಿ ನಿರರ್ಗಳವಾದ ಅಶ್ರುಧಾರೆಯನ್ನು ಸುರಿಸಿದ್ದುವು. ಇಂತಹ ಮಹಿಳಾ ರತ್ನವನ್ನು ಇಟ್ಟುಕೊಳ್ಳುವ ಯೋಗ್ಯತೆ ನಮ್ಮ ನಾಡಿಗೆ ಇರಬೇಕೆ? ತೆಂದೂ ಪ್ರಶ್ನಿಸಿದ್ದುವು.

ಪ್ರಭಾಕರನು ಬೆಂಗಳೂರಿನ ಪ್ರಯಾಣವನ್ನು ಮುಗಿಸಿಬಂದಾಗ ಕೊನೆ ಮಸಣವಾಗಿತ್ತು. ಇಲ್ಲ; ಇಲ್ಲ; ಅವಳಿಲ್ಲ; ಆ ನಿನ್ನ ಕಾಮಿಯೀಲ್ಲ;

ಆ ಅಭಿಮಾನದ ಗಟ್ಟಿ ಕರಗಿಹೋಯಿತು; ಗಾಳಿಯಲ್ಲಿ ಸೇರಿಹೋಯಿತು; ಬೆಳಕಿನಲ್ಲಿ ಕೂಡಿಹೋಯಿತು; ಮಣ್ಣಿನಲ್ಲಿ ಒಂದಾಯಿತು—ಎಂದು ಮನೆಯ ಗೋಡೆ ಮೂಲೆಗಳು ಸಾರಿ ಹೇಳುತ್ತಿದ್ದುವು. ಪ್ರಭಾಕರನ ಕಣ್ಣು ಒದ್ದೆಯಾಯಿತೋ ಎದೆಯೇ ಕರಗಿ ಇಂಗಿಹೋಯಿತೋ ತಿಳಿಯಲಿಲ್ಲ.

"ನಾನು ಅಗಲಿದೆನೆಂದು ನನ್ನ ಒಂದು ಕಿರುಮೂರ್ತಿಯನ್ನು ಎದೆಯಲ್ಲಿಟ್ಟು ಇಷ್ಟು ತಿಂಗಳು ಪೂಜಿಸಿ ಹೊರಟುಹೋದೆಯಲ್ಲ ಶಾಮಿ! ಅಥವಾ ನಿನ್ನ ಜೀವಭಾವಗಳೂ ನನ್ನ ಜೀವಭಾವಗಳೂ ಒಂದಾಗಿ ಈ ಪ್ರತಿಮೆಯಲ್ಲಿರುವಾಗ ನೀನು ಹೋದೆಯೆಂಬ ಮಾತು ಸುಳ್ಳಲ್ಲವೆ?" ಎಂದು ತೊಟ್ಟಿಲಲ್ಲಿ ಮಲಗಿದ್ದ ಈ ಚಿಕ್ಕ ಮಗುವನ್ನು ಎತ್ತಿ ಎದೆಗೆ ಅಪ್ಪಿಕೊಂಡ.

ಸಂಗ್ರಾಮ ಪತ್ರಿಕೆ ಸ್ವತಂತ್ರವಾಗಿ ಸರ್ವಾಂಗ ಸುಂದರವಾಗಿ ಆರ್ಥಿಕ ಶಕ್ತಿ ತೇಜಸ್ಸುಗಳಿಂದ ಮಿಂಚುತ್ತಿತ್ತು. ಪ್ರಭಾಕರನೂ ಶ್ಯಾಮಣ್ಣನೂ ಕೂಡು ಬಳಗವಾಗಿ ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಸಾಂತಮ್ಮನ ಮನೆದೇವರ ಪೀಡೆ ಮತ್ತೆ ಕಾಣಿಸಿಕೊಳ್ಳಲಿಲ್ಲ. "ಈ ಮುದ್ದು ಮಗು ಶಾಮಿಯ ಕುರ್ಚಿಯ ಮೇಲೆಯೆ ಕುಳಿತು ಸಮಾಜವನ್ನು ಬಡಿದೆಬ್ಬಿಸುವ ಲೇಖನಗಳನ್ನು ಬರೆಯುವ ಮುಂಚೆ–ಈ ಕಸಬರಿಗೆ ಸವೆದು ಹೋಗದು ಅಣ್ಣ"–ಎಂದು ಪ್ರಭಾಕರನಲ್ಲಿ ಹೇಳುತ್ತಾ ಶ್ಯಾಮಣ್ಣ ಕಣ್ಣುಗಳನ್ನು ಒರಸುತ್ತಿದ್ದ.

---

Canara Printing & Publishing House. Ltd, Pentlandpet Mangalore.